# ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ಪರಿಕಲ್ಪನೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ರಾಜೇಶ್ವರಿ ಜಿ. ದೊಡ್ಡಬಸನಗೌಡ

ಮಾರ್ಗದರ್ಶಕರು
ಡಾ.ಸುಚೇತ ನವರತ್ನ
ಸಹಾಯಕ ಪ್ರಾಧ್ಯಾಪಕರು



736

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬
೨೦೧೬

736

# ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ಪರಿಕಲ್ಪನೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ರಾಜೇಶ್ವರಿ ಜಿ. ದೊಡ್ಡಬಸನಗೌಡ

ಮಾರ್ಗದರ್ಶಕರು
ಡಾ.ಸುಚೇತ ನವರತ್ನ
ಸಹಾಯಕ ಪ್ರಾಧ್ಯಾಪಕರು

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ,ಹಂಪಿ.




ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

AKSHARA GRANTHALAYA

ACC.NO.132312

# ಸಂಶೋಧಕರ ಘೋಷಣಾ ಪತ್ರ

**ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ಪರಿಕಲ್ಪನೆ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ, ಪ್ರಾಧ್ಯಾಪಕರಾದ **ಡಾ.ಸುಚೇತ ನವರತ್ನ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ರಾಜೇಶ್ವರಿ ಜಿ.ದೊಡ್ಡಬಸನಗೌಡ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ: ವಿದ್ಯಾರಣ್ಯ
ದಿನಾಂಕ: 12/09/16

# ಮಾರ್ಗದರ್ಶಕರ ದೃಢೀಕರಣ ಪತ್ರ

**ರಾಜೇಶ್ವರಿ ಜಿ.ದೊಡ್ಡಬಸನಗೌಡ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ಪರಿಕಲ್ಪನೆ** ಎಂಬ ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಸುಚೇತ ನವರತ್ನ**
ಸಹಾಯಕ ಪ್ರಾಧ್ಯಾಪಕರು
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 12/09/16

# ಪರಿವಿಡಿ

ಅಧ್ಯಾಯ ಒಂದು
**ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ** ೧–೭

ಅಧ್ಯಾಯ ಎರಡು
**ಪ್ರಸ್ತಾವನೆ: ವಿಷಯ ಪ್ರವೇಶಿಕೆ** ೮–೨೬
೨.೧. ಇದುವರೆಗಿನ ಅಧ್ಯಯನಗಳ ಸಮೀಕ್ಷೆ
೨.೨. ವಲಸೆ ಪದದ ಅರ್ಥ
೨.೩. ವಲಸೆ ಕುರಿತ ವ್ಯಾಖ್ಯಾನಗಳು

ಅಧ್ಯಾಯ ಮೂರು
**ಸಾಹಿತ್ಯೇತರ ಜ್ಞಾನ ಶಿಸ್ತುಗಳಲ್ಲಿ ವಲಸೆ** ೨೭–೩೫

ಅಧ್ಯಾಯ ನಾಲ್ಕು
**ಸಾಹಿತ್ಯ ಮತ್ತು ವಲಸೆಯ ಅಂತಃಸಂಬಂಧ** ೩೬–೫೧

**ಅಧ್ಯಾಯ ಐದು**
**ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆಯ ವಿಭಿನ್ನ ಆಯಾಮಗಳು** ೫೨–೧೬೮
೫.೧. ವ್ಯಕ್ತಿ ವಲಸೆ
೫.೨. ಕುಟುಂಬ ವಲಸೆ
೫.೩. ಸಮುದಾಯ ವಲಸೆ
೫.೪. ಊರಿನ ವಲಸೆ

ಅಧ್ಯಾಯ ಆರು
**ಅಲೆಮಾರಿ ಸಂಸ್ಕೃತಿ, ವಲಸೆ ಸಂಸ್ಕೃತಿ, ಸ್ಥಿರವಾಸ್ತವ್ಯದ**
**ಸಂಸ್ಕೃತಿಗಳೊಳಗಿನ ಅಂತಃಸಂಬಂಧಗಳ ನೆಲೆಗಳು** ೧೬೯–೨೦೦
೬.೧. ಮೂಲನೆಲೆ ಮತ್ತು ಸ್ಥಿರವಾಸ್ತವ್ಯಗಳ
ಹಂಗಿಲ್ಲದ ಅಲೆಮಾರಿ ಸಂಸ್ಕೃತಿ.
೬.೨. ಮೂಲನೆಲೆ ಮತ್ತು ವರ್ತಮಾನದ ವಾಸ್ತವ್ಯಗಳ
ನಡುವಿನ ವಲಸೆ ಸಂಸ್ಕೃತಿ.

ಅಧ್ಯಾಯ ಏಳು

**ಮಾನವ ಸಮುದಾಯದ ಸಂಸ್ಕೃತಿ ಕಥನವಾಗಿ ವಲಸೆಯ ಅಭಿವ್ಯಕ್ತಿ** ೨೦೧–೨೩೩

೭.೧. ಆದಿಮ ಹಂತದ ವಲಸೆ ಸಂಸ್ಕೃತಿ ಮತ್ತು ವರ್ತಮಾನ ವಲಸೆ ಸಂಸ್ಕೃತಿಗಳ ವಿಭಿನ್ನ ಕಥನ

೭.೨. ವಲಸೆ ಮತ್ತು ಕೃಷಿ ಸಂಸ್ಕೃತಿಯ ಅಂತಃಸಂಬಂಧದ ಕಥನ

೭.೩. ವಲಸೆ ಮತ್ತು ಶ್ರಮ ಸಂಸ್ಕೃತಿಯ ಅಂತಃಸಂಬಂಧದ ಕಥನ

೭.೪. ವಲಸೆ ಮತ್ತು ವ್ಯಾಪಾರೋದ್ಯಮ ಅಂತಃಸಂಬಂಧದ ಕಥನ

ಅಧ್ಯಾಯ ಎಂಟು

**ಸಮಾರೋಪ** ೨೩೪–೨೪೨

**ಸಾಂಸ್ಕೃತಿಕ ಸಂಕಥನವಾಗಿ ವಲಸೆ**

**ಪರಾಮರ್ಶನ ಗ್ರಂಥಗಳು** ೨೪೩–೨೪೯

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

ವಲಸೆ ಮಾನವರ ವಿಕಾಸದಷ್ಟೇ ಪ್ರಾಚೀನ ಹಾಗೂ ಅವಿನಾಭಾವ ಸಂಬಂಧ ಹೊಂದಿರುವ ಒಂದು ವಿಶಿಷ್ಟ ಪರಿಕಲ್ಪನೆ. ಆದರೆ, ಅಮೂರ್ತ ಸ್ವರೂಪದ್ದಲ್ಲ ನಮ್ಮ ನಮ್ಮ ನಡುವೆ ಹಸಿವು, ಬಡತನ, ನಿರುದ್ಯೋಗದಂತೆ ವಲಸೆ ಕೂಡ ಆತ್ಮೀಯ ಪದ. ಬದುಕನ್ನು ಅರಸಿ ಹೊರಡುವ ಎನ್ನುವ ಜನಜನಿತವಾದ ಮಾತು ಅದರ ಅಗತ್ಯತೆಯನ್ನು ಸೂಚಿಸುತ್ತದೆ. ಮಾನವರ ಪ್ರಕೃತಿ ರೂಪದಿಂದ ನಾಗರಿಕತೆ, ನಾಗರಿಕತೆಯಿಂದ ಸಂಸ್ಕೃತಿಯಡೆಗಿನ ಪಯಣ ಅಥವಾ ಕ್ರಮಿಸಿದ ದಾರಿಯಲ್ಲಿ ವಲಸೆಯ ಪಾತ್ರ ಮಹತ್ವದ್ದು. ಯಾವಾಗ ಮನುಷ್ಯರು ಹುಟ್ಟುವ ಅಥವಾ ಬದುಕುವ ಸ್ಥಳಗಳೂ ಬೇರೆಯಾದವೊ ಆಗಲೇ ಇದು ತನ್ನನ್ನು ತಾನು ಅನಾವರಣಗೊಳಿಸಿಕೊಂಡಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಆದಿಮ ಸ್ಥಿತಿಯಿಂದ ಜಾಗತೀಕರಣದವರೆಗಿನ ಒಂದು ನಿರಂತರ ಪ್ರವಾಹವನ್ನು ಇದು ಸೂಚಿಸುತ್ತದೆ. ಅರ್ಥಾತ್ ಮಾನವರ ಪರಂಪರೆಯೊಂದಿಗೆ ಈ ಪದ ಬೆಸೆದುಕೊಂಡಿದೆ. ಬಹುಶಃ ವಲಸೆಯನ್ನು ಮಾನವರ ಪರಂಪರೆಯ ವಿಕಾಸದ ಮೆಟ್ಟಿಲು ಎಂದರೂ ಅತಿಶಯೊಕ್ತಿಯಲ್ಲ ಹೀಗೆ ವಲಸೆ ಹಾಗೂ ಮಾನವರ ಸಂಸ್ಕೃತಿಗೆ ಬಿಡಿಸಲಾಗದ ಬಾಂಧವ್ಯ.

ಇಂತಹ ವಸ್ತು ವಿಷಯವೊಂದನ್ನು ಹಾಗೂ ಅದರ ಸಾಧಕ ಭಾದಕಗಳನ್ನು ವಸ್ತು ನಿಷ್ಠ ಮಾದರಿಗಿಂತ ವರದಿ ರೂಪದ ವಿವರಕ್ಕಿಂತ ಭಿನ್ನವಾಗಿ ಸಂವೇದನ ಪೂರ್ವಕವಾಗಿ ವಲಸೆಯ ಸಂದರ್ಭದ ಆಳ ಅಗಲಗಳನ್ನು ಸಾಹಿತ್ಯದಲ್ಲಿ ಕಾಣಬಹುದಾಗಿದೆ. ವಲಸೆಯ ಬಗೆಗೆ ಸಾಕಷ್ಟು ವಿವರಗಳು ಸಿಗುವಲ್ಲಿಯೂ ಕೂಡ ವಲಸೆಯ ಇಂಚು ಇಂಚು ವಿವರಗಳನ್ನು ಅದರ ಚಲನಾತ್ಮಕ ಧ್ವನಿಗಳನ್ನು ನಿರೂಪಿಸುವ ಲೇಖಕರ ಕಾಲ್ಪನಿಕ ಶಕ್ತಿಯ ರೂಪ ಅಥವಾ ಸತ್ಯ ಘಟನೆಯ ವಾಸ್ತವ ಅಂಶದ ನಪೀರಾದ ಸ್ವರೂಪವನ್ನು ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಮಾತ್ರ ಕಾಣಲು ಸಾಧ್ಯ.

ಇಂತಹ ವಿಶಿಷ್ಟ ಪರಿಕಲ್ಪನೆಯನ್ನು ಲೇಖನದ ವಸ್ತುವಾಗಿ ಅಭಿವ್ಯಕ್ತಿಸಿದ ಹಲವಾರು ಲೇಖಕರ ಮತ್ತು ಕೃತಿಗಳ ಒಂದು ಸಮಗ್ರ ನೋಟವನ್ನು ಅಧ್ಯಯನ ಮಾಡುವ ಅಂದರೆ, ಕನ್ನಡ ಸಾಹಿತ್ಯ ವಲಸೆಯನ್ನು ಹೇಗೆ ಪರಿಭಾವಿಸಿದೆ ಮತ್ತು ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಇಲ್ಲಿದೆ. ಹಾಗೂ ಸಾಹಿತ್ಯೇತರ ಅಧ್ಯಯನ ಶಿಸ್ತುಗಳು ರೂಪಿಸಿಕೊಂಡ ಅಧ್ಯಯನ ಕ್ರಮಕ್ಕೂ ಸಾಹಿತ್ಯ ಕೃತಿಯೊಂದು ರೂಪಿಸುವ ಸಾವಯವ ಪ್ರಕ್ರಿಯೆಗೂ ಇರುವ ಅಂತರವನ್ನು ಶೋಧಿಸುತ್ತಲೇ ಸಾಹಿತ್ಯದ ಹಿರಿಮೆಯನ್ನು/ಮೇಲ್ಮೈಯನ್ನು ಸಾಧಿಸಲು ಪ್ರಯತ್ನಿಸಲಾಗಿದೆ.

ಹಾಗೆಯೆ ಸಾಹಿತ್ಯ ಸಂಸ್ಕೃತಿಯ ಪ್ರಮುಖ ಭಾಗ ಹಾಗೂ ಸಾಮಾಜಿಕ ಪರಿಸರಕ್ಕೆ ಸರಳ ನುಡಿಗಳ ಮೂಲಕ ತಿಳಿಸಿ ಹೇಳುವ ಶಕ್ತಿ ಇರುವುದು ಸಾಹಿತ್ಯಕ್ಕೆ ಮಾತ್ರ. ಸಮಾಜದ ಪ್ರತಿಬಿಂಬವಾಗಿರುವ ಸಾಹಿತ್ಯ, ಜನರ ನಡುವಳಿಕೆಗಳನ್ನು ಆಶೋತ್ತರಗಳನ್ನು ನೇರವಾಗಿ ಅಭಿವ್ಯಕ್ತಿಸುತ್ತದೆ. ಜನರ ಆಚಾರ ವಿಚಾರಗಳ ಮೊತ್ತವಾದ ಸಂಸ್ಕೃತಿಯನ್ನು ಸೂಕ್ಷ್ಮವಾಗಿ ಅವಲೋಕಿಸುವ ವಿಶ್ಲೇಷಿಸುವ ಪಾತ್ರ ಸಾಹಿತ್ಯಕ್ಕೆ ಮಾತ್ರ ಸಾಧ್ಯ. ಹಾಗಾಗಿ ಸಮಾಜ, ಸಾಹಿತ್ಯ ಹಾಗೂ ಸಂಸ್ಕೃತಿ ಒಂದಕ್ಕೊಂದು ಅಂತಃಸಂಬಂದ ಹೊಂದಿದೆ. ಅಷ್ಟೇ ಅಲ್ಲದೇ ಸಾಹಿತ್ಯದಲ್ಲಿ ಸಂಸ್ಕೃತಿ ಚಿಂತನೆಯು ಬಹುಮುಖ್ಯ ಭಾಗ. ಸಮಾಜದ ಹಲವಾರು ವಿಷಯಗಳನ್ನು ಪ್ರತಿಫಲಿಸುವ ಸಾಹಿತ್ಯದ ನಲೆಯಲ್ಲಿಯೇ ಅನೇಕ ಆಯಾಮಗಳಿವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ, ಸಮಾಜ, ಸಂಸ್ಕೃತಿ ಒಂದಕ್ಕೊಂದು ಹೊಂದಿಕೊಂಡಿವೆ.

ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಅಧ್ಯಯನವೂ ಹಲವು ಉದ್ದೇಶಗಳನ್ನು ಒಳಗೊಂಡಿದೆ, ಅವುಗಳೆಂದರೆ,

## ಅಧ್ಯಯನದ ಉದ್ದೇಶಗಳು

೧. ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆಯಂತಹ ಪರಿಕಲ್ಪನೆ ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಕೃತಿಗಳ ಮೂಲಕ ಅರ್ಥೈಸಿಕೊಳ್ಳುವುದು ಅಧ್ಯಯನದ ಮೊದಲ ಪ್ರಮುಖ ಉದ್ದೇಶವಾಗಿದೆ.

೨. ಇತರೆ ಜ್ಞಾನ ಶಿಸ್ತುಗಳಲ್ಲಿ ಅಭಿವ್ಯಕ್ತಗೊಂಡ ವಲಸೆಗಿಂತ ಸಾಹಿತ್ಯದಲ್ಲಿ ವಲಸೆ ಅಭಿವ್ಯಕ್ತಗೊಂಡಿರುವ ಭಿನ್ನತೆಯನ್ನು ಗುರುತಿಸುವುದು.

೩. ಕಥಾಹಂದರದಲ್ಲಿ ಮೂಡಿಬಂದಿರುವ ವಲಸೆಯ ಕುರಿತಾದ ಚಿತ್ರಣವನ್ನು ಗ್ರಹಿಸಿ ವಲಸೆಯನ್ನು ಒಂದು ವಿಶಿಷ್ಟ ಪರಿಕಲ್ಪನೆಯಾಗಿ ಪರಿಭಾವಿಸಿ ವಿಶ್ಲೇಷಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನ ಒಳಗೊಂಡಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವೂ ಸಣ್ಣ ಕತೆ ಮತ್ತು ಕಾದಂಬರಿಗಳನ್ನು ಒಳಗೊಂಡ ಒಟ್ಟು ಕನ್ನಡ ಕಥನ ಸಾಹಿತ್ಯವನ್ನು ವ್ಯಾಪ್ತಿಯಾಗಿರಿಸಿಕೊಂಡಿದೆ.

## ಅಧ್ಯಯನದ ವಿಧಾನ

ಈ ಅಧ್ಯಯನದಲ್ಲಿ ಆಕರಗಳನ್ನು ಕ್ರೋಢೀಕರಿಸುವ ಮೂಲಕ ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

## ಅಧ್ಯಯನದ ಸ್ವರೂಪ

ಅಧ್ಯಯನದ ಉದ್ದೇಶಕ್ಕನುಗುಣವಾಗಿ ಅಧ್ಯಾಯಗಳನ್ನು ಈ ರೀತಿ ಯೋಜಿಸಿಕೊಳ್ಳಲಾಗಿದೆ.

**ಅಧ್ಯಾಯ ಒಂದು: ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ**

ಈ ಅಧ್ಯಯನದ ಉದ್ದೇಶ, ವ್ಯಾಪಿ, ವೈಧಾನಿಕತೆಯನ್ನು ಸ್ಪಷ್ಟಪಡಿಸಲಾಗಿದೆ.

**ಅಧ್ಯಾಯ ಎರಡು: ಪ್ರಸ್ತಾವನೆ: ವಿಷಯ ಪ್ರವೇಶಿಕೆ**

೨.೧. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

೨.೨. ವಲಸೆ ಪದದ ಅರ್ಥ

೨.೩. ವಲಸೆ ಕುರಿತ ವ್ಯಾಖ್ಯಾನಗಳು

ಈ ಅಧ್ಯಾಯದಲ್ಲಿ ವಿಷಯದ ಪ್ರವೇಶದ ಜೊತೆಗೆ ಕನ್ನಡ ಸಾಹಿತ್ಯ ಮತ್ತು ಇತರೆ ಜ್ಞಾನಶಿಸ್ತುಗಳಲ್ಲಿ ಕಂಡುಬಂದ ವಲಸೆ ಕುರಿತ ಅಧ್ಯಯನಗಳ ಕ್ರಮಗಳನ್ನು ಅವಲೋಕಿಸುವ ಮೂಲಕ ವಲಸೆ ಪದದ ಅರ್ಥವನ್ನು ಸ್ಪಷ್ಟಪಡಿಸಲಾಗಿದೆ. ಮತ್ತು ನೆಡೆದಿರುವ ಈ ಅಧ್ಯಯನಗಳ ಮೂಲಕ ಸಾಹಿತ್ಯದಲ್ಲಿ ವಲಸೆ ಕುರಿತಾಗಿ ಮೂಡಿಬಂದ ಅಭಿಪ್ರಾಯಗಳನ್ನು ಕ್ರೋಢೀಕರಿಸಲಾಗಿದೆ. ಪ್ರಸ್ತುತ ಅಧ್ಯಯನ ಈ ಎಲ್ಲಾ ಅಭಿಪ್ರಾಯಗಳಿಗಿಂತ ಭಿನ್ನವಾಗುವ ಬಗೆಯನ್ನು ಕಂಡುಕೊಳ್ಳಲಾಗಿದೆ.

**ಅಧ್ಯಾಯ ಮೂರು : ಸಾಹಿತ್ಯೇತರ ಜ್ಞಾನ ಶಿಸ್ತುಗಳಲ್ಲಿ ವಲಸೆ**

ಈ ಅಧ್ಯಾಯದಲ್ಲಿ ಸಾಹಿತ್ಯೇತರ ಜ್ಞಾನ ಶಿಸ್ತುಗಳಾದ ಇತಿಹಾಸ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಜಾನಪದೀಯದಂತಹ ಇತರ ಹಲವು ಜ್ಞಾನ ಶಿಸ್ತುಗಳಲ್ಲಿ ಬಂದಂತಹ ವಲಸೆ ಕುರಿತಾದ ಅಧ್ಯಯನಗಳು, ಕೃತಿಗಳು, ಲೇಖನಗಳು ಅಭಿವ್ಯಕ್ತಗೊಂಡ ಕ್ರಮವನ್ನು ವಿವರಣಾತ್ಮಕವಾಗಿ ಸಮೀಕ್ಷಿಸಲಾಗಿದೆ.

**ಅಧ್ಯಾಯ ನಾಲ್ಕು: ಸಾಹಿತ್ಯ ಮತ್ತು ವಲಸೆಯ ಅಂತಃಸಂಬಂಧ**

ಈ ಅಧ್ಯಾಯದಲ್ಲಿ ಸಾಹಿತ್ಯ ಮತ್ತು ವಲಸೆಗಿರುವ ಒಂದು ಅವಿನಾಭಾವ ಸಂಬಂಧದ ಪರಂಪರೆಯನ್ನು ಸಾಹಿತ್ಯ ಕೃತಿಗಳ ಮೂಲಕ ಅವಲೋಕಿಸಲಾಗಿದೆ. ಹೀಗೆ ಒಟ್ಟು ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡ ವಲಸೆ ಕ್ರಮವನ್ನು ವಿಶ್ವಸಾಹಿತ್ಯ, ಭಾರತೀಯ ಸಾಹಿತ್ಯ, ಮತ್ತು ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಸಾಹಿತ್ಯದಿಂದಿಡಿದು ಆಧುನಿಕ ಸಾಹಿತ್ಯದವರೆಗಿನ ಸಾಹಿತ್ಯದ ಪ್ರಕಾರಗಳಲ್ಲಿ ಮೂಡಿಬಂದಿರುವ ವಲಸೆ ಕುರಿತಾದ ಕೃತಿಗಳನ್ನು ಅವಲೋಕಿಸುವ ಮೂಲಕ ಸಾಹಿತ್ಯಕ್ಕೂ ವಲಸೆಗಿರುವ ಅಂತಃಸಂಬಂಧವನ್ನು ಇಲ್ಲಿ ನಿರೂಪಿಸಲಾಗಿದೆ.

**ಅಧ್ಯಾಯ ಐದು: ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆಯ ವಿಭಿನ್ನ ಆಯಾಮಗಳು**

೫.೧. ವ್ಯಕ್ತಿ ವಲಸೆ

೫.೨. ಕುಟುಂಬ ವಲಸೆ

೫.೩. ಸಮುದಾಯ ವಲಸೆ

೫.೪. ಊರಿನ ವಲಸೆ

ಈ ಅಧ್ಯಾಯದಲ್ಲಿ ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ಕುರಿತಾಗಿ ಮೂಡಿಬಂದಿರುವ ವಿಭಿನ್ನ ಆಯಾಮಗಳನ್ನು ಇಲ್ಲಿ ವಿವರಿಸಿ ವಿಶ್ಲೇಷಿಸುತ್ತಲೇ, ಪ್ರತಿ ಕಾದಂಬರಿಗಳಲ್ಲಿಯೂ ಪ್ರೇರಣೆ, ಪ್ರಕ್ರಿಯೆ, ಪರಿಣಾಮ ನೆಲೆಗಳ ಹಿನ್ನೆಲೆಯಲ್ಲಿ ಕಥನ ಕ್ರಿಯೆ ಯಾವ ರೀತಿ ತನ್ನನ್ನು ವಿಸ್ತರಿಸಿಕೊಂಡಿದೆ ಎಂಬುದರ ಮೂಲಕ ವಲಸೆಯ ನೆಲೆ ಬೆಲೆಗಳನ್ನು ಅರಿಯಲಾಗಿದೆ. ಮತ್ತು ವಲಸೆ ಎನ್ನುವ ಕೇಂದ್ರ ಬಿಂದುವಿನೊಂದಿಗೆ ಮೂಡಿಬಂದಿರುವ ಹಸಿವು, ಬಡತನ ನಿರುದ್ಯೋಗದಂತಹ ಹಲವು ಅಂಶಗಳನ್ನು ಕೃತಿಕಾರರು ಹೇಗೆ ಪೂರಕ ಪ್ರೇರಕ ಅಂಶವಾಗಿ ಬಳಸಿಕೊಂಡಿದ್ದಾರೆ ಎಂಬುದನ್ನು ನೋಡುವ ಮೂಲಕ ವಲಸೆ ನಿರ್ವಚನವನ್ನು ಕಂಡುಕೊಳ್ಳಲಾಗಿದೆ.

**ಅಧ್ಯಾಯ ಆರು: ಅಲೆಮಾರಿ ಸಂಸ್ಕೃತಿ, ವಲಸೆ ಸಂಸ್ಕೃತಿ, ಸ್ಥಿರವಾಸ್ತವ್ಯದ ಸಂಸ್ಕೃತಿಗಳೊಳಗಿನ ಅಂತಃಸಂಬಂಧಗಳ ನೆಲೆಗಳು**

೬.೧. ಮೂಲನೆಲೆ ಮತ್ತು ಸ್ಥಿರವಾಸ್ತವ್ಯಗಳ ಹಂಗಿಲ್ಲದ ಅಲೆಮಾರಿ ಸಂಸ್ಕೃತಿ.

೬.೨. ಮೂಲನೆಲೆ ಮತ್ತು ವರ್ತಮಾನದ ವಾಸ್ತವ್ಯಗಳ ನಡುವಿನ ವಲಸೆ ಸಂಸ್ಕೃತಿ.

ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ನೋಡಿದಾಗ ಅಲೆಮಾರಿಗಳಿಗೂ ವಲಸಿಗರಿಗೂ ಇರುವ ವ್ಯಾಖ್ಯಾನದ ಅರ್ಥ ಬೇರೆಯದೇ ಆಗಿದೆ. ಆದರೂ, ಅಲೆಮಾರಿ, ವಲಸೆ, ಸ್ಥಿರವಾಸ್ತವ್ಯ ಪರಿಕಲ್ಪನೆಗಳಲ್ಲಿ

ಕೆಲವು ಸೂಕ್ಷ್ಮವಾದ ಸಾಮ್ಯತೆ ಭಿನ್ನತೆಗಳನ್ನು ಗಮನಿಸಬಹುದು, ಅಂತಹ ಸೂಕ್ಷ್ಮ ಅಂಶಗಳನ್ನು ಅಲೆಮಾರಿಗಳಂತೆ ಬದುಕು ನಡೆಸಿದ ಕಥನಗಳಲ್ಲಿನ ಲೇಖಕರ ಅಭಿವ್ಯಕ್ತಿಯ ಮೂಲಕ ಅಲೆಮಾರಿಗಳಿಗೂ, ವಲಸೆಗರಿಗೂ, ಸ್ಥಿರವಾಸ್ತವ್ಯದವರಿಗೂ ಇರುವ ಅಂತಃಸಂಬಂಧವನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಹಾಗೆಯೆ ಪ್ರತಿಯೊಬ್ಬ ವಲಸಿಗರಿಗೂ ಮೂಲನೆಲೆ ಎನ್ನುವಂತದ್ದು ಇದ್ದೆ ಇರುತ್ತದೆ. ಆ ಮೂಲನೆಲೆಯಲ್ಲಿ ಹೆಚ್ಚಾಗಿ ವಲಸಿಗರ ಬದುಕು ಸುಂದರ ಸಮೃದ್ಧಿ ಜೀವನದಂತೆ ಕಂಡುಬರುತ್ತದೆ. ಆದರೆ, ಹೆಚ್ಚಾಗಿ ಮೂಲನೆಲೆಯ ಕೊನೆಕೊನೆಗೆ ಉಂಟಾದ ದುಃಖದ ಮುನ್ಸೂಚನೆ, ಮತ್ತು ಸ್ಥಿರವಾಸ್ತವ್ಯದಲ್ಲಿನ ಮೂಲನೆಲೆಯ ನೆನಪುಗಳೊಂದಿಗೆ ಸಾಗುವ ವಲಸಿಗರ ಬದುಕನ್ನು, ಲೇಖಕರು ವಲಸೆಯ ಪರಿಣಾಮದಲ್ಲಿ ವಿವರಿಸುತ್ತಾ ಇಡೀ ಕಥನದ ಸಾರರೂಪವನ್ನು ಸ್ಪಷ್ಟೀಕರಿಸುವ ಅಭಿವ್ಯಕ್ತಿ ಸ್ವರೂಪವನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

**ಅಧ್ಯಾಯ ಏಳು: ಮಾನವ ಸಮುದಾಯದ ಸಂಸ್ಕೃತಿ ಕಥನವಾಗಿ ವಲಸೆಯ ಅಭಿವ್ಯಕ್ತಿ**

೭.೧. ಆದಿಮ ಹಂತದ ವಲಸೆ ಸಂಸ್ಕೃತಿ ಮತ್ತು ವರ್ತಮಾನ ವಲಸೆ ಸಂಸ್ಕೃತಿಗಳ ವಿಭಿನ್ನ ಕಥನ

೭.೨. ವಲಸೆ ಮತ್ತು ಕೃಷಿ ಸಂಸ್ಕೃತಿಯ ಅಂತಃಸಂಬಂಧದ ಕಥನ

೭.೩. ವಲಸೆ ಮತ್ತು ಶ್ರಮ ಸಂಸ್ಕೃತಿಯ ಅಂತಃಸಂಬಂಧದ ಕಥನ

೭.೪. ವಲಸೆ ಮತ್ತು ವ್ಯಾಪಾರೋದ್ಯಮ ಅಂತಃಸಂಬಂಧದ ಕಥನ

ಮಾನವರ ಪರಂಪರೆಯ ಸಂಸ್ಕೃತಿ ವಿಕಾಸದಲ್ಲಿ ವಲಸೆ ಪ್ರಮುಖ ಪಾತ್ರ ವಹಿಸುತ್ತದೆ. ಮಾನವರ ಉಗಮದ ಆರಂಭಿಕ ಹಂತದಿಂದ ಹಿಡಿದು ಇಂದಿನ ಆಧುನಿಕ ಹಂತದವರೆಗೂ ಸಾಗಿ ಬರುವಲ್ಲಿ ವಲಸೆಯು ಮಾನವನ ಅವಿಭಾಜ್ಯ ಅಂಗವಾಗಿ ಬೆಸೆದುಕೊಂಡು ಬಂದಿದೆ. ಹೀಗೆ ಸಾಗಿ ಬಂದ ಹಂತದಲ್ಲಿ ನಡೆದ ಪಲ್ಲಟಗಳು ಏನೇ ಇದ್ದರೂ ಆದಿಮ ಹಂತದಿಂದ ಆಧುನಿಕದವರೆಗೆ ಸಾಗಿಬರುವಲ್ಲಿ ಮತ್ತು ನಾಗರಿಕತೆ ತಲುಪುವಲ್ಲಿ ವಲಸೆ ಮಾನವನಿಗೆ ಸಹಾಯಕವಾಗಿಯೂ, ಸಾಧನಾವಾಗಿಯೂ ಮಾರ್ಪಟ್ಟಿದೆ. ಈ ಪಲ್ಲಟಗಳಿಂದ ಏನೇ ಋಣಾತ್ಮಕ ಅಥವಾ ಧನಾತ್ಮಕದಂತಹ ಅಂಶಗಳೂ ಇದ್ದಾಗಲೂ ಮಾನವನ ಪರಂಪರೆಯಲ್ಲಿ ಜೀವ ಸಂಕುಲದ ನಿರಂತರತೆಯನ್ನು ವಲಸೆ ಹಿಡಿದಿಟ್ಟುಕೊಂಡಿದೆ. ಒಂದೊಮ್ಮೆ ವಲಸೆ ಇಲ್ಲದಿದ್ದರೆ ಅದೇ ಗುಡ್ಡಗಾಡು ಪ್ರದೇಶಗಳಲ್ಲಿ ಅಲೆಯುವ ಸ್ಥಿತಿಯೇ ಮುಂದುವರಿಯುತಿತ್ತು. ಹಾಗಾಗಿ ಆದಿಮದಿಂದ ಆಧುನಿಕದವರೆಗಿನ ಈ ಚಲಿಸುವಿಕೆಯಲ್ಲಿ, ನಾಗರಿಕ ಹಂತ ತಲುಪುವಲ್ಲಿ ವಲಸೆ ಕೈವಾಡ ಇಲ್ಲವೆಂದು ಹೇಳಲಾಗದು.

ಹೀಗೆ ಮಾನವರ ಉದಯದ ಆರಂಭಿಕ ಹಂತದಲ್ಲಿ ಬೇಟೆ, ಆಹಾರ, ನೀರು, ಪಶುಪಾಲನೆ, ಕೃಷಿ, ವ್ಯಾಪಾರದಂತಹ ಹಲವು ಕಾರಣಗಳಿಗಾಗಿ ಆರಂಭವಾದ ವಲಸೆ ಸಂಸ್ಕೃತಿ, ದಿನದಿಂದ ದಿನಕ್ಕೆ ಕಾಲದಿಂದ ಕಾಲಕ್ಕೆ ತನ್ನ ಸ್ವರೂಪದಲ್ಲಿ ಬದಲಾಗುತ್ತಾ, ಮಾನವರ ಸಮುದಾಯದೊಂದಿಗೆ ಸಾಗಿ ಬಂದ ಸ್ಥಿತಿಯನ್ನು ಲೇಖಕರ ಕತೆ ಕಾದಂಬರಿಗಳ  ಮೂಲಕ ಇಲ್ಲಿ ಪರಿಶೀಲಿಸಲಾಗಿದೆ.

**ಅಧ್ಯಾಯ ಏಂಟು:  ಸಮಾರೊಪ**

**ಸಂಸ್ಕೃತಿ ಸಂಕಥನವಾಗಿ ವಲಸೆ**

ಈ ಭಾಗದಲ್ಲಿ ಕಥನ ಪ್ರಪಂಚ ವಲಸೆ ಎಂಬ ವಿಷಯವನ್ನು ಹೇಗೆ ಅನಾವರಣಗೊಳಿಸಿದೆ ಎಂಬುದನ್ನು  ಹಾಗೂ ಬಹು ಶಿಸ್ತಿಯ ಅನ್ಯಜ್ಞಾನವನ್ನು ಹೇಗೆ ಅನುಸಂಧಾನ ಮಾಡಿಕೊಂಡಿದೆ ಎಂಬುದನ್ನು ವಿವೇಚಿಸಲಾಗಿದೆ. ಉದಾ: ಸಮುದಾಯ, ಚರಿತ್ರೆ, ಮಾನವಶಾಸ್ತ್ರ, ಇತ್ಯಾದಿಗಳನ್ನು ಹೇಗೆ ಪೂರಕವಾಗಿ ಅಷ್ಟೇ ಆತ್ಮೀಯವಾಗಿ ಗಂಡಭೇರುಂಡದಂತೆ ಮೂಡಿಸಿದೆ ಎಂಬುದನ್ನು ಚರ್ಚಿಸಲಾಗಿದೆ. ವಲೆಸೆಯೊಂದು ಸಾಂಸ್ಕೃತಿಕ ಸೊತ್ತು ಎಂಬ ವಾಗ್ವಾದವನ್ನು  ಎದುರಿಸುತ್ತಲೇ ಸಾಹಿತ್ಯ ಕೃತಿಯೊಂದು ಸಂವೇದನೆಯ ಮೂಲಕ ಹೊರ ಚೆಲ್ಲುವ ಸಾಹಿತ್ಯ ಮತ್ತು ಅನ್ಯಜ್ಞಾನಶಿಸ್ತು ಇತ್ಯಾದಿಗಳ ಸಂಯೋಗ ರೂಪದ ಅಂತರ್ ಶಿಸ್ತಿಯ/ ಬಹುಶಿಸ್ತಿಯ ಮಾದರಿಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಹಾಗೂ ವಲಸೆಯ ಕಥಾ ಹಂದರದೊಳಗೆ ಮೂಡಿ ಬರುವ ಬಡತನ, ಹಸಿವು, ಇತ್ಯಾದಿ ಅನುಷಂಗಿಕ ಅಂಶಗಳನ್ನು ಕೂಡ ಇಲ್ಲಿ ಗಮನಿಸಲಾಗಿದೆ. ಒಟ್ಟಾರೆಯಾಗಿ ಸಾಹಿತ್ಯದ ಈ ವಿರಾಡ್ರೂಪದ ಮೂಲಕ ವಲಸೆಯನ್ನು ಸಾಂಸ್ಕೃತಿಕ ಸಂಕಥನವಾಗಿ ರೂಪಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

## ಅಧ್ಯಾಯ ಎರಡು

# ಪ್ರಸ್ತಾವನೆ: ವಿಷಯ ಪ್ರವೇಶಿಕೆ

### ಪ್ರಸ್ತಾವನೆ

ವಲಸೆ ಪ್ರಕ್ರಿಯೆ ಎನ್ನುವುದನ್ನು ಪರಂಪರೆ ಮತ್ತು ಜೀವನದ ಪ್ರವಾಹಕ್ಕೆ ಹೋಲಿಸುವುದಾದರೆ ಅದರಲ್ಲಿ ವಲಸೆಯ ಪಾತ್ರ ಬಹಳಷ್ಟಿದೆ. ಮಾನವರು ಭೂಮಿಯ ಮೇಲೆ ಜನಿಸಿದಾಗಿನಿಂದಿಡಿದು ಇಂದಿನವರೆಗೂ ಒಂದಲ್ಲಾ ಒಂದು ಕಾರಣಕ್ಕೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಚಲಿಸುತ್ತಲೇ ಬಂದಿದ್ದಾರೆ, ಎನ್ನುವುದಕ್ಕೆ ನಮಗೆ ಸಾಕಷ್ಟು ಸಾಕ್ಷ್ಯಧಾರಗಳು ಸಿಗುತ್ತವೆ.

ಹಿಂದೆ ಅಂದರೆ, ಮಾನವರು ಕಾಡಿನಲ್ಲಿ ಬದುಕುತ್ತಿದ್ದಂತಹ ಸಮಯದಲ್ಲಿ ತಮ್ಮ ಹೊಟ್ಟೆ ಪಾಡಿಗಾಗಿ ಆಹಾರವನ್ನು ಪಡೆಯುವುದಕೋಸ್ಕರ ಪ್ರಾಣಿಗಳನ್ನು ಬೇಟೆಯಾಡುವುದನ್ನು ಕಲಿತರು. ಆ ಬೇಟೆಯನ್ನು ಹುಡುಕಿಕೊಂಡು ಪ್ರಾಣಿಗಳು ಇರುವಲ್ಲಿಗೆ ಮನುಷ್ಯರು ಕಾಡಿನಿಂದ ಕಾಡಿಗೆ ಅಲೆಯಲು ಶುರುಮಾಡಿದರು. ಈ ಹಂತವನ್ನು ನಾವು ಸಾಮಾನ್ಯವಾಗಿ ಅಲೆಮಾರಿ ಎಂದು ಹೇಳಬಹುದು.

ಆದರೆ, ಕಾಲಾನಂತರದಲ್ಲಿ ಕಾಡಿನ ಸಂಪನ್ಮೂಲಗಳನ್ನೇ ಬಳಸಿಕೊಂಡು ಬಿದಿರು, ಮರದ ಕಟ್ಟಿಗೆಗಳಿಂದ ಗುಡಿಸಲುಗಳನ್ನು ಕಟ್ಟಿಕೊಂಡು ತನ್ನ ಪರಿವಾರದೊಂದಿಗೆ ಒಂದು ಕಡೆ ನೆಲೆಯಾಗುವುದನ್ನು ಕಲಿತರು. ಈ ತರಹದ ಒಂದು ಕಡೆಯಿಂದ ಮತ್ತೊಂದು ಕಡೆ ಹೋಗಿ ನೆಲೆಯಾಗುವುದನ್ನೇ ನಾವು ವಲಸೆ ಎನ್ನಬಹುದು. ಆದರೆ ಇಂದು ನಾವು ಈ ವ್ಯಾಖ್ಯಾನಕಷ್ಟೇ ಸೀಮಿತವಾಗಬೇಕಿಲ್ಲ. ಏಕೆಂದರೆ ಈ ಹಿಂದೆ ಇದ್ದಂತಹ ವಲಸೆಯ ಸ್ವರೂಪ ಇವತ್ತಿನ ದಿನಗಳಲ್ಲಿ ಭಿನ್ನ ಸ್ವರೂಪವನ್ನು ಪಡೆದುಕೊಂಡಿದೆ. ಏಕೆಂದರೆ ಹಿಂದೆ ಕೇವಲ ಪ್ರಾಣಿಗಳಿಗೋಸ್ಕರ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿ ನೆಲೆಯೂರುತ್ತಿದ್ದ ಮಾನವರು ಬರುಬರುತ್ತಾ ಆ ಕಾಡಿನಲ್ಲಿ ಬೇಟೆಗೋಸ್ಕರ ಆಗುತ್ತಿದ್ದಂತಹ ಸಂಘರ್ಷಗಳಿಂದ ನಂತರ ಆಕ್ರಮಣ, ಬರಗಾಲ, ಸಾಂಕ್ರಾಮಿಕ ರೋಗಗಳಿಂದಾಗಿ

ವಲಸೆ ಹೋಗಲು ಆರಂಭಿಸಿದರು. ಹಾಗೆಯೆ ಇತ್ತೀಚಿನ ದಿನಗಳಲ್ಲಿ ಈ ಹಿಂದೆ ಹೇಳಿದ ಎಲ್ಲಾ ಕಾರಣಗಳ ಜೊತೆಗೆ ಆಧುನಿಕ ಹಂತದಲ್ಲಿ ರಾಷ್ಟ್ರೀಯ ಅಭಿವೃದ್ಧಿ ಯೋಜನೆಗಳಾದ ರಸ್ತೆ ಅಗಲಿಕರಣ, ಆಣೆಕಟ್ಟು ನಿರ್ಮಾಣದಂತಹ ಹಲವು ಕಾರಣಗಳಿಂದ ಜನರ ವಲಸೆ ಪ್ರಕ್ರಿಯೆ ಹೆಚ್ಚಾಗುತ್ತಾ ಬಂದಿದೆ. ಹಾಗೆಯೆ ಇವತ್ತಿನ ದಿನಗಳಲ್ಲಿ ಜಾಗತೀಕರಣ, ನಗರೀಕರಣದ ಪರಿಣಾಮ ದಿಂದಾಗಿ ಮನೆಗಳಲ್ಲಿ ಮನಸ್ತಾಪಗಳು ಉಂಟಾಗಿ ವ್ಯಕ್ತಿಗಳು ಕುಟುಂಬವನ್ನು ತೊರೆದು ಒಂಟಿಯಾಗಿ ಬದುಕಬೇಕೆಂದಾಗಲೂ ಅಥವಾ ವಿದೇಶದಲ್ಲಿನ ಐಷಾರಾಮಿ ಆಮೀಷಗಳಿಗೆ ಬಲಿಯಾಗಿ ಸ್ವದೇಶವನ್ನು ತೊರೆದು ವಿದೇಶಕ್ಕೆ ಹೋಗುತ್ತಿರುವುದು ಸಾಮಾನ್ಯವಾಗಿ ಬಿಟ್ಟಿದೆ.

ಹೀಗೆ ಈ ವಲಸೆ ಸಮಾಜದಲ್ಲಿ ಕೆಲವರಿಗೆ ಸಮಸ್ಯೆಯಾಗಿ ಇನ್ನು ಕೆಲವರಿಗೆ ಅನಿವಾರ್ಯವಾಗಿ ಮತ್ತು ಕೆಲವರಿಗೆ ಬದುಕಲು ದಾರಿಯಾಗಿ ಪರಿಣಿಮಿಸಿದೆ. ಹಾಗೆಯೆ ಮನುಷ್ಯರು ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಬಂದತೆಲ್ಲಾ ಭಿನ್ನ ಜನರ ಭಾಷೆ, ಸಂಸ್ಕೃತಿ, ಆಚಾರ-ವಿಚಾರಗಳೆಲ್ಲವೂ ಸಮ್ಮಿಶ್ರವಾಗಿ ಬದುಕಿನಲ್ಲಿ ಗಣನೀಯವಾದ ಬದಲಾವಣೆಗಳು ಉಂಟಾಗಲು ಕಾರಣವಾಯಿತು. ಜೊತೆಗೆ ಹಳ್ಳಿಗಳಿಂದ ನಗರಗಳಿಗೆ ಹೋದ ಜನರು, ಇರಲು ಮನೆ ಇರದೇ ಜೀವನ ನಿರ್ವಹಿಸಲು ಹಣ ಸಾಕಾಗದೆ ದುಡಿಯಲು ಕೆಲಸ ಸಿಕ್ಕದೇ ಕಳ್ಳತನ, ದರೋಡೆ, ಮಕ್ಕಳ ಮಾರಾಟ, ವೇಶ್ಯವಾಟಿಕೆ, ಬಾಲಕಾರ್ಮಿಕ ಪದ್ಧತಿಯಂತಹ ಹಲವು ಸಾಮಾಜಿಕ ಸಮಸ್ಯೆಗಳ ನಿರ್ಮಾಣಕ್ಕೆ ಕಾರಣವಾಯಿತು.

ಇದಷ್ಟೇ ಅಲ್ಲದೇ ಇತ್ತೀಚಿನ ದಿನಗಳಲ್ಲಂತೂ ರಾಷ್ಟ್ರದ ಅಭಿವೃದ್ಧಿ ನೆಪದಲ್ಲಿ ಸರ್ಕಾರ ಅಣೆಕಟ್ಟು ನಿರ್ಮಾಣ ಮಾಡುತ್ತಿರುವ ಹಿನ್ನೆಲೆಯಿಂದಾಗಿ ಹಳ್ಳಿಗರ ಮೇಲೆ ತೀವ್ರ ಪರಿಣಾಮಗಳು ಉಂಟಾಗುತ್ತಿವೆ. ಸರ್ಕಾರ ದೇಶದ ಅಭಿವೃದ್ಧಿಗೆ ಸಾವಿರಾರು ಹಳ್ಳಿಗಳನ್ನು ನಾಶ ಮಾಡಿ, ಹಳ್ಳಿಯ ಜನರಿಗೆ ಪರಿಹಾರ ಹಣ ನೀಡಿ ಕಳುಹಿಸುತ್ತಿದೆ. ಇದರಿಂದ ಹಳ್ಳಿಯ ಲಕ್ಷಾಂತರ ಜನ ಅನಿವಾರ್ಯವಾಗಿ ಜೀವಕ್ಕೆ ಅಂಜಿ ಸರ್ಕಾರ ನಿಗದಿಪಡಿಸಿದ ಜಮೀನು ಇರುವಲ್ಲಿಗೆ ವಲಸೆ ಬಂದು ಕಕ್ಕಾಬಿಕ್ಕಿಯಾಗುತ್ತಾರೆ. ತನ್ನವರೆಂದು ಹೇಳಿಕೊಳ್ಳಲು ಯಾರು ಇಲ್ಲದೆ ಎಲ್ಲೋ ಕಳೆದು ಹೋದಂತಹ ಅನುಭವ ಉಂಟಾಗಿ ಹೊಸ ಪರಿಸರಕ್ಕೆ ಹೊಂದಿಕೊಳ್ಳಲು ಹೆಣಗಾಡುತ್ತಾರೆ. ಅದರಲ್ಲೂ ವಯಸ್ಸಾದವರಂತೂ ತಮ್ಮ ಜೀವಮಾನವೆಲ್ಲ ತಮ್ಮ ಊರಲ್ಲೇ ಕಳೆದು ದುತ್ತೆಂದು ಮತ್ತೊಂದು ಕಡೆ ಹೋಗಬೇಕೆಂದಾಗ ಮನಸ್ಥಿತಿ ಪರಿಸ್ಥಿತಿಗೆ ಹೊಂದಿಕೊಳ್ಳದೆ ಮಾನಸಿಕವಾಗಿ ನೊಂದು ಸಾವಿಗೀಡಾಗುವ ಪ್ರಸಂಗಗಳು ಎದುರಾಗುತ್ತವೆ. ಇನ್ನು ಬೇರೆ ದೇಶಗಳಲ್ಲಿ ನೆರೆ ಹಾವಳಿ, ಯುದ್ಧ, ಪ್ರವಾಹಗಳಂತಹ ಸಮಸ್ಯೆಗಳು ಎದುರಾದಾಗ ಅಲ್ಲಿಂದ ಬಂದ ನಿರಾಶ್ರಿತರು ಮತ್ತೊಂದು ರಾಜ್ಯದಲ್ಲಿ ಅನುಭವಿಸಿದ ಸಮಸ್ಯೆಗಳು ಭಿನ್ನವಾಗಿರುತ್ತವೆ. ಉದಾಹರಣೆಗೆ ತುರುವೀನಾಳು ಚಂದ್ರು ರವರ 'ಮೀಸಲು ಹೋರಾಟದಲ್ಲಿ

ಬಾಂಗ್ಲ ವಲಸಿಗರ ಕಣ್ಣತೆರದಿತೆ ಸರಕಾರ?' ಎಂಬ ಲೇಖನದಲ್ಲಿ ಬಾಂಗ್ಲ ದೇಶದ ನಿರಾಶ್ರಿತರು ಭಾರತದ ಕಡೆಗೆ ವಲಸೆ ಬಂದಾಗ ಸರ್ಕಾರ ಇವರಿಗೆ ಇರಲು ಭೂಮಿ ನೀಡಿ ಶೆಡ್‌ಗಳನ್ನು ಹಾಕಿಕೊಟ್ಟು, ಹೊಟ್ಟೆಪಾಡಿಗೆ ಒಂದು ದಾರಿ ಮಾಡಿಕೊಟ್ಟಿತ್ತು. ಆದರೆ ಪೌರತ್ವ ನೀಡದೆ ಜಾತಿ ಪ್ರಮಾಣ ಪತ್ರವನ್ನು ಕೊಡದೆ ತಾತ್ಸಾರ ಮಾಡಿದ್ದರಿಂದ ಅವರ ಬದುಕು ಇನ್ನಷ್ಟು ಕಷ್ಟಕ್ಕಿಡಾಯಿತು. ಕಾರಣ ಭಾರತದ ಪ್ರಜೆಯಾಗದ ಹೊರತು ಇಲ್ಲಿಯ ಯಾವ ಸವಲತ್ತುಗಳು ಅವರಿಗೆ ಸಿಗದಂತಾಯಿತು. ಹೀಗಾಗಿ "ನಿರಾಶ್ರಿತರನ್ನು ಸ್ವಾಗತಿಸಿಕೊಂಡರಷ್ಟೇ ಸಾಲದು. ಭಾರತದ ಪ್ರಜೆಗಳಿಗೆ ಕಲ್ಪಿಸುವ ಎಲ್ಲ ಹಕ್ಕುಗಳನ್ನು ಕಲ್ಪಿಸಿದರೆ ಮಾತ್ರ, ನೆಲೆ ಅರಸಿ ಬಂದವರ ಬದುಕು ಹಸನಾದೀತು" (ತುರುವೀನಾಳು ಚಂದ್ರು, ೨೦೧೩, ಜುಲೈ ೧೩, ವಿ.ಕ. ದಿನಪತ್ರಿಕೆ) ಎಂದು ಅಭಿಪ್ರಾಯ ಪಡುತ್ತಾರೆ.

ಹಾಗೆಯೆ ಬರಗಾಲದಂತಹ ಸಂದರ್ಭದಲ್ಲಿ ಐದಾರು ಎಕರೆ ಭೂಮಿ ಇದ್ದರೂ ನೀರಾವರಿಯಿಲ್ಲದೆ ಕೃಷಿ ಮಾಡಲು ಸಾಧ್ಯವಾಗದೆ ದೂರದ ಊರುಗಳಿಗೆ ಕುಟುಂಬ ಸಮೇತ ವಲಸೆ ಹೋಗುವುದು ಅನಿವಾರ್ಯವಾಗುತ್ತದೆ. ಆದರೆ ಊರಲ್ಲಿ ದುಡಿಮೆಯಿಲ್ಲ ಎನ್ನುವ ಚಿಂತೆ ಒಂದು ಕಡೆಯಾದರೆ ವಲಸೆ ಹೋದಲ್ಲಿ ಮೂರು ಹೊತ್ತಿನ ಊಟದ ಗಳಿಕೆಗೂ ಪರದಾಡುವ ಚಿಂತೆ ಇನ್ನೊಂದು ಕಡೆ ಕಾಡುತ್ತದೆ. ಹೀಗೆ ಎಲ್ಲ ವಲಸೆಗಳು ಒಂದಲ್ಲಾ ಒಂದು ಕಡೆ ಹೊಂದಾಣಿಕೆಯನ್ನು ಬಯಸುತ್ತವೆ. ಇದರಿಂದ ಬಹುತೇಕ ಬಡಜನರು, ವಲಸೆ ಸಮಸ್ಯೆಯಿಂದ ಬಳಲುತ್ತಿದ್ದಾರೆ.

ಇನ್ನು ಈ ವಲಸೆಯನ್ನು ತಡೆಯಬೇಕೆಂದು ಸರ್ಕಾರ ರೂಪಿಸುತ್ತಿರುವ ಉದ್ಯೋಗ ಖಾತ್ರಿ ಯೋಜನೆಗಳು ವಿಫಲಗೊಳ್ಳುತ್ತಿವೆ. ಹಣದ ಆಸೆಗಾಗಿ ಅಧಿಕಾರಿಗಳು ಬಡಜನರಿಗೆ ಉದ್ಯೋಗವನ್ನು ಕೊಡದೇ ತಾವೇ ಹಣವನ್ನು ನುಂಗುವುದು ಸಾಮಾನ್ಯವಾಗಿ ಬಿಟ್ಟಿದೆ. ಹೀಗಾಗಿ ಆ ಕಡೆ ಉದ್ಯೋಗವೂ ಇಲ್ಲದೆ ಮಳೆಯೂ ಬಾರದೆ ಊರುಬಿಟ್ಟು ಉದ್ಯೋಗ ಹುಡುಕಿಕೊಂಡು ವಲಸೆ ಬರುತ್ತಿದ್ದಾರೆ.

ಈ ಎಲ್ಲಾ ಅಂಶಗಳು ಅನಿವಾರ್ಯವಾಗಿಯೂ ಅಥವಾ ಬೇರೆಯವರ ಒತ್ತಾಯಕ್ಕಾಗಿ ಸಂಭವಿಸಬಹುದು ಅಥವಾ ಇನ್ನೂ ಕೆಲವರು ತಂದೆ ತಾಯಿಗಳ ಒತ್ತಾಯಕ್ಕೆ ಓದುವುದಕ್ಕೆಂದು ನಗರಗಳಿಗೆ ಅಥವಾ ವಿದೇಶಗಳಿಗೆ ವಲಸೆ ಹೋಗಿ ಅವರು ತಿರುಗಿ ಬಾರದೆ ಅಲ್ಲಿ ಸಂಸಾರವನ್ನು ಕಟ್ಟಿಕೊಂಡು ಬದುಕುವುದು ಇವತ್ತಿನ ದಿನಗಳಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. ಕೆಲವರು ಬೇಗ ಶ್ರೀಮಂತರಾಗಬೇಕೆಂಬ ಆಸೆಯಿಂದ ಐಷಾರಾಮಿ ಜೀವನದ ವ್ಯಾಮೋಹಕ್ಕೆ ಬಲಿಯಾಗಿ ವಿದೇಶಗಳಿಗೆ ವಲಸೆ ಹೋದವರು ಅಲ್ಲಿಯೇ ಬದುಕು ಕಟ್ಟಿಕೊಳ್ಳುತ್ತಾರೆ. ಆದರೆ ಕಾಲಾನಂತರದಲ್ಲಿ

ಅಲ್ಲಿಯ ಭಿನ್ನ ಸಂಸ್ಕೃತಿಗೆ ಹೊಂದಾಣಿಕೆಯಾಗದೇ ಈ ಕಡೆ ತನ್ನ ದೇಶಕ್ಕೂ ಮರಳಲು ಆಗದೇ ಜೀವಿತದ ಕೊನೆವರೆಗೂ ಅತಂತ್ರ ರೀತಿಯಲ್ಲಿ ಒಂಟಿಯಾಗಿ ಬದುಕುತ್ತಾರೆ. ಈ ಕಡೆ ತಂದೆ ತಾಯಿಗಳು ಮಕ್ಕಳಿದ್ದು ಹತ್ತಿರವಿಲ್ಲದೇ ಮುಪ್ಪಿನ ಕಾಲಕ್ಕೂ ಒಂಟಿಯಾಗಿ ಬದುಕು ಸಾಗಿಸುತ್ತಾರೆ. ಈ ತರಹದ ವಿದೇಶಿ ವಲಸೆಯಿಂದ ಅಮೆರಿಕಾದಂತಹ ದೇಶಗಳಿಗೆ ಆರ್ಥಿಕಮಟ್ಟ ಹೆಚ್ಚಾಗುತ್ತಿವೆ. ಇದರಿಂದ ಭಾರತದಂತಹ ದೇಶಗಳಲ್ಲಿ ಪ್ರತಿಭಾವಂತರ ಕೊರತೆ ಎದ್ದು ಕಾಣುತ್ತದೆ. ಇದಕ್ಕೆ ಕಾರಣ ಬೇರೆ ದೇಶಗಳಲ್ಲಿನ ಆರ್ಥಿಕ ಅವಕಾಶಗಳು ಮುಕ್ತವಾಗಿರುವುದು ಮತ್ತು ಭಾರತದಲ್ಲಿನ ಉದ್ಯೋಗ ಅವಕಾಶಗಳು ಕಡಿಮೆ ಇರುವುದೇ ಈ ವಲಸೆಗೆ ಕಾರಣವಾಗಿವೆ.

ಇನ್ನು ವ್ಯಾಪಾರಕ್ಕೆಂದು ಹಳ್ಳಿಯಿಂದ ಅಥವಾ ಬೇರೆ ರಾಜ್ಯಗಳಿಂದ ಬಂಡವಾಳ ಸಹಿತ ಬರುವ ವಲಸಿಗರು ಒಂದು ರೀತಿಯ ಉತ್ತಮ ಜೀವನವನ್ನೇ ನಡೆಸುತ್ತಾರೆ. ಏಕೆಂದರೆ ಈಗಾಗಲೇ ಒಂದು ಮಟ್ಟದಲ್ಲಿ ಶ್ರೀಮಂತರಾಗಿದ್ದು ನಗರಗಳಿಗೆ ವಲಸೆ ಬಂದಾಗ ಅವರಿಗೆ ವಸತಿ, ಊಟ ಮುಂತಾದ ಮೂಲ ಸೌಕರ್ಯಗಳಿಗೆ ತೊಂದರೆಯಾಗದೆ ಉತ್ತಮ ಬದುಕನ್ನೇ ನಡೆಸುತ್ತಾರೆ. ಆದರೆ ಬಂಡವಾಳ ರಹಿತವಾಗಿ ಬಂದ ಬಡವರು, ಮತ್ತು ದಲಿತರು ಊಟ, ಉಡುಪು, ಉದ್ಯೋಗದಂತಹ ಮೂಲ ಸೌಕರ್ಯವನ್ನು ದೊರಕಿಸಿಕೊಳ್ಳಲು ಆಗದೇ ತೊಂದರೆಗೀಡಾಗುತ್ತಾರೆ. ಇನ್ನು ಮನೆಯಲ್ಲಿನ ವೈಷಮ್ಯದಿಂದಾಗಿ ಜಗಳವಾಡಿ ನಗರಗಳಿಗೆ ಬಂದ ಜನರು ಉದ್ಯೋಗ ಹುಡುಕಿಕೊಂಡು ಸಂಸಾರವನ್ನು ಕಟ್ಟಿಕೊಳ್ಳುತ್ತಾರೆ.

ಹೀಗೆ ಈ ವಲಸೆ ಪ್ರಕ್ರಿಯೆ ಹೊಟ್ಟೆಪಾಡಿಗಾಗಿ ಬೇಟೆಯನ್ನು ಹುಡುಕಿಕೊಂಡು ಅಲೆಯುವ ಹಂತದಿಂದ ಆರಂಭವಾಗಿ ಇಂದು ಔದ್ಯೋಗೀಕರಣ ಉದ್ಯೋಗ, ವ್ಯಾಪಾರ, ಐಷಾರಾಮಿ ಜೀವನಕ್ಕಾಗಿ ಅಲೆಯುವ ಹಂತ ತಲುಪಿದ. ಹಾಗೆಯೆ ಗುಂಪುಗಳಾಗಿ ಸಮುದಾಯದವರೊಂದಿಗೆ ಕುಟುಂಬ ಸಮೇತ ಹೋಗುತ್ತಿದ್ದ ಮನುಷ್ಯರು ಇಂದು ವ್ಯಕ್ತಿಗಳು ಮಾತ್ರ ಹೋಗುವ ಹಂತಕ್ಕೆ ತಲುಪಿದ್ದಾರೆ.

ಹೀಗೆ ವಲಸೆ ಎನ್ನುವ ಪರಿಕಲ್ಪನೆ ಮನುಷ್ಯರಿಗಷ್ಟೇ ಸೀಮಿತವಾದುದು ಅಲ್ಲ. ಪ್ರಾಣಿ ಪಕ್ಷಿಗಳೂ ಸಹ ಆಹಾರ ಬೇಟೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ, ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಚಲಿಸುವ ಪ್ರಕ್ರಿಯೆ ಬಹಳ ಹಿಂದಿನಿಂದಲೂ ಇರುವಂತದ್ದೇ, ಆದರೆ ಪ್ರಾಣಿ ಪಕ್ಷಿಗಳ ವಲಸೆಗೂ ಮನುಷ್ಯರ ವಲಸೆಗೂ ಅನೇಕ ವ್ಯತ್ಯಾಸಗಳನ್ನು ಕಾಣಬಹುದು.

ಆದರೆ ಇವತ್ತಿನ ದಿನಗಳಲ್ಲಿ ಈ ಹಿಂದೆ ಇದ್ದಂತಹ ವಲಸೆಯ ಸ್ವಾತಂತ್ರ್ಯ, ಪ್ರಾಣಿಗಳಿಗೂ ಮತ್ತು ಮನುಷ್ಯರಿಗೂ ಇಲ್ಲದೇ ಇರುವುದು. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗಬೇಕೆಂದಾಗ ವೀಸಾ ಪಾಸ್ ಪೋರ್ಟ್‌ಗಳಂತಹ ನಿರ್ಬಂಧಗಳನ್ನು ಹೇರಿದಂತೆ ಪ್ರಾಣಿಗಳಿಗೂ

ಸಹ ವಲಸೆ ಹೋಗದಂತೆ ಸರ್ಕಾರ ನಿಯಂತ್ರಿಸುತ್ತದೆ. ಕಾಡಿನಲ್ಲಿಯೇ ಕೃತಕ ಕೆರೆಗಳನ್ನು ಕಟ್ಟುವ ಮೂಲಕ ಪ್ರಾಣಿ ಪಕ್ಷಿಗಳನ್ನು ಎಲ್ಲಿಯೂ ಹೋಗದಂತೆ ತಡೆಯುತ್ತದೆ. ಇದರಿಂದ ಕಾಡಿನಲ್ಲಿ ಪ್ರಾಣಿಗಳ ಅಸಮತೋಲನವೂ ಉಂಟಾಗುತ್ತಿರುವುದನ್ನು ಗಮನಿಸಬಹುದು.

ಹೀಗಾಗಿ ಪ್ರಾಣಿ ಪಕ್ಷಿಗಳಲ್ಲಿಯೂ ಸಹ ವಲಸೆಯ ಸ್ವರೂಪ ಬದಲಾಗುತ್ತಿರುವುದನ್ನು ಕಾಣಬಹುದು. ಆದರೂ ಈ ಎಲ್ಲ ನಿರ್ಬಂಧಗಳೂ ಇದ್ದಾಗಲೂ ಸಹ ಹಕ್ಕಿಗಳ ವಲಸೆಗೆ ಸ್ವಾತಂತ್ರ್ಯವೆನ್ನುವುದು ಹೆಚ್ಚಾಗಿರುತ್ತದೆ. ಅವುಗಳಿಗೆ ಮನುಷ್ಯರಿಗಿದ್ದಂತೆ ಯಾವುದೇ ತರಹದ ಮಿತಿ, ಗಡಿ ಎಂಬ ನಿರ್ಬಂಧವಿಲ್ಲದೆ ವ್ಯಾಪಕವಾಗಿ ಹಾರುವ ಸ್ವಾತಂತ್ರ್ಯ ಜೀವಿಯಾಗಿ ನಮ್ಮ ಕಣ್ಣಿಗೆ ಕಾಣಿಸಿಕೊಳ್ಳುತ್ತದೆ.

## ೧. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಅಧ್ಯಯನಕ್ಕೆ ಪೂರಕವಾಗಿ ಮತ್ತು ಪ್ರಸ್ತುತ ಅಧ್ಯಯನದ ಸ್ಪಷ್ಟತೆಗಾಗಿ ನಡೆದಿರುವ ಅಧ್ಯಯನಗಳ ಅವಲೋಕನ ಅಗತ್ಯ. ಹಾಗಾಗಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ಬಂದ ಪ್ರಕಟಿತ ಮತ್ತು ಅಪ್ರಕಟಿತ ಅಧ್ಯಯನಗಳು ಹಾಗೂ ದಿನಪತ್ರಿಕೆ ಮತ್ತು ಮಾಸಪತ್ರಿಕೆಗಳಲ್ಲಿ ಬಂದಂತಹ ಲೇಖನಗಳ ಜೊತೆಗೆ ವಿವಿಧ ಲೇಖಕರ ವಿಮರ್ಶಾ ಲೇಖನಗಳನ್ನು ಸಮೀಕ್ಷೆ ಮಾಡಲಾಗಿದೆ.

ಈ ಸಮೀಕ್ಷೆ ಮೂಲಕ ಕನ್ನಡ ಸಾಹಿತ್ಯ ಮತ್ತು ಸಾಹಿತ್ಯೇತರ ಶಿಸ್ತುಗಳಲ್ಲಿ ಕಂಡುಬಂದ ವಲಸೆ ಕುರಿತಾದ ಅಧ್ಯಯನ ಕ್ರಮಗಳನ್ನು ವಿಶ್ಲೇಷಿಸಲಾಗಿದೆ. ಹೀಗೆ ನಡೆದಿರುವ ಅಧ್ಯಯನಗಳ ಮೂಲಕ ಸಾಹಿತ್ಯದಲ್ಲಿ ವಲಸೆ ಕುರಿತಾಗಿ ಮೂಡಿಬಂದ ಅಭಿಪ್ರಾಯಗಳನ್ನು ಕ್ರೋಢೀಕರಿಸುತ್ತಲೇ ಪ್ರಸ್ತುತ ಅಧ್ಯಯನ ಈ ಅಭಿಪ್ರಾಯಕ್ಕಿಂತ ಭಿನ್ನ ಹೇಗೆ ಎಂಬುದನ್ನು ಸಾಧಿಸಲಾಗಿದೆ.

**ಪ್ರಕಟಿತ ಮತ್ತು ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ತುಳುವರ ಮುಂಬಯಿ ವಲಸೆ, ಡಾ.ವಿಶ್ವನಾಥ ಕಾರ್ನಾಡ, ೧೯೯೨, ಮುಂಬಯಿ ವಿಶ್ವವಿದ್ಯಾಲಯ[ಪ್ರಕಟಿತ]

೨. ವಲಸಿಗರ ನೆಲೆ ಮರಿಯಮ್ಮನಹಳ್ಳಿ ಸಂಕಥನ, ಡಾ.ಗುರುಪ್ರಸಾದ್, ೨೦೦೮, ಕನ್ನಡ ವಿಶ್ವವಿದ್ಯಾಲಯ [ಪ್ರಕಟಿತ]

೩. ಯಾದಗಿರಿ ಜಿಲ್ಲೆಯ ಅಲೆಮಾರಿಗಳ ಸಾಮಾಜಿಕ ಸ್ಥಿತಿಗತಿಗಳು, ಶಿವಲಿಂಗಪ್ಪ ಎಸ್ ನಾಯಕ, ೨೦೧೩, ಕನ್ನಡ ವಿಶ್ವವಿದ್ಯಾಲಯ[ಅಪ್ರಕಟಿತ]

೪. ಕರ್ನಾಟಕ ಮೂಲನಿವಾಸಿ ಬುಡಕಟ್ಟು ಸಮುದಾಯಗಳ ಪರಿಸರ ಮತ್ತು ಅಭಿವೃದ್ಧಿ ಅರ್ಥಶಾಸ್ತ್ರೀಯ ಅಧ್ಯಯನ, ಸುದರ್ಶನ್ ಕುಮಾರ್ ಎಂ, ೨೦೦೮, ಕನ್ನಡ ವಿಶ್ವವಿದ್ಯಾಲಯ. [ಅಪ್ರಕಟಿತ]

೫ ಹೈದ್ರಾಬಾದ್ ಕರ್ನಾಟಕ ಅಲೆಮಾರಿಗಳ ಸಮಾಜೋ-ಆರ್ಥಿಕ ವ್ಯವಸ್ಥೆ, ಅಜ್ಜಯ್ಯ, ೨೦೦೬, ಕನ್ನಡ ವಿಶ್ವವಿದ್ಯಾಲಯ[ಅಪ್ರಕಟಿತ]

೬. ಲಂಬಾಣಿಗರ ಗೋವಾ ವಲಸೆ, ಗಣಪತಿ ಕೆ.ಲಮಾಣಿ, ೨೦೦೭, ಕನ್ನಡ ವಿಶ್ವವಿದ್ಯಾಲಯ. [ಅಪ್ರಕಟಿತ]

೭. ದಕ್ಷಿಣ ಭಾರತದ ಲಂಬಾಣಿ ಭಾಷೆ ಮತ್ತು ಪ್ರಕೋಶ, ಸಂತೋಷ, ಕನ್ನಡ ವಿಶ್ವವಿದ್ಯಾಲಯ. [ಅಪ್ರಕಟಿತ]

**ಪ್ರಕಟಿತ ಅಪ್ರಕಟಿತ ಎಂ.ಫಿಲ್ ಪ್ರಬಂಧಗಳು**

೧. ಕೃಷ್ಣ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ, ಶಶಿಧರ ಮಲ್ಲಪ್ಪ, ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ(ಅಪ್ರಕಟಿತ)

೨. ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳು(ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ), ೨೦೦೮ ಈರಪ್ಪ ಅಂಬ್ಲಯ್ಯ, ಕನ್ನಡ ವಿಶ್ವವಿದ್ಯಾಲಯ ಹಂಪಿ.(ಅಪ್ರಕಟಿತ)

೩ ನಾ ಡಿಸೋಜ: ಒಂದು ಸಾಹಿತ್ಯಿಕ ಅಧ್ಯಯನ, ಗಂಗೂ ಆರ್. ಮೂಲಿಮನಿ, ೨೦೧೦, ಧಾರವಾಡ ವಿಶ್ವವಿದ್ಯಾಲಯ [ಪ್ರಕಟಿತ]

ಇದುವರೆಗೂ ಪ್ರಸ್ತಾಪಿಸಲಾದ ಅಧ್ಯಯನಗಳಲ್ಲಿ 'ನಾ ಡಿಸೋಜ ಒಂದು ಸಾಹಿತ್ಯಿಕ ಅಧ್ಯಯನ' ಎಂಬ ಪಿಎಚ್.ಡಿ.ಪ್ರಬಂಧವನ್ನು ಹೊರತುಪಡಿಸಿ ಉಳಿದ ಎಲ್ಲ ಅಧ್ಯಯನಗಳು ಸಾಹಿತ್ಯೇತರ ಶಿಸ್ತುಗಳಲ್ಲಿ ಕೈಗೊಂಡ ಅಧ್ಯಯನವಾಗಿದೆ. ಈ ಪ್ರಬಂಧಗಳಲ್ಲಿ ವಲಸೆ ಪರಿಕಲ್ಪನೆ ಕುರಿತಂತೆ ಪ್ರಸ್ತಾಪಿಸಲಾಗಿದ್ದರೂ ಅವು ಕೇವಲ ಕ್ಷೇತ್ರಕಾರ್ಯಗಳ ಮೂಲಕ ಪ್ರದೇಶ, ಜನಾಂಗವನ್ನು ವ್ಯಾಪ್ತಿಯಾಗಿರಿಸಿಕೊಂಡು ವಲಸೆಗಿರುವಂತಹ ಕಾರಣ ಪರಿಣಾಮಗಳನ್ನು ಮಾತ್ರ ಹೆಚ್ಚಾಗಿ ಪ್ರಸ್ತಾಪಿಸಿದ್ದಾರೆ ಹೊರತು ಸಾಹಿತ್ಯಿಕವಾಗಿ ಸಂವೇದನಾತ್ಮಕವಾಗಿ ಅಭಿವ್ಯಕ್ತಿಸಿರುವುದು ಈ ಅಧ್ಯಯನದಲ್ಲಿ ಕಂಡುಬರದೇ ಇರುವುದನ್ನು ಈ ಸಮೀಕ್ಷೆಯಿಂದ ನೋಡಬಹುದು.

ಇನ್ನು ಸಾಹಿತ್ಯದಲ್ಲಿ ವಲಸೆ ಕುರಿತಾಗಿ ಬಂದಿರುವ ಅಧ್ಯಯನಗಳನ್ನು ಗಮನಿಸುವುದಾದರೆ

೧. ಗೋಪಾಲಕೃಷ್ಣ ಪೈರವರ ಸ್ವಪ್ನಸಾರಸ್ವತ ಕಾದಂಬರಿಯಲ್ಲಿ ವಲಸೆ ಪ್ರಕ್ರಿಯೆ[ಎಂ.ಫಿಲ್. ಪ್ರಬಂಧ] ೨೦೧೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ, ಶ್ರೀಮತಿ ಜ್ಯೋತಿಪ್ರಭಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ.[ಎಂ.ಫಿಲ್.ಪ್ರಬಂಧ]

೩. ಗೋಪಾಲಕೃಷ್ಣ ಪೈರವರ ಸ್ವಪ್ನಸಾರಸ್ವತ ಕಾದಂಬರಿ: ಒಂದು ಅಧ್ಯಯನ, ಬಸವರಾಜ ಎಂ. ೨೦೧೨, ಕನ್ನಡ ವಿಶ್ವವಿದ್ಯಾಲಯ. [ಎಂ.ಫಿಲ್.ಪ್ರಬಂಧ]

೪. ಕನ್ನಡ ಕಥನ ಸಾಹಿತ್ಯ ಗ್ರಾಮನಗರಗಳ ದ್ವಂದ್ವಾತ್ಮಕತೆ(ಮುಂಬಯಿ ಕರ್ನಾಟಕವನ್ನು ಅನುಲಕ್ಷಿಸಿ), ಶ್ರೀ ಲಿಂಗದಹಳ್ಳಿ ಹಾಲಪ್ಪ, ೨೦೦೯, ಕನ್ನಡ ವಿಶ್ವವಿದ್ಯಾಲಯ. [ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ]

**ಕೃತಿಗಳು**

೧. ಕನ್ನಡಿಗರ ಗೋವ ವಲಸೆ, ಹರಿಶ್ಚಂದ್ರ ದಿಗ್ಸಂಗಿಕರ್, ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಸಿ.ಮಹಾದೇವ, ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಭಾರತದ ಕುರುಬರು, ಡಾ.ಶ್ಯಾಂಸಿಂಗ್ ಶಶಿ(ಕ) ಡಾ.ಬಿ.ಕೆ.ರವಿ(ಮೂಲ) ಇಂಗ್ಲೀಷ್

೪. ಜನಸಮುದಾಯ ಸಂಪುಟ, ಎಚ್.ಡಿ.ಪ್ರಶಾಂತ, ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಡಯಾಸ್ಪೊರಾ, ಆರ್. ತಾರಿಣಿ ಶುಭದಾಯಿನಿ, ೨೦೧೬, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ.

ಒಟ್ಟಾರೆಯಾಗಿ ಹೇಳುವುದಾದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೂ ನಡೆದಿರುವ ಪಿಎಚ್.ಡಿ., ಎಂ.ಫಿಲ್.ಪ್ರಬಂಧಗಳು ಬಿಡಿಬರಹಗಳು ಸಮುದಾಯಗಳಿಗೆ ಸಂಬಂಧಿಸಿದ ಕೃತಿಗಳನ್ನು ಗಮನಿಸಿದಾಗ ವಲಸೆ ಕುರಿತಾಗಿ ಕೆಲವೊಂದು ಪ್ರದೇಶ ಹಾಗೂ ಜನಾಂಗಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನವನ್ನು ಕೈಗೊಂಡಿದ್ದಾರೆ. ಅದರಲ್ಲೂ ಸಾಹಿತ್ಯೇತರ ಶಿಸ್ತುಗಳಲ್ಲಿ ಕಂಡುಬಂದ ಅಧ್ಯಯನಗಳು ಭಿನ್ನ ಉದ್ದೇಶಗಳನ್ನು ಒಳಗೊಂಡ ಅಧ್ಯಯನವಾಗಿದೆ. ಹಾಗೆಯೆ ಈ ಅಧ್ಯಯನಗಳಲ್ಲಿ ವಲಸೆಗಿರುವಂತಹ ಕಾರಣ ಪರಿಣಾಮಗಳನ್ನು ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ಹಾಗಾಗಿ ಕಥನ ಸಾಹಿತ್ಯದಲ್ಲಿ ವಲಸೆ ಕುರಿತಾಗಿ ಸಮಗ್ರ ಅಧ್ಯಯನ ಮಾಡುವುದು ತುಂಬ ಉಪಯುಕ್ತವಾಗಿದೆ.

ಮಂಗಳೂರು ವಿಶ್ವವಿದ್ಯಾಲಯದಲ್ಲಿ ಶಿವರಾಮ ಕಾರಂತರ ಕಾದಂಬರಿಗಳಲ್ಲಿ ವಲಸೆ ಎನ್ನುವ ವಿಷಯದ ಕುರಿತು ಪ್ರಸ್ತುತವಾಗಿ ಅಧ್ಯಯನವನ್ನು ಕೈಗೊಂಡಿದ್ದಾರೆ. ಆದರೆ ಇದು ಕೇವಲ ಒಬ್ಬ ಲೇಖಕರ ಕಾದಂಬರಿಗಷ್ಟೇ ಸೀಮಿತವಾಗಿರುವುದು ಕಂಡುಬರುತ್ತದೆ.

**ದಿನಪತ್ರಿಕೆಗಳಲ್ಲಿ ಬಂದಂತಹ ಲೇಖನಗಳು**

೧. ವಲಸೆಯ ಶೂನ್ಯ ಸಂಪಾದನೆ ಮಾದರಿ ಗ್ರಾಮದ ಪರಿಕಲ್ಪನೆ, ಗೋಪಾಲ್ ಗುರು ರವರ (ಪ್ರಜಾವಾಣಿ, ಜನವರಿ ೨೬, ೨೦೧೪, ಸಾಪ್ತಾಹಿಕ ಪುರವಾಣಿ)ಈ ಲೇಖನದಲ್ಲಿ ಇತ್ತೀಚಿನ ದಿನಗಳಲ್ಲಿ ಜಾಗತೀಕರಣದಿಂದ ಹಳ್ಳಿಯ ಭಾಗದ ಜನರು ನಗರಗಳಿಗೆ ವಲಸೆ ಹೋದಾಗ ಆ ಹಳ್ಳಿಗಳನ್ನು ಕಾರ್ಪೋರೇಟ್‌ಗಳು ಖರೀದಿ ಮಾಡಿ ಮತ್ತೆ ನಗರಗಳಾಗಿ ಪರಿವರ್ತನೆ ಗೊಂಡಾಗ ಹಳ್ಳಿಗಳ ಸಾಂಸ್ಕೃತಿಕ ಬದುಕು ಕಳಚಿ, ಗಾಂಧೀಜಿ ಗ್ರಾಮದ ಪರಿಕಲ್ಪನೆ ನಾಶವಾಗುತ್ತಿರುವ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ.

೨. ಜೀವವೈವಿಧ್ಯಕ್ಕೆ ಎಳ್ಳು ನೀರು, (ವಿಜಯ ಕರ್ನಾಟಕ) ವಿನಯ ರವರ ಈ ಲೇಖನದಲ್ಲಿ ಇವತ್ತೀನ ದಿನಗಳಲ್ಲಿ ಕಾಡಿನಲ್ಲಿ ವಾಸಿಸುತ್ತಿರುವ ಕಾಡು ಪ್ರಾಣಿಗಳ ವಲಸೆಯನ್ನು ತಡೆಗಟ್ಟಲೆಂದು ಕಾಡಿನಲ್ಲಿ ಕೃತಕ ಆಹಾರ, ನೀರು ಪೂರೈಕೆ ಮಾಡುತ್ತಿರುವುದರಿಂದ ಅರಣ್ಯಗಳ ಮೇಲೆ ಒತ್ತಡ ಹೆಚ್ಚುತ್ತಾ ಅಸಮತೋಲನ ಉಂಟಾಗುತ್ತಿರುವುದರಿಂದ ಪ್ರಾಣಿಗಳ ಸಂತತಿ ನಾಶವಾಗುವುದರ ಕುರಿತು ಚರ್ಚಿಸಿದ್ದಾರೆ.

೩. ನಾಲ್ಕು ಸಾವಿರ ವರ್ಷದ ಹಿಂದೆಯೇ ಆಸ್ಟ್ರೇಲಿಯಾ ನೆಲದಲ್ಲಿ ನಾವು, (ವಿಜಯ ಕರ್ನಾಟಕ, ಜನವರಿ ೧೯, ೨೦೧೩) ಜರ್ಮನಿಯ ಮಾರ್ಕ್ಸ್ ಪ್ಲಾಂಕ್ ಇನ್‌ಸ್ಟಿಟ್ಯೂಷನ್ ನಡೆಸಿದ ವಂಶಾವಳಿ ಅಧ್ಯಯನದ ಪ್ರಕಾರ ನಾಲ್ಕು ಸಾವಿರ ವರ್ಷಗಳ ಹಿಂದೆಯೇ ಭಾರತೀಯರು ಆಸ್ಟ್ರೇಲಿಯಕ್ಕೆ ವಲಸೆ ಹೋಗಿದ್ದರು. ಎಂಬ ಶೋಧನೆಯ ವಿವರವನ್ನು ವಿವರಿಸಲಾಗಿದೆ.

೪. ಕೆಲ್ಸ ಕೊಟ್ಟಿಲ್ಲ ಗುಳೆ ತಪ್ಪಿಲ್ಲ, ಕೃಷ್ಣ ಎನ್.ಲಮಾಣಿ–ಈ ಲೇಖನದಲ್ಲಿ ಸರ್ಕಾರ ಬೇಸಿಗೆ ಸಮಯದಲ್ಲಿ ಹಳ್ಳಿಗಳಲ್ಲಿ ಉದ್ಯೋಗ ಖಾತ್ರಿ ಯೋಜನೆಗಳು ತಂದಿದ್ದರೂ ಅವು ಅಧಿಕಾರಿಗಳ ದುರ್ಬಳಕೆಯಿಂದ ಜನರು ವಲಸೆ ಹೋಗಿದರ ವಿವರಣೆ ನೀಡುತ್ತದೆ.

೫. ಎಲ್ಲಿಂದಲೋ ಬಂದವರು, ಪ್ರಫುಲ್ಲ ಸವಿತ, (ಸಂಯುಕ್ತ ಕರ್ನಾಟಕ, ಸಾಪ್ತಾಹಿಕ, ಸೌರಭ)

ಈ ಲೇಖನದಲ್ಲಿ ಬರಗಾಲದಂತಹ ಸಮಯದಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡಿನಿಂದ ನಗರಗಳಿಗೆ ಬಂದ ಜನರ ಸ್ಥಿತಿಗತಿಯ ಕುರಿತು ಚಿತ್ರಿಸಿದ್ದಾರೆ.

೬. ವಲಸೆಯ ನಾನಾ ಬಣ್ಣಗಳು, ಚಿದಾನಂದ ರಾಜಘಟ್ಟ, (ವಿಜಯ ಕರ್ನಾಟಕ, ಫೆಬ್ರವರಿ ೧೬, ೨೦೧೩)

ಈ ಲೇಖನದಲ್ಲಿ ಭಾರತದಿಂದ ಹೊರದೇಶಗಳಿಗೆ ವಲಸೆ ಹೋಗುತ್ತಿರುವ ವಿದ್ಯಾವಂತರಿಂದ ಭಾರತದಲ್ಲಿ ಪ್ರತಿಭೆಯುಳ್ಳ ಜನರು ಪಲಾಯನವಾದಾಗ ಅಮೆರಿಕಾದ ಆರ್ಥಿಕ ನೀತಿ ಹೆಚ್ಚಾಗುತ್ತಿರುವುದರ ಕುರಿತು ಚರ್ಚಿಸಲಾಗಿದೆ.

೭. ಶಹರಗಳಿಗೆ ಹೋಗಿ ಸ್ವತಂತ್ರರಾದ ದಲಿತರು, ಚಂದ್ರಬಾನ್ ಪ್ರಸಾದ್ ಮತ್ತು ಮಿಲಿಂದ್ ಕಾಂಬ್ಳೆ, (ವಿಜಯ ಕರ್ನಾಟಕ, ಡಿಸೆಂಬರ್ ೧೪, ೨೦೧೩)

ಈ ಲೇಖನದಲ್ಲಿ ಮೇಲ್ವರ್ಗದವರಿಂದ ತುಳಿತಕ್ಕೊಳಗಾದ ದಲಿತರು ನಗರಗಳಿಗೆ ವಲಸೆ ಹೋಗಿ ಸಾಮಾಜಿಕ ಸಮಾನತೆಯನ್ನು ಪಡೆಯುತ್ತಿರುವದರ ಕುರಿತಾಗಿದೆ.

೮. ಮೀಸಲು ಹೋರಾಟದಲ್ಲಿ ಬಾಂಗ್ಲ ವಲಸೆಗರ ಕಣ್ತೆರದಿತೆ ಸರಕಾರ?, ತುರುವಿನಾಳ ಚಂದ್ರು, (ವಿಜಯ ಕರ್ನಾಟಕ, ಜುಲೈ ೧೬, ೨೦೧೩)

ಈ ಲೇಖನದಲ್ಲಿ ಬಾಂಗ್ಲ ವಿಭಜನೆಯಾದಂತಹ ಸಮಯದಲ್ಲಿ ಬಾಂಗ್ಲ ಜನರು ಭಾರತಕ್ಕೆ ವಲಸೆ ಬಂದಾಗ ಕರ್ನಾಟಕ, ಇರುವುದಕ್ಕೆ ಶೆಡ್‌ಗಳನ್ನು ಹಾಕಿಕೊಟ್ಟಿತ್ತು. ಆದರೆ ನಾಲ್ಕು ದಶಕ ಕಳೆದರೂ ನಾಗರಿಕತ್ವ ವಲಸಿಗರ ಜಾತಿ ಪ್ರಮಾಣ ಪತ್ರದಂತಹ ಸಮಸ್ಯೆಗಳಿಗೆ ಸ್ಪಂದಿಸದೇ ಇರುವುದರಿಂದ ಉಂಟಾದ ಬಾಂಗ್ಲ ನಿರಾಶ್ರಿತರ ಸಮಸ್ಯೆಯ ಮೇಲೆ ಈ ಲೇಖನ ಬೆಳಕು ಚೆಲ್ಲುತ್ತದೆ.

೯. ಅಧಿಕಾರ ವಿಕೇಂದ್ರೀಕರಣ ಅನಿವಾರ್ಯ, ಎಂ.ಚಂದ್ರಪೂಜಾರಿ, (ವಿಜಯ ಕರ್ನಾಟಕ, ಮೇ, ೧೭, ೨೦೧೩)

ಈ ಲೇಖನದಲ್ಲಿ ಬರಗಾಲದ ಸಮಯದಲ್ಲಿ ಜನರು ವಲಸೆ ಹೋಗುವುದನ್ನು ತಡೆಯುವುದಕ್ಕಾಗಿ ಒಣಬೇಸಾಯಕ್ಕೆ ಒತ್ತು ನೀಡಬೇಕು. ಇದರಿಂದ ಪೇಟೆಯ ಕೊಳೆಗೇರಿ ಸಮಸ್ಯೆಗಳು ಕಡಿಮೆಯಾಗುತ್ತವೆ ಎಂಬುದು ಈ ಲೇಖನದ ಆಶಯವಾಗಿದೆ.

೧೦. ವಲಸೆಯ ಹಿಂದಿನ ರಾಜಕೀಯ ಮತ್ತು ವಿಕಸನ–ನರೇಂದ್ರ ದೇರ್ಲ, (ವಿಜಯವಾಣಿ, ಜನವರಿ ೧೬, ೨೦೧೩)

ರೈತರ ವಲಸೆಯನ್ನು ತಪ್ಪಿಸಲೆಂದು ಬಂದ ಸರಕಾರದ ನರೇಗಾ ಯೋಜನೆ, ರಾಜಕಾರಣಿಗಳ ಅಧಿಕಾರಿಗಳ ಕೈವಾಡದಿಂದ ವಿಫಲತೆ ಹೊಂದಿರುವ ಕುರಿತು ಚರ್ಚಿಸಿದ್ದಾರೆ.

**ಅಂಕಣ ಬರಹಗಳು**

೧. ಸೇತುವೆ ಬೇಕು ಸೇತುವೆ, ನಾ.ಡಿಸೋಜ, (ಕೆಂಡಸಂಪಿಗೆ ಪತ್ರಿಕೆ, ಡಿಸೆಂಬರ್ ೯, ೨೦೧೨, ಅಂತರ್ಜಾಲ)

ಈ ಲೇಖನದಲ್ಲಿ ಲಿಂಗನಮಕ್ಕಿ ಅಣೆಕಟ್ಟು ನಿರ್ಮಾಣದಿಂದಾಗಿ ಅಲ್ಲಿಯ ಸುತ್ತಮುತ್ತಲಿನ ಗ್ರಾಮಗಳ ಜನರಿಗೆ ಉಂಟಾದ ಸಮಸ್ಯೆಯ ಕುರಿತು ಚರ್ಚಿಸಿದ್ದಾರೆ.

೨. ಮತ್ತೆ ಮತ್ತೆ ಮುಳುಗಡೆ, ನಾ.ಡಿಸೋಜ, (ಕೆಂಡಸಂಪಿಗೆ, ಜುಲೈ ೭, ೨೦೧೨)

ಈ ಲೇಖನದಲ್ಲಿ ಸಹ ಅಣೆಕಟ್ಟು ನಿರ್ಮಾಣದಿಂದಾಗಿ ಜನರು ಅನುಭವಿಸಿದ ನೋವನ್ನು ವಿವರಿಸಲಾಗಿದೆ.

**ಮಾಸಪತ್ರಿಕೆ**

೧. ಸಂಪಾದಕೀಯ, ವಲಸೆ ಮಹಿಳೆಯರ ಸಮಸ್ಯೆಗಳು, ನಮ್ಮ ಮಾನಸ, ಸಂಪುಟ ೫, ಸಂಚಿಕೆ ೫, ೨೦೧೨.

೨. ಷರೀಪಾ, ಕೆ. ಮಹಿಳೆ ಮತ್ತು ಜಾಗತೀಕರಣ, ವಿಚಾರ ಸಾಹಿತ್ಯ, ೨೦೦೭, ಕನ್ನಡ ಸಾಹಿತ್ಯ ಆಕಾಡೆಮಿ.

೩. ಮಂಜುನಾಥ ಬೇವಿನಕಟ್ಟಿ, ಸ್ಥಳ ಪಲ್ಲಟ ವಲಸೆ ಮತ್ತು ಬುಡಕಟ್ಟು ಮೌಖಿಕ ಸಂಕಥನ, (ಆದಿವಾಸಿ ೨೦೦೭, ಸಾಹಿತ್ಯ ನಂದನ ಬೆಂಗಳೂರು.)

೪. ನಿರಂಜನ ವಾನಳ್ಳಿ, ನಗರದಲ್ಲಿರಲಾರೆ ಹಳ್ಳಿಗೆ ಹೋಗಲಾರೆ, (ಅರಹು ಕುರುಹು, ಸಂ.೬, ೧-೩-೧೫.)

೫. ಬಾಲಚಂದ್ರ ಹೆಗ್ಗಡೆ, ಹಳ್ಳಿಯ ಕಷ್ಟಗಳ ನಡುವೆ ಬದುಕು ಇದೆಯೇ?, (ಅರಹು ಕುರುಹು, ಸಂ.೬, ೧-೩-೧೫.)

೬. ಸರೋಜ ಪ್ರಭಾಕರ್, ವಲಸೆ, (ತರಂಗ ಪತ್ರಿಕೆ, ೨-೧-೧೪.)

೭. ಪುರುಷೋತ್ತಮ ಬಿಳಿಮಲೆ, ಸಮುದಾಯ ವಲಸೆ,ಕೊರಗರ ಉದಾಹರಣೆ, (೨೦೦೮, ಕ್ರೈಸ್ತ್ ಯೂನಿರ್ವಸಿಟಿ, ಬೆಂಗಳೂರು.)

೮. ದಿವಾಕರ. ನಾ. ನಿರಾಶ್ರಿತರಿಗೆ ಸ್ಪಂದಿಸಲು ಬೇಕು ಆಶ್ರಿತ ಮಾನವತೆ, (ಹೊಸತು ಪತ್ರಿಕೆ, ೨೦೧೫, ಡಿಸೆಂಬರ್)

೯. ಡಾ. ಆರ್. ಶುಭದಾಯಿನಿ ಕನ್ನಡದಲ್ಲಿ ವಲಸೆಯ ಪ್ರವೃತ್ತಿ ಮತ್ತು ವಲಸಿಗ ಸಮುದಾಯಗಳು. (ಬೆಟ್ಟದ ಮೇಲಿನ ಬೆಳಕು, ೨೦೧೫, ಕನ್ನಡ ಸಾಹಿತ್ಯ ಪರಿಷತ್)

೧೦. ಗೀತಾನಾಗಭೂಷಣ, ಗುಳೆ, ಸುಧಾ ಪತ್ರಿಕೆ, ೨೦೧೫

೧೧ ಪುರುಷೋತ್ತಮ ಬಿಳಿಮಲೆ, ಕನ್ನಡಿಗರ ವಲಸೆಯ, ಸುತ್ತಮುತ್ತ, ಬಹುರೂಪ

**೨. ವಲಸೆ ಪದದ ಅರ್ಥ:** "ವಲಸೆ ಎಂಬ ಪದ ಎನ್‌ಸೈಕ್ಲೊಪಿಡಿಯಾ ಆಫ್ ದಿ ಸೋಶಿಯಲ್ ಸೈನ್ಸ್ ಗ್ರಂಥದಲ್ಲಿ ಆಂಗ್ಲ ಭಾಷೆಯ ಮೈಗ್ರೇಟ್ ಪದ ಲ್ಯಾಟಿನ್ ಪದವಾದ ಮೈಗ್ರೆ ಇಂದ

ಬಂದಿರುವುದು ಎಂದು ಉಲ್ಲೇಖಗೊಂಡಿದೆ. ಇದರ ಅರ್ಥ. To change one's residence but current definitions it means rather to change one's communities" (ಡಾ.ಸಿ.ಮಹಾದೇವ, ೧೯೯೯, ಪು.೧೩) ಎಂಬ ಅರ್ಥವನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ ಎಂಬ ಕೃತಿಯಲ್ಲಿ ಡಾ. ಮಹಾದೇವ ರವರು ವಲಸೆ ಕುರಿತ ಪದದ ಅರ್ಥವನ್ನು ಈ ಕೆಳಗಿನಂತೆ ಕೊಟ್ಟಿದ್ದಾರೆ.

"ದ್ರಾವಿಡ ಭಾಷೆಗಳ ಗ್ರಾಂಥಿಕ ಮತ್ತು ಆಡುಮಾತಿನಲ್ಲಿ ವಲಸೆ ಪದದ ಸ್ವರೂಪ ಇಂತಿದೆ.

ಕನ್ನಡ : 'ವಲಸೆ' – 'ಒಲಸೆ' – 'ಒಲಿಸೆ'

ತಮಿಳು : 'ವಲಚೈ' – 'ವಲಚಲ್'

ತೆಲುಗು : ವಲಸ

ದ್ರಾವಿಡ ಆಡುಮಾತಿನ ರೂಪಗಳು

ಕನ್ನಡ : 'ವಲಜಲ್'

ತಮಿಳು : 'ವಲಚೈ'

ತೆಲುಗು : ಒಟಿ್ಚದಲ್"(ಅದೇ, ಪು.೧೩)

"ಕಿಟಲ್ ಶಬ್ದಕೋಶ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಇಂಗ್ಲೀಷ್ ಕನ್ನಡ ನಿಘಂಟುವಿನಲ್ಲಿ ವಲಸೆ ಎಂಬ ಪದಕ್ಕೆ

Migration- ಎಂದರೇ ವಲಸೆ ಹೋಗುವುದು

Migrant-ವಲಸಿಗ

Migrate-ವಲಸೆ ಒಂದು ಸ್ಥಳದಿಂದ(ದೇಶದಿಂದ ಊರಿನಿಂದ, ಮನೆಯಿಂದ, ಪ್ರೌಢಶಾಲೆಯಿಂದ) ಮತ್ತೊಂದು ಸ್ಥಳಕ್ಕೆ ಹೋಗು, ವಲಸೆ, ಹೋಗು ಹಕ್ಕಿಗಳು, ಮೀನುಗಳು, ಆಯಾ ಋತುಮಾನಗಳಲ್ಲಿ ಬರುವುದು, ಹೋಗುವುದು."(ಅದೇ, ಪು.೧೩–೧೪) ಎಂದು ಇದೆ. ಹಾಗೆಯೆ,

Migration ನ ಇನ್ನೊಂದು ಪದವೇ Immigration ಈ ಪದಕ್ಕೆ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ "ಇಂಗ್ಲೀಷ–ಕನ್ನಡ ನಿಘಂಟುವಿನಲ್ಲಿ ವಲಸೆ ಹೋಗುವುದು ಗುಳೆ ಹೋಗುವುದು ಎನ್ನುವ ಅರ್ಥವನ್ನು ಹೊಂದಿದೆ" (ಅದೇ, ಪು.೧೪–೧೫) ಮತ್ತು ಇದಕ್ಕೆ ಇನ್ನೊಂದು ಪದವೆಂದರೆ Emigrate "ದೇಶದಲ್ಲಿ ನೆಲಸುವುದಕ್ಕಾಗಿ ವಲಸೆ ಹೋಗು, ಗುಳೆ

ಹೋಗು, ಒಕ್ಕಲು ಹೋಗು ಎಂದಿದೆ. ಹಾಗೆಯೆ ಪ್ರಾದೇಶಿಕವಾಗಿ ಅಥವಾ ಆಡುಮಾತಿನಲ್ಲಿ ವಲಸೆ ಎನ್ನುವುದನ್ನು ಗುಳೆ ಎನ್ನುವ ಪದದಿಂದಲೂ ಕರೆಯಲಾಗಿದೆ. ಗುಳೆ (ದೇಗುಳಿಯ)(ನಾ) ಜನರು ಒಂದು ಕಡೆಯಿಂದ ಇನ್ನೊಂದು ಕಡೆ ವಲಸೆ ಹೋಗುವುದು"(ಅದೇ, ಪು.೧೪) ಎಂದಿದೆ.

ಕಿಟಲ್‌ರವರ ಕನ್ನಡ-ಇಂಗ್ಲೀಷ ನಿಘಂಟಿವಿನಲ್ಲಿ ಪ್ರವಾಸ ಎಂದರೆ "So Journing abroad foreign residence, being away from home; a temporary sojourn a foreign abode' ದುಃಖವನ್ನು ಮರೆಯಬೇಕೆಂದು ಪ್ರವಾಸಕ್ಕೆ ಹೊರಟನು"(ಕಿಟೆಲ್, ೨೦೦೬, ಪು.೧೦೪೬).

ಕನ್ನಡ ಸಾಹಿತ್ಯ ಪರಿಷತ್ ನಿಘಂಟಿವಿನಲ್ಲಿ ಪಯಣ ಎಂದರೆ "ಪಯಣ-ಪೈಣ(ನಾ) ಪ್ರವಾಸ; ಪ್ರಸ್ಥಾನ: ಪ್ರಯಾಣ, ಯಾತ್ರಾ ಪ್ರಯಾಣಂ, ಪ್ರಸ್ಥಾನಂ ಈ ೩ ಪಯಣಂ" ಶತೃ ಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ, ದಂಡಯಾತ್ರೆ; ಒಂದು ದಿನದಲ್ಲಿ ನಡೆಯುವ ಹಾದಿ-ಮಾರ್ಗ, ಒಂದು ದಿನದ ಹಾದಿ"(ಕನ್ನಡ ಸಾಹಿತ್ಯ ಪರಿಷತ್, ಸಂಪುಟ೫, ೧೯೯೩, ಪು.೫೨೫೮) ಎಂದಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿವಿನಲ್ಲಿ ಒಕ್ಕಲು ಎಂದರೇ "ಒಕ್ಕಲ್ವೋಗು, ಒಕ್ಕಲುಹೋಗು(ಕ್ರಿ) ಒಕ್ಕಲುತೆಗೆ, ವಲಸೆಹೋಗು" ಎಂದಿದೆ, (ಅದೇ, ಸಂಪುಟ೧, ಪು.೧೧೮೯)

"ಗುಳೆಕಟ್ಟು- (ಕ್ರಿ) ಬರಗಾಲ ಮುಂತಾದ ಕಷ್ಟ ಕಾಲದಲ್ಲಿ ವಲಸೆ ಹೋಗಲು ಗುಂಪುಕೂಡು, ಒಟ್ಟಿಗೆಸೇರು," (ಅದೇ, ಪು.೨೫೭೫)

"ಯಾತ್ರೆ-ಪಯಣ, ಪ್ರಯಾಣ, ಯುದ್ದಕ್ಕಾಗಿ ಸೈನ್ಯ ಹೊರಡುವುದು" ಎಂದಿದೆ (ಅದೇ,ಪು.೭೫೮೯)

ಪ್ರೊ.ಜಿ. ವೆಂಕಟಸುಬ್ಬಯ್ಯನವರು ಸಂಪಾದಿಸಿದ ಕನ್ನಡ ನಿಘಂಟುವಿನಲ್ಲಿ ಒಕ್ಕಲು ಪದಕ್ಕೆ ಒಕ್ಕಲೆತ್ತು(ಕ್ರಿ)= "ಸಂಸಾರ ಸಹಿತವಾಗಿ ಮನೆ ಬಿಟ್ಟು ಹೋಗು, ಗುಳೆ ಹೋಗು" ಎಂದಿದೆ. (ಅದೇ,ಪು.೬೬)

ತುಳು ನಿಘಂಟಿವಿನಲ್ಲಿ "ಒಕ್ಕೆಲ್ ಪೋಪನಿ- ಮನೆ ಖಾಲಿಮಾಡಿ ಹೋಗುವುದು, ವಲಸೆ ಹೋಗುವುದು, ಒಕ್ಕಲು ಹೋಗುವುದು, ವಲಸೆ ಹೋಗೋಣ" ಎಂದಿದೆ.(ಅದೇ,ಪು.೫೦೨)

ಹೀಗೆ ಈ ಎಲ್ಲಾ ಪದಗಳಲ್ಲಿಯೂ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವ ಕ್ರಿಯೆ ಒಂದೇ ತೆರನಾದರೂ ವಲಸೆ ಎಂಬ ಪದ ಭಿನ್ನ ಅರ್ಥವನ್ನು ಹೊಂದುತ್ತದೆ. ಏಕೆಂದರೆ ಪ್ರವಾಸ, ಪ್ರಯಣ, ಗುಳೆ, ಒಕ್ಕಲು ಎಂಬ ಪದಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿ ಕೆಲವು ದಿನಗಳವರಗೆ ಅಲ್ಲಿದ್ದು ಮತ್ತೇ ತಮಗೆ ಅನುಕೂಲವೆನಿಸಿದಾಗ ತಮ್ಮ ಕೆಲಸ

ಕಾರ್ಯಗಳು ಪೂರ್ಣಗೊಂಡಾಗ ಪುನಃ ತಮ್ಮ ಊರಿಗೆ ಬರುವುದಾಗಿದೆ. ಆದರೆ, ವಲಸೆ ಎಂದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹಲವಾರು ಕಾರಣಗಳಿಗಾಗಿ ಹೋಗಿ ಅಲ್ಲೇ ನೆಲೆಯಾಗುವುದಾಗಿದೆ. ಹಾಗಾಗಿ ವಲಸೆ ಮತ್ತು ಚಲನೆಯ ರೂಪದಲ್ಲಿರುವ ಪಯಣ, ಪ್ರಯಾಣ, ಗುಳೆ, ಪ್ರವಾಸದಂತಹ ಪದಗಳ ಪರಿಕಲ್ಪನೆಯ ಅರ್ಥ ಸ್ವಲ್ಪಮಟ್ಟಿನಲ್ಲಿ ಬೇರೆಯದೇ ಆಗಿದೆ.

ಆದರೆ ಗುಳೆ, ಒಕ್ಕಲು ಎಂಬ ಪದದ ಅರ್ಥ ಬರಗಾಲ ಪ್ರಾಕೃತಿಕ ವೈಪರೀತ್ಯದಂತಹ ಸಮಯದಲ್ಲಿ ತಾವಿದ್ದ ಪ್ರದೇಶವನ್ನು ಬಿಟ್ಟು ಮತ್ತೊಂದೆಡೆಗೆ ಹೋಗಿ ತಮಗೆ ಅನುಕೂಲವೆನಿಸಿದಾಗ ಬರುವುದೇ ಆದರೂ ಇತ್ತೀಚೀನ ದಿನಗಳಲ್ಲಿ ವಲಸೆ ಹಾಗೂ ಗುಳೆ, ಒಕ್ಕಲು ಎಂಬ ಪದಗಳಿಗೆ ಒಂದೇ ಅರ್ಥವನ್ನು ಕೊಡುತ್ತಿವೆ, ಇದರಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಸಹ ಇಲ್ಲಿ ಗಮನಿಸಬಹುದು, ಉದಾಹರಣೆಗೆ ಗೀತಾನಾಗಭೂಷಣರವರ ಕತೆಗಳಲ್ಲಿ ಬರಗಾಲದ ನಿಮಿತ್ಯ ಕುಟುಂಬ ವಲಸೆ ಬಂದು ಮತ್ತೊಂದು ಕಡೆ ನೆಲೆಯಾದರೂ ಸಹ ಅವರು ಗುಳೆ ಬಂದರೂ ಎಂಬ ಪದವನ್ನೇ ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಹೀಗೆ ಗುಳೆ, ವಲಸೆ, ಒಕ್ಕಲು ಎಂಬ ಪದಗಳು ಒಂದೇ ಎನ್ನುವ ಅರ್ಥದಲ್ಲಿ ಬಳಕೆಯಾಗಿವೆ.

ಹಾಗೆಯೆ ಇತ್ತೀಚೀನ ದಿನಗಳಲ್ಲಿ ವಲಸೆ ಎಂಬ ಪದ ಹಲವು ಕ್ಷೇತ್ರಗಳಲ್ಲಿ ಬಳಕೆಯಾಗುತ್ತಿದೆ. ಉದಾಹರಣೆಗೆ ಸಿನಿಮಾ, ರಾಜಕೀಯದಂತಹ ಕ್ಷೇತ್ರಗಳಲ್ಲಿಯೂ ಕಂಡುಬರುತ್ತಿದೆ. ಇಂದಿನ ದಿನಪತ್ರಿಕೆಗಳಲ್ಲಿ ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಹೋಗುವ ರಾಜಕಾರಣಿಗಳನ್ನು, ಒಂದು ಭಾಷೆಯ ಸಿನಿಮಾದಿಂದ ಮತ್ತೊಂದು ಭಾಷೆಯ ಸಿನಿಮಾಕ್ಕೆ ಹೋಗುವ ನಟ-ನಟಿಯರನ್ನು ವಲಸಿಗರು ಎಂಬ ಅರ್ಥದಲ್ಲಿ ಪತ್ರಿಕಾ ಮಾಧ್ಯಮದವರು ಬಿಂಬಿಸುತ್ತಿದ್ದಾರೆ. ಮತ್ತು ರಾಜಕಾರಣಿಗಳು ಸಹ ಒಂದು ಕಡೆಗೆ ಅಂದರೆ ಮೂಲನೆಲೆಯಲ್ಲಿ ಬೇರೂರುವ ಬದಲಿಗೆ ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಅಲೆಯುವ ಸ್ಥಿತಿ ವಲಸೆಯ ಪರಿಕಲ್ಪನೆಯನ್ನು ನೆನೆಪಿಸಿಕೊಡುತ್ತದೆ. ಹೀಗಾಗಿ ವಲಸೆ ಎಂಬ ಪದ, ವಿಸ್ತೃತಗೊಂಡಿರುವ ಬಗೆಯನ್ನು ಇಲ್ಲಿ ಕಾಣಬಹುದಾಗಿದೆ.

ಹಾಗೆಯೆ ಈ ವಲಸೆಯಲ್ಲಿಯೂ ಸಹ ಆದಿಮ, ಮಧ್ಯಕಾಲೀನ ಮತ್ತು ಆಧುನಿಕ ವಲಸೆಯನ್ನಾಗಿ ಗಮನಿಸಬಹುದಾಗಿದೆ. ಹೆಚ್ಚಾಗಿ ಆಧುನಿಕ ಕಾಲದ ವಲಸೆಯನ್ನೇ ಇಲ್ಲಿ ಹೆಚ್ಚು ಪ್ರಸ್ತಾಪಿಸಲಾಗಿದೆ. ಏಕೆಂದರೆ ಆಕ್ರಮಣ, ಬೇಟೆ, ಸಾಂಕ್ರಮಿಕ, ರೋಗಗಳಿಂದಾಗಿ ವಲಸೆ ಹೋಗುತ್ತಿದ್ದಂತಹ ಸನ್ನಿವೇಶಗಳು ಇವತ್ತಿನ ದಿನಗಳಲ್ಲಿ ಬದಲಾಗಿ ಶಿಕ್ಷಣ, ನಿರುದ್ಯೋಗ, ಅಣೆಕಟ್ಟು ನಿರ್ಮಾಣದಂತಹ ಕಾರಣಗಳು ಇಂದು ಹೆಚ್ಚು ಮನುಷ್ಯರನ್ನು ವಲಸೆಗೆ ಪ್ರೇರೆಪಿಸುವಂತಹ ಸನ್ನಿವೇಶಗಳನ್ನು ಹುಟ್ಟು ಹಾಕುತ್ತಿವೆ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ.

### ೩. ವಲಸೆ ಕುರಿತ ವ್ಯಾಖ್ಯಾನಗಳು

ವಲಸೆ ಎಂದರೇನು? ಎಂಬ ಪ್ರಶ್ನೆಗೆ ವಿವಿಧ ಶಾಸ್ತ್ರಜ್ಞರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಿನಿಸಿದ್ದಾರೆ. ಆ ವ್ಯಾಖ್ಯಾನಗಳೂ ಈ ಕೆಳಗಿನಂತಿವೆ.

1 Encyclopaedia Dictionary of Sociology ಗ್ರಂಥದಲ್ಲಿ "Migration refers to the migration of particular class or category of people from one area to another, thus the migrants moving from one area to another, may be primary negro, upper calss protestant etc with other ಅಂದರೆ ಸಮಾಜವಿಜ್ಞಾನ ವಿಶ್ವಕೋಶದ ಪ್ರಕಾರ ವಲಸೆ ಎನ್ನುವುದು ಒಂದು ನಿರ್ದಿಷ್ಟ ವರ್ಗ ಅಥವಾ ಗುಂಪಿನ ಜನ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಅಥವಾ ಸ್ಥಳಾಂತರಗೊಳ್ಳುವುದಕ್ಕೆ ಸಂಬಂಧಪಟ್ಟಿದ್ದು. ಈ ರೀತಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗುವುದು ಪ್ರಮುಖವಾಗಿ ನಿಗ್ರೋಗಳು. ಸಮಾಜದ ಉನ್ನತ ಶ್ರೇಣಿಯವರು, ಬಂಡಾಯಗಾರರು ಮತ್ತು ಇನ್ನುಳಿದವರು ಇತ್ಯಾದಿ".(ಡಾ.ಸಿ.ಮಹಾದೇವ, ೧೯೯೯, ಪು.೧೫)

೨. International Encyclopaedia of Social Science ಪ್ರಕಾರ ವಲಸೆ ಎಂದರೆ "As the relatively permanent movement of persons over a significant distance"(International Encyclopaedia of Social Science-vol-10,1968,p-286) ಅಂದರೆ ಅಂತಾರಾಷ್ಟ್ರೀಯ ಸಮಾಜ ವಿಜ್ಞಾನ ವಿಶ್ವಕೋಶವು ಒಂದು ಪ್ರದೇಶದಿಂದ ಗಣನೀಯ ವಾದ ಅಂತರದಲ್ಲಿರುವ ಇನ್ನೊಂದು ಪ್ರದೇಶಕ್ಕೆ ಜನರು ಹೆಚ್ಚು ಕಡಿಮೆ(ಸಾಪೇಕ್ಷ) ಶಾಶ್ವತವಾಗಿ ಚಲಿಸುವುದು ಎಂದು ವ್ಯಾಖ್ಯಾನಿಸಿದೆ.

೩. International Encyclopaedia of population "Migration is a geographic mobility that invalues a change of usual residence between difined partical or statistical areas or between residence areas of different types. In general usage the term has been restricted to the relatively permanent change".(International Encyclopaedia of population-vol-11, 1982, p-448) ಅಂದರೆ ಅಂತಾರಾಷ್ಟ್ರೀಯ ಜನಸಂಖ್ಯಾ ವಿಶ್ವಕೋಶವು ವಲಸೆಯನ್ನು ವಲಸೆ ಒಂದು ಭೌಗೋಳಿಕ ಸಂಚಲನೆ. ಜನರು ತಮ್ಮ ವಾಡಿಕೆಯ ವಸತಿ ಸ್ಥಳದಿಂದ ಇನ್ನೊಂದು ರಾಜಕೀಯವಾಗಿ ನಿರ್ಧಾರಿತ ಇಲ್ಲವೆ ಸಂಖ್ಯಾಶಾಸ್ತ್ರೀಯವಾಗಿ ನಿರ್ಧರಿತ ಪ್ರದೇಶಕ್ಕೆ ಸ್ಥಳಾಂತರಗೊಂಡರೆ ಅದಕ್ಕೆ ವಲಸೆ ಎನ್ನುವರು ಎಂದು ವ್ಯಾಖ್ಯಾನಿಸಿದ್ದಾರೆ.

೪. ಅಮೆರಿಕಾ ವಿಶ್ವಕೋಶ Encyclopaedia American ವಲಸೆಯನ್ನು "Migration is co-ordinated Valuntary movement of a considerble number of people from an accustomed habitat to a new one"(Encyalopdia American vol-19,1968, p-98) ಒಂದು ಹೊಂದಿಕೊಂಡ ಪ್ರದೇಶದಿಂದ ಹೊಸದೊಂದು ಪ್ರದೇಶಕ್ಕೆ ಗಣನೀಯ ಸಂಖ್ಯೆಯಲ್ಲಿ ಜನರು ಸ್ವಯಂ ಪ್ರೇರಿತ ಚಲಿಸುವುದು ಎಂದು ವ್ಯಾಖ್ಯಾನಿಸಿದೆ.

೫. International Encyclopaedia of Britannic ಅಂತಾರಾಷ್ಟ್ರೀಯ ಬ್ರಿಟಾನಿಕ್ ವಿಶ್ವಕೋಶವು "A permanent movement of people of their own free will farm one sovereign country to another"(International Encyclopaedia of Britannic vol-18, p-292) ಜನರ ಸ್ವಯಂ ಪ್ರೇರೀತವಾಗಿ ಒಂದು ಸಾರ್ವಭೌಮತ್ವ ದೇಶದಿಂದ ಇನ್ನೊಂದು ದೇಶಕ್ಕೆ ಶಾಶ್ವತವಾಗಿ ಚಲಿಸುವುದಕ್ಕೆ ಅಂತಾರಾಷ್ಟ್ರೀಯ ವಲಸೆ ಎನ್ನುವರು.

೬. The Oxford Disctionaryಯಲ್ಲಿ ವಲಸೆಯನ್ನು "The action of moving from one place to another also an instance of their a gen chiefly of things spec in chen the (non random) movement from one place to another an a tom or group e.g. within a malecule as part of a rearrangement of its structure or towards an electrode during electrolist"(The Oxford Disctionary 2nd ediation, vol-ix, 1989, p-758) ಎಂದು ವ್ಯಾಖ್ಯಾನಿಸಲಾಗಿದೆ.

೭. ಕನ್ನಡ ಸಾಹಿತ್ಯ ಪರಿಷತ್ ನಿಘಂಟುವಿನಲ್ಲಿ ವಲಸೆ ಎಂದರೇ "ಆಕ್ರಮಣ, ಬರಗಾಲ, ಮುಂತಾದ ಕಷ್ಟ ಪ್ರಸಂಗಗಳಲ್ಲಿ ಜನರು ಗುಳೆ ಹೋಗುವುದು, ಒಕ್ಕಲು ಹೋಗುವುದು"(ಕನ್ನಡ ಸಾಹಿತ್ಯ ಪರಿಷತ್, ಸಂಪುಟ ೮, ೧೯೯೩, ಪು.೭೮೦೪) ಎಂದು ಇದೆ.

೮. ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶದಲ್ಲಿ ವಲಸೆ ಎಂದರೆ "Migration Hypothesis: ವಲಸೆ ಪ್ರಾಕಲ್ಪನೆ ತಾನಿದ್ದ ಸಮುದಾಯದ ತಳ್ಳುವ ಅಂಶಗಳಿಂದ ಮತ್ತು ತಾನು ಸೇರುವ ಸಮುದಾಯದ ಸೆಳೆಯುವ ಅಂಶ Full factorಗಳಿಂದ ವ್ಯಕ್ತಿ ವಲಸೆ ಹೋಗುತ್ತಾನೆ"(ಡಾ.ಚಂದ್ರಶೇಖರ ದಾಮ್ಲೆ, ೨೦೦೩, ಪು.೨೯೩) ಎಂದಿದೆ.

೯. ಕಿಟಲ್ ಶಬ್ದಕೋಶದಲ್ಲಿ ವಲಸೆ ಎಂದರೆ "Flight a removing from home for fear of a hostile armd emigration(My. Te, t, ವಲಜಲ್, ವಲಜೈ, ಒಟಿದಲ್, Departure ವಲ್ಲಯಿಸು ವಲಸೆ ತೆಗೆ To leave all at one's one village and go to another for safety"(ಕಿಟಲ್, ೨೦೦೬, ಪು.೧೩೮೨) (My)ಎಂದಿದೆ.

೧೦. ವಿಲಿಯಂ ಪೀಟರ್ಸನ್ ಪ್ರಕಾರ "ಒಬ್ಬ ವ್ಯಕ್ತಿ ಮತ್ತೊಂದು ದೇಶಕ್ಕೆ ಹೋಗಿ ತನ್ನ ಉಳಿದ ಶೇಷ್ಯಾಯುಷ್ಯವನ್ನು ಅಲ್ಲಿಯೇ ಕಳೆಯುವ ಪ್ರಕ್ರಿಯೆಗೆ ವಲಸೆ ಎಂದರ್ಥ"(ಡಾ.ಸಿ.ಮಹಾದೇವ, ೧೯೯೯, ಪು.೧೫) ಎಂದು ಹೇಳಿದ್ದಾರೆ.

೧೧. ವಿಲ್ಸನ್‌ರ ಪ್ರಕಾರ "ವಲಸೆ ಎನ್ನುವುದು ವ್ಯಕ್ತಿಗಳ ಅಥವಾ ಗುಂಪು(ಸಮೂಹ)ಗಳ ಚಲನೆ ಈ ಚಲನೆ ಶಾಶ್ವತ ಅಥವಾ ಅರೆ ಶಾಶ್ವತ ವಾಸದ ಸ್ವರೂಪದಲ್ಲಿರುತ್ತದೆ"(ಅದೇ, ೧೯೯೯, ಪು.೧೫)

**ವಲಸೆ ಕುರಿತಾಗಿರುವ ಲೇಖಕರ ಅಭಿಪ್ರಾಯಗಳು**

ಡಾ.ವಿಶ್ವನಾಥ ಕಾರ್ನಾಡರವರು 'ತುಳುವರ ಮುಂಬಯಿ ವಲಸೆ' ಎಂಬ ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧದಲ್ಲಿ "ಭೌಗೋಳಿಕ ನೆರೆ-ಬರ, ದರೋಡೆ, ದಂಗೆಗಳಿಂದ ಬದುಕು ದುರ್ಬರವಾದಾಗ ವಿಭಜನೆಯ ಅನಿರೀಕ್ಷಿತ ಹೊಡೆತ ಬಿದ್ದಾಗ ನಿರುಪಾಯ ಪರಿಸ್ಥಿತಿಯಲ್ಲಿ ಬದುಕುವ ದಾರಿಯನ್ನು ಹುಡುಕಿಕೊಂಡು ಜನರು ವಲಸೆ ಹೋಗುವುದು ನೈಸರ್ಗಿಕವಾಗಿದೆ. ಹೀಗೆ ಇದ್ದ ಒಂದು ಊರಿನಿಂದ ಸಮೃದ್ಧವಾದ ಮತ್ತೊಂದು ಊರಿಗೆ ಹೋಗಿ ನೆಲೆಸುವುದು ವಲಸೆ"(ಡಾ.ವಿಶ್ವನಾಥ ಕಾರ್ನಾಡ, ೧೯೯೪, ಪು.೩೧-೩೨) ಎನ್ನುತ್ತಾರೆ.

೧. ಇಂಗ್ಲೀಷ್ ತತ್ವಜ್ಞಾನಿ ಥಾಮಸ್‌ರವರು ವಲಸೆ ಕುರಿತು ಹೀಗೆ ಹೇಳುತ್ತಾರೆ. "ವಿರಳ ಜನಸಂಖ್ಯೆಯಿರುವ ಆದರೆ ಆಗಾಧ ಭೌಗೋಳಿಕ ವಿಸ್ತೀರ್ಣವಿರುವ ಹೊಸ ಪ್ರಪಂಚಕ್ಕೆ ದಟ್ಟ ಜನಸಂಖ್ಯೆಯಿರುವ ಹಳೆಯ ಪ್ರಪಂಚದ ಜನರು ಜೀವನಕ್ಕಾಗಿ ವಲಸೆ ಹೋಗುತ್ತಿರುವುದು ಅನಿವಾರ್ಯ ಮತ್ತು ನ್ಯಾಯ ಸಮ್ಮತವಾದುದು"(ಮ.ಮಹೇಶನ್, ೨೦೦೨, ಪು.೧೭) ಎಂದು ಅಭಿಪ್ರಾಯಪಡುತ್ತಾರೆ.

೨. ಸಂಶೋಧಕರಾದ ಗಣಪತಿ ಕೆ.ಲಮಾಣಿರವರು ಲಂಬಾಣಿಗರ ಗೋವಾ ವಲಸೆ ಎಂಬ ಅಧ್ಯಯನದಲ್ಲಿ ವಲಸೆ ಎಂದರೆ "ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಜನರು ತಮ್ಮ ಮೂಲಸ್ಥಾನವನ್ನು ಬಿಟ್ಟು ಒಂದು ನಿರ್ದಿಷ್ಟ ಅವಧಿಯವರೆಗೆ ಮತ್ತೊಂದು ಸ್ಥಳಕ್ಕೆ ಹೋಗಿ ವಾಸವಾಗುವುದನ್ನು ವಲಸೆ"(ಗಣಪತಿ ಕೆ.ಲಮಾಣಿ, ೨೦೦೭, ಪು.೩೧) ಎಂದಿದ್ದಾರೆ.

ಹಾಗೆಯೆ ವಲಸೆ ಕುರಿತಾಗಿ ಒಂದಿಷ್ಟು ವಿವರಣೆಯನ್ನು ಕೊಡುತ್ತಾರೆ. "ಸಮಾಜದಲ್ಲಿ ನಡೆಯುವ ಎಲ್ಲಾ ಹೋಗುಬರುವುಗಳನ್ನು ವಲಸೆ ಎಂದು ಹೇಳಲಾಗದು. ನೌಕರಿಗಾಗಿ ಒಂದು ಊರಿನಿಂದ ಸನಿಹದ ಇನ್ನೊಂದು ಊರಿಗೆ ಹೋಗುವುದನ್ನು ವಲಸೆ ಎನ್ನಲಾಗದು. ಏಕೆಂದರೆ ಈ ಹೋಗುಬರುವಿಕೆ (ಸಂಚಲನ) ತಾತ್ಕಾಲಿಕವಾಗಿರುತ್ತದೆ" (ಅದೇ, ಪು.೩೦) ಎಂದು ಹೇಳುತ್ತಾರೆ.

೩ ಹರಿಶ್ಚಂದ್ರ ದಿಗ್ಸಂಗಿಕರವರು ವಲಸೆ ಎಂದರೆ “ವಲಸೆ ಬರೀ ಕ್ಷಾಮ, ಬರಗಾಲ ಅತಿವೃಷ್ಠಿಗೆ ಸೀಮಿತವಾದುದ್ದಲ್ಲ. ಉಳ್ಳವನು ತಾನಿರುವ ಸ್ಥಳದಲ್ಲಿ ಬಂಡವಾಳ ಹೂಡಿ ಸಂತೃಪ್ತಿಯ ಜೀವನ ಸಾಗಿಸಿ ಬೆಳೆಯುತ್ತಿರುವ ನಗರ ಪ್ರದೇಶ ಹುಡುಕಿ, ಬಂಡವಾಳ ಹಾಕಿ, ಲಾಭ ಪಡೆಯಲು ಪ್ರಯತ್ನಿಸುತ್ತಾನೆ”(ಹರಿಶ್ಚಂದ್ರ ದಿಗ್ಸಂಗಿಕರ್, ೧೯೯೯, ಪು.೩) ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಹಾಗೆಯೆ ಈ ಚರ್ಚೆಯನ್ನು ಮುಂದುವರೆಸುತ್ತಾ ಅಲೆಮಾರಿಗಳ ಅತಂತ್ರ ಸ್ಥಿತಿಯ ಮುಂದಿನ ಅಭಿವೃದ್ಧಿ ಹಂತವೇ ವಲಸೆ ಎಂದರೆ ತಪ್ಪಾಗದು ವಲಸೆಗೆ ಭಾಷೆ ಮುಖ್ಯವಲ್ಲ, ಬದುಕು ಮುಖ್ಯವಾಗುತ್ತದೆ. ಎಂದು ವಲಸೆ ಕುರಿತಾಗಿ ಚರ್ಚಿಸುತ್ತಾರೆ.

“ನಿಸರ್ಗದ ಮಡಿಲಿನಲ್ಲಿ ವಾಸಿಸುವ ಮನುಷ್ಯನಿಗೆ ಪ್ರಕೃತಿಯೇ ತಿರುಗಿ ಬಿದ್ದಾಗ ಅಂದರೆ ಭೌಗೋಳಿಕವಾಗಿ ನೆರೆ, ಬರ, ಭೂಕಂಪ, ದಂಗೆಗಳು ಸಂಭವಿಸಿ ಬದುಕು ದುರ್ಬಲವಾದಾಗ ನಿರುಪಾಯನಾಗಿ ಗುಳೆ ಹೋಗುವುದು ಅಥವಾ ವಲಸೆ ಹೋಗುವುದು ಸ್ವಾಭಾವಿಕ”(ಅದೇ, ಪು.೩೧)

“ಹತ್ತು ಇಪ್ಪತ್ತು ಎಕರೆ ಜಮೀನು ಉಳ್ಳಂತಹ ಸ್ಥಿತಿವಂತನು ಕೂಡ ವರ್ಷದ ಬೆಳೆಯ ನಿರೀಕ್ಷೆ ಮಾಡದೆ ಅವರ ಆದಾಯ ಗಮನಿಸದೆ ನಗದು ಹಣ ಸಂಪಾದನೆಗಾಗಿ ಸ್ವಂತ ಊರನ್ನು ತೊರೆಯುತ್ತಾನೆ”(ಅದೇ, ಪು.೩೧)

ಹೀಗೆ ಹರಿಶ್ಚಂದ್ರ ದಿಗ್ಸಂಗಿಕರವರು ಕನ್ನಡಿಗರ ಗೋವೆ ವಲಸೆ ಎಂಬ ಕೃತಿಯಲ್ಲಿ ವಲಸೆ ಕುರಿತಾಗಿ ಚರ್ಚಿಸುತ್ತಾರೆ.

೪. ಡಾ.ತಾರಿಣಿ ಶುಭದಾಯಿನಿರವರು ಕನ್ನಡದಲ್ಲಿ ವಲಸೆಯ ಪ್ರವೃತ್ತಿ ಮತ್ತು ವಲಸಿಗ ಸಮುದಾಯಗಳು ಎಂಬ ಲೇಖನದಲ್ಲಿ ಚಾರಿತ್ರಿಕ ವಲಸೆ ಸಮುದಾಯಗಳಿಂದ ಹಿಡಿದು ಇಂದಿನ ವರ್ತಮಾನದ ವಲಸಿಗರವರೆಗೂ ಇರುವ ಕಾರಣ, ಪರಿಣಾಮ, ಸಾಂಸ್ಕೃತಿಕ ಪಲ್ಲಟಗಳನ್ನು ಚರ್ಚಿಸುತ್ತಾರೆ. ಹಾಗೆಯೆ ಅನೇಕ ಕನ್ನಡ ವಲಸಿಗ ಸಮುದಾಯಗಳಿಗೆ ಉದ್ಯೋಗ, ಆರ್ಥಿಕ ಅಭಿವೃದ್ಧಿಯಂತಹ ಸಂಗತಿಗಳು ಕಾರಣವಾಗಿರುವುದನ್ನು ಊಹಿಸುತ್ತಾರೆ ಮತ್ತು ಅನ್ಯಭಾಷಿಕರು ಹೆಚ್ಚಾಗಿ ಆರ್ಥಿಕ ಮತ್ತು ರಾಜಕೀಯ ಕಾರಣಗಳನ್ನು ಹೊಂದಿದ್ದು, ಅವರ ವಲಸೆ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಹೊಂದಿದೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ.

೫. ಮಂಜುನಾಥ ಬೇವಿನಕಟ್ಟಿಯವರು ಆದಿವಾಸಿ (ಸಂಸ್ಕೃತಿಯ ಸ್ಥಿತಿಗತಿ) ಎಂಬ ಕೃತಿಯಲ್ಲಿ ಸ್ಥಳಪಲ್ಲಟ, ವಲಸೆ ಮತ್ತು ಬುಡಕಟ್ಟು ಎಂಬ ಲೇಖನದಲ್ಲಿ “ವಲಸೆ ಎಂಬುದು ತಮ್ಮ

ಜೀವನ ಸ್ಥಿತಿಗತಿಗಳಲ್ಲಿ ಉಂಟಾಗುವ ಏರುಪೇರುಗಳಿಂದ ಸಂಭವಿಸುವಂತದು. ವಲಸೆ ಕೆಲವು ಸಲ ಹೊಸ ಪರಿಸ್ಥಿತಿಗಳ ಅಸ್ತಿತ್ವಗಾಗಿಯೂ ನಡೆಯಬಹುದು. ಉದಾ: ಮತ್ತಷ್ಟು ವಿಫುಲವಾದ ನೀರು, ಮೇವು ಹುಡುಕಿ ಹೊರಡಬಹುದು ಮತ್ತಷ್ಟು ಫಲವತ್ತಾದ ನೆಲ ಹುಡುಕಿ ಆದಿಮ ವ್ಯವಸಾಯ ಪಂಗಡಗಳು ಹೊರಬರಬಹುದು. ಹೆಚ್ಚು ನೈಸರ್ಗಿಕ ಪ್ರತಾಪಗಳಿಲ್ಲದ ಪ್ರದೇಶಗಳನ್ನು ಹುಡುಕಿ ಹೊರಬರಬಹುದು". (ಮಂಜುನಾಥ ಬೇವಿನಕಟ್ಟಿ, ೨೦೦೭, ಪು.೫೫) ಎಂದು ಹೇಳುತ್ತಾರೆ.

ಹಾಗೆಯೆ ಸ್ಥಳಪಲ್ಲಟವೆಂದರೆ ಸಾಮಾನ್ಯವಾಗಿ ಶತೃಗಳ ದಾಳಿ ಅಥವಾ ನೈಸರ್ಗಿಕ ಪ್ರಕೋಪಗಳ ಕಾರಣದಿಂದ ಉಂಟಾಗುತ್ತದೆ. ಉದಾ. ನೀರು ಮೇವು ಅರಸಿ ತಮ್ಮ ದನದ ಮಂದೆಗಳೊಡನೆ ಆರ್ಯರು ಮಧ್ಯ ಏಷಿಯಾ ಪ್ರಾಂತ್ಯಗಳಿಂದ ಈಗಿನ ಪಂಜಾಬ್, ಹರ‍್ಯಾಣ ಪ್ರಾಂತ್ಯಗಳೆಡೆಗೆ ಸರಿದು ಬಂದರೆಂಬುದು ವಲಸೆಗೊಂದು ಉದಾಹರಣೆ: ಸ್ಥಳಪಲ್ಲಟ ಮತ್ತು ವಲಸೆಗಳೆರಡೂ ತಾತ್ಕಾಲಿಕ ಅಥವಾ ಶಾಶ್ವತ ಸ್ವಭಾವವುಳ್ಳವಾಗಿರಬಹುದು(ಅದೇ, ಪು.೫೬) ಎಂದು ಅಭಿಪ್ರಾಯಪಡುತ್ತಾರೆ.

# ಅಧ್ಯಾಯ ಮೂರು

## ಸಾಹಿತ್ಯೇತರ ಜ್ಞಾನ ಶಿಸ್ತುಗಳಲ್ಲಿ ವಲಸೆ

ವಲಸೆ ಎನ್ನುವ ಪರಿಕಲ್ಪನೆಯನ್ನು ಕುರಿತು ಸಾಹಿತ್ಯವನ್ನು ಹೊರತುಪಡಿಸಿದ ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಬುಡಕಟ್ಟು, ಜಾನಪದೀಯದಂತಹ ಅನ್ಯ ಜ್ಞಾನಶಿಸ್ತುಗಳಲ್ಲಿ ಕೈಗೊಂಡ ಅಧ್ಯಯನಗಳನ್ನು ಇಲ್ಲಿ ಪ್ರಮುಖವಾಗಿ ಗಮನಿಸಲಾಗುವುದು. ಇದರ ಜೊತೆಗೆ ವಲಸೆ ಕುರಿತಾಗಿ ಚರ್ಚಿಸಲಾದ ಬಿಡಿ ಲೇಖನಗಳನ್ನು ಸಹ ಇಲ್ಲಿ ನೋಡಲಾಗುವುದು. ಒಟ್ಟಾರೆ ಈ ಅಧ್ಯಯನದಲ್ಲಿ ಸಾಹಿತ್ಯಕ್ಕಿಂತ ಇತರೆ ಭಿನ್ನ ಶಿಸ್ತುಗಳಲ್ಲಿ ವಲಸೆಯನ್ನು ವಸ್ತುವಾಗಿರಿಸಿಕೊಂಡು ಕೈಗೊಂಡ ಅಧ್ಯಯನಗಳು, ಮತ್ತು ವಲಸೆ ಕುರಿತಾಗಿ ಮೂಡಿಬಂದಿರುವ ಬಿಡಿ ಲೇಖನಗಳು ಮತ್ತು ಇತರೆ ದಿನಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ವಿವರಿಸಿ ವಿಶ್ಲೇಷಿಸಿದ ಬಗೆಯನ್ನು ನೋಡಲಾಗುವುದು.

*** ಅಪ್ರಕಟಿತ ಎಂ.ಫಿಲ್.ಪ್ರಬಂಧಗಳು**

**೧. ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳು( ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ)**

ಡಾ.ಎ.ಎಸ್.ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಈರಪ್ಪ ಅಂಜಯ್ಯ ಅವರು ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಎಂ.ಫಿಲ್.ಪ್ರಬಂಧವಾಗಿದೆ. ಇದೊಂದು ಸಮುದಾಯ ಅಧ್ಯಯನವಾಗಿಸಿ ಸುರಪುರ ತಾಲೂಕಿನ ಬೇಡ ಮತ್ತು ಮೇದ ಎಂಬ ಎರಡು ಬುಡಕಟ್ಟು ಸಮುದಾಯಗಳು ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಶೈಕ್ಷಣಿಕದಂತಹ ಸಾಂಸ್ಕೃತಿಕ ಬದುಕಿನಲ್ಲಿ ಉಂಟಾದ ಸ್ಥಿತ್ಯಂತರಗಳಿಗೆ ಇಂದಿನ ಜಾಗತೀಕರಣ ಎಷ್ಟರಮಟ್ಟಿಗೆ ಕಾರಣವಾಗಿದೆ ಎಂಬುದನ್ನು ಕ್ಷೇತ್ರಕಾರ್ಯ ಮಾಡಿ ಕೋಷ್ಟಕಗಳ ಮೂಲಕ ವಿವರಿಸಿ ವಿಶ್ಲೇಷಿಸಲಾದ ಅಧ್ಯಯನವಾಗಿದೆ. ಕಾಡಿನಲ್ಲಿ ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳು ಇಂದು ಜಾಗತೀಕರಣದ ಫಲವಾಗಿ ವಲಸೆ ಬಂದು ಹೊಟ್ಟೆಪಾಡಿಗಾಗಿ ಕಂಪನಿಗಳಲ್ಲಿ ಕೆಳವರ್ಗದ ನೌಕರಿಗಳನ್ನು ಪಡೆದು

ಕಡಿಮೆ ವೇತನಕ್ಕೆ ಹೆಚ್ಚು ಶ್ರಮಪಡುತ್ತಿರುವ ಬುಡಕಟ್ಟು ಸಮುದಾಯಗಳ ಸಂವೇದನೆಗಳನ್ನು ಗುರುತಿಸುತ್ತಾರೆ.

**೨. ಕೃಷ್ಣ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ**

ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿರುವ ಶಶಿಧರ ಮಲ್ಲಪ್ಪ ಅವರ ಎಂ.ಫಿಲ್.ಪ್ರಬಂಧದಲ್ಲಿ ದೇವದುರ್ಗ ತಾಲೂಕನ್ನು ಅನುಲಕ್ಷಿಸಿ ಕೋಷ್ಟಕಗಳ ಮೂಲಕ ಕೃಷ್ಣನದಿಗೆ ಕಟ್ಟಿರುವ ಅಣೆಕಟ್ಟಿನಿಂದಾಗಿ ಅಲ್ಲಿನ ಸುತ್ತಮುತ್ತಲಿನ ಗ್ರಾಮಗಳಿಗೆ ಉಂಟಾದ ಸಮಸ್ಯೆಗಳು, ತೊಂದರೆಗಳು ಮತ್ತು ಜನರಿಗೆ ಸರ್ಕಾರ ಪರಿಹಾರ ಕೊಡುವಲ್ಲಿನ ವಿಫಲತೆಗಳ ಕುರಿತಾಗಿ ವಿಶ್ಲೇಷಿಸಿದ್ದಾರೆ. ಜೊತೆಗೆ ಗ್ರಾಮಗಳಲ್ಲಿನ ಸದ್ಯದ ಪರಿಸ್ಥಿತಿ ಕೃಷಿ ಕೈಗಾರಿಕೆಗಳಿಂದ ಬದಲಾವಣೆ ಸಮಸ್ಯೆಗಳ ಕುರಿತಾಗಿ ಕ್ಷೇತ್ರಕಾರ್ಯ ನಡೆಸಿ ಈ ಅಧ್ಯಯನವನ್ನು ಹೊರತಂದಿದ್ದಾರೆ. ವಲಸೆ ಕುರಿತಾಗಿ ಈ ಅಧ್ಯಯನದಲ್ಲಿ ಹೆಚ್ಚು ಪ್ರಸ್ತಾಪವಾಗದೇ ಇರುವುದು ಗಮನಾರ್ಹವಾಗಿದೆ.

*** ಅಪ್ರಕಟಿತ ಪಿಎಚ್.ಡಿ.ಪ್ರಬಂಧಗಳು**

**೧. ಯಾದಗಿರಿ ಜಿಲ್ಲೆಯ ಅಲೆಮಾರಿಗಳ ಸಾಮಾಜಿಕ ಸ್ಥಿತಿಗತಿಗಳು: ಒಂದು ಅಧ್ಯಯನ**

ಡಾ.ತಾರಿಹಳ್ಳಿ ಹನುಮಂತಪ್ಪ ಅವರ ಮಾರ್ಗದರ್ಶನದಲ್ಲಿ ಶಿವಲಿಂಗಪ್ಪ ರವರು ಕನ್ನಡ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ ಈ ಅಧ್ಯಯನದಲ್ಲಿ ಯಾದಗಿರಿ ಜಿಲ್ಲೆಯ ಅಲೆಮಾರಿ ಸಮುದಾಯಗಳ ಆಚರಣೆ, ಸಂಪ್ರದಾಯ, ಆಚಾರ-ವಿಚಾರ, ಶೈಕ್ಷಣಿಕ ಸ್ಥಿತಿಗತಿಗಳು, ಆಹಾರ ಪದ್ಧತಿ, ಕೌಟುಂಬಿಕ ವ್ಯವಸ್ಥೆ ಮತ್ತು ಆರ್ಥಿಕ ಸಮಸ್ಯೆಗಳನ್ನು ವಿವರಿಸಿ ವಿಶ್ಲೇಷಿಸಿದ್ದಾರೆ. ವರ್ತಮಾನದಲ್ಲಿ ಸರ್ಕಾರ ರೂಪಿಸಿರುವ ಯೋಜನೆಗಳು ಅಲೆಮಾರಿಗಳಿಗೆ ತಲುಪುವಲ್ಲಿನ ವಿಫಲತೆಗಳನ್ನು ಅಂಕಿ-ಅಂಶಗಳ ಮೂಲಕ ವಿವರಿಸಿ ಚರ್ಚಿಸುತ್ತಾರೆ.

**೨. ಕರ್ನಾಟಕ ಮೂಲನಿವಾಸಿ ಬುಡಕಟ್ಟು ಸಮುದಾಯಗಳ ಪರಿಸರ ಮತ್ತು ಅಭಿವೃದ್ಧಿ: ಅರ್ಥಶಾಸ್ತ್ರೀಯ ಅಧ್ಯಯನ**

ಡಾ.ಚಲುವರಾಜು ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಈ ಅಧ್ಯಯನದಲ್ಲಿ ಕರ್ನಾಟಕದ ಮೂಲನಿವಾಸಿಗಳಲ್ಲಿ ಜೇನುಕುರುಬ ಹಾಗೂ ಕೊರಗರ ಬುಡಕಟ್ಟು ಸಮುದಾಯಗಳ ಪರಿಸರ ಮತ್ತು ಅಭಿವೃದ್ಧಿ ಕುರಿತ ಅಧ್ಯಯನ ಇದಾಗಿದೆ. ಈ ಸಮುದಾಯಗಳ ಜೀವನಕ್ರಮ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಬಂದ ಅಂಶಗಳನ್ನು ಅಂಕಿ ಸಂಖ್ಯೆಯ ಸಹಿತ ಜನರ ಆದಾಯ ಉಳಿತಾಯವನ್ನು

ವಿಶ್ಲೇಷಿಸಲಾಗಿದೆ ಮತ್ತು ಈ ಸಮುದಾಯಗಳ ಭೂ ಬಳಕೆಯನ್ನು ಕೋಷ್ಟಕಗಳ ಮೂಲಕ ವಿವರಿಸಿ ಅಭಿವೃದ್ಧಿಯ ಸ್ವರೂಪವನ್ನು ನಿರೂಪಿಸಿದ್ದಾರೆ ಹಾಗೂ ಸಮುದಾಯಗಳಲ್ಲಿ ತಾಲೂಕುವಾರು ಸಾಕ್ಷರತೆ ಜನಸಂಖ್ಯೆ, ಉದ್ಯೋಗಗಳ ಜೀವನಕ್ರಮ ಇತರಹದ ಎಲ್ಲಾ ಅಂಶಗಳನ್ನು ಕ್ರೋಢೀಕರಿಸಿ ವಿಶ್ಲೇಷಿಸಿದ್ದಾರೆ.

**೩. ಹೈದ್ರಾಬಾದ್ ಕರ್ನಾಟಕ ಅಲೆಮಾರಿಗಳ ಸಮಾಜೋ–ಆರ್ಥಿಕ ವ್ಯವಸ್ಥೆ**

ಡಾ.ಮೊಗಳ್ಳಿ ಗಣೇಶ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಅಜ್ಜಯ್ಯ ಅವರ ಪಿಎಚ್.ಡಿ. ಪ್ರಬಂಧದಲ್ಲಿ ಹೈದ್ರಾಬಾದ್ ಕರ್ನಾಟಕ ವ್ಯಾಪ್ತಿಯಲ್ಲಿ ಬರುವಂತ ಒಟ್ಟು ಅಲೆಮಾರಿ ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮುಖ್ಯವಾಗಿ ಈ ಅಧ್ಯಯನದಲ್ಲಿ ಅಲೆಮಾರಿಗಳ ಸಾಮಾಜಿಕ ವ್ಯವಸ್ಥೆಗೂ ಹಾಗೂ ಇತರರ ಸಾಮಾಜಿಕ ವ್ಯವಸ್ಥೆಗಿರುವ ವ್ಯತ್ಯಾಸಗಳೇನು? ಎಂಬುದನ್ನು ಕಂಡುಕೊಂಡಿದ್ದಾರೆ. ಹಾಗೆಯೆ ಇಲ್ಲಿ ಮುಖ್ಯವಾಗಿ ಅಲೆಮಾರಿ ಸಮುದಾಯಗಳಾದ ಡೊಂಬರು, ಹಕ್ಕಿಪಿಕ್ಕಿಯರು, ಹಂದಿಜೋಗಿಯರಂತಹ ಹೈದ್ರಾಬಾದ್ ಕರ್ನಾಟಕದ ಅಲೆಮಾರಿಗಳ ಭಾಷೆ, ಸಾಕ್ಷರತೆ, ಅಚರಣೆ, ವೃತ್ತಿ, ಮೂಲನೆಲೆಯ ಕುರಿತಾದ ಸಂಕ್ಷಿಪ್ತ ವಿವರಣೆ ಕೋಷ್ಟಕಗಳ ಮೂಲಕ ವಿವರಿಸಲಾಗಿದೆ.

**೪. ಲಂಬಾಣಿಗರ ಗೋವಾ ವಲಸೆ**

ಡಾ.ಚಲುವರಾಜು ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನಕ್ಕೆ ಸಲ್ಲಿಸಿರುವ ಗಣಪತಿ ಕೆ.ಲಮಾಣಿ ಅವರ ಈ ಅಧ್ಯಯನದಲ್ಲಿ ಲಂಬಾಣಿ ಸಮುದಾಯದವರ ಮೂಲಸ್ಥಳ, ಕಸುಬು, ಗೋವಕ್ಕೆ ವಲಸೆ ಬಂದುದರ ಉದ್ದೇಶ, ಕಾರಣ, ಪರಿಣಾಮಗಳ ಹಾಗೂ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಬದುಕಿನಲ್ಲಾದ ಬದಲಾವಣೆ ಕುರಿತಾಗಿ ಕೈಗೊಂಡ ಕ್ಷೇತ್ರಕಾರ್ಯಧಾರಿತ ಸಮಾಜಶಾಸ್ತ್ರೀಯ ದೃಷ್ಟಿಕೋನದ ಅಧ್ಯಯನವಾಗಿದೆ.

*** ಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧಗಳು**

**೧. ತುಳುವರ ಮುಂಬಯಿ ವಲಸೆ**

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಡಾ.ವಿಶ್ವನಾಥ ಕಾರ್ನಾಡ ಅವರು ಡಾ.ಶ್ರೀನಿವಾಸ ಹಾವನೂರ ಅವರ ಮಾರ್ಗದರ್ಶನದಲ್ಲಿ ಕೈಗೊಂಡ ಈ ಅಧ್ಯಯನವೂ ತುಳುವರ ಸಾಂಸ್ಕೃತಿಕ ಅಧ್ಯಯನವಾಗಿದೆ. ಇಲ್ಲಿ ತುಳುವರ ಐತಿಹಾಸಿಕ ಹಿನ್ನೆಲೆ ಸಾಂಸ್ಕೃತಿಕ ಜೀವನ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ಥಿತಿಗತಿಗಳ ಕುರಿತು ಚರ್ಚಿಸಿ ವಿಶ್ಲೇಷಿಸುತ್ತಾರೆ.

ನೈಸರ್ಗಿಕವಾಗಿ ಸಮೃದ್ಧನಾಡಾದ ತುಳು ಪ್ರದೇಶವನ್ನು ಬಿಟ್ಟು ಸಾವಿರ ಮೈಲು ದೂರದ ಮುಂಬೈಗೆ ಬಂದುದರ ಆಕರ್ಷಕ ಅಂಶಗಳು ಒತ್ತಡದ ಪರಿಸ್ಥಿತಿಗಳನ್ನು ಕುರಿತು ಚರ್ಚಿಸುತ್ತಾರೆ. ಹಾಗೆಯೆ ಮುಂಬಯಿಯಲ್ಲಿನ ಸಾಹಿತ್ಯ, ಭಾಷೆ, ನಾಟಕ, ಸಂಘ–ಸಂಸ್ಥೆಗಳ ರಾಜಕೀಯ ಚಟುವಟಿಕೆಗಳು, ಬ್ಯಾಂಕುಗಳ ಸ್ಥಾಪನೆ ಮತ್ತು ಕಾರ್ಯಗಳು ಯಕ್ಷಗಾನ, ದೈವರಾಧನೆ, ಶೈಕ್ಷಣಿಕ ಪರಿಸ್ಥಿತಿ ಮಹಿಳೆಯರ ವೇಶ್ಯಾವಾಟಿಕೆಯಂತಹ ಸಮಸ್ಯೆಗಳ ಮೇಲೆ ಇವರ ಈ ಅಧ್ಯಯನದ ಬೆಳಕು ಚೆಲ್ಲಿದೆ. ಒಟ್ಟಾರೆ ಇದೊಂದು ಕ್ಷೇತ್ರಕಾರ್ಯಧಾರಿತ ತುಳುವರ ಸಾಂಸ್ಕೃತಿಕ ಅಧ್ಯಯನವಾಗಿದೆ.

**೨. ವಲಸಿಗರ ನೆಲೆ ಮರಿಯಮ್ಮನಹಳ್ಳಿ ಸಂಕಥನ**

ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಡಾ.ಗುರುಪ್ರಸಾದ್ ಎಚ್.ಎಸ್. ಅವರ ಈ ಅಧ್ಯಯನದಲ್ಲಿ ಮರಿಯಮ್ಮನಹಳ್ಳಿ ಎಂಬ ಗ್ರಾಮದ ಸಾಂಸ್ಕೃತಿಕ ಅಧ್ಯಯನವಾಗಿದೆ. ತುಂಗಭದ್ರಾ ಅಣೆಕಟ್ಟು ಕಟ್ಟಿದ ನಂತರದಲ್ಲಿ ಅಲ್ಲಿಯ ಜನ ಮರಿಯಮ್ಮನಹಳ್ಳಿಗೆ ವಲಸೆ ಬಂದು ನೆಲೆಯಾದ ನಂತರ ಉಂಟಾದ ಸಾಂಸ್ಕೃತಿಕ ಬದಲಾವಣೆಗಳನ್ನು ಕ್ಷೇತ್ರಕಾರ್ಯದ ಮೂಲಕ ಗುರುತಿಸುತ್ತಾರೆ. ಹಾಗೆಯೆ ಗ್ರಾಮ ಸ್ವರೂಪ, ವಿಶಿಷ್ಟತೆ, ಪ್ರಾಧ್ಯಾನತೆಯನ್ನು ತಿಳಿಸುತ್ತಾರೆ.

*** ಕೃತಿಗಳು**

**೧. ಕನ್ನಡಿಗರ ಗೋವೆ ವಲಸೆ**

ಹರಿಶ್ಚಂದ್ರ ದಿಗ್ಸಂಗಿಕರ್ ಅವರ ಕನ್ನಡಿಗರ ಗೋವೆ ವಲಸೆ ಎಂಬ ಈ ಕೃತಿಯಲ್ಲಿ ಕರ್ನಾಟಕದಿಂದ ಚೆದುರಿ ಹೋದಂತಹ ಕನ್ನಡಿಗರು ಗೋವಾಕ್ಕೆ ವಲಸೆ ಹೋಗುವಲ್ಲಿನ ಕಾರಣಗಳಾದ ಬಡತನ, ಬರಗಾಲ, ಅತಿವೃಷ್ಟಿ ಅನಾವೃಷ್ಟಿಯಂತಹ ಸಮಸ್ಯೆಗಳಿಂದಾಗಿ ಕೂಲಿ ಕೆಲಸವನ್ನು ಹರಸಿಕೊಂಡು ಹೋದವರ ಸಾಂಸ್ಕೃತಿಕ ಬದುಕು ಮತ್ತು ವಾಸ್ತವದ ಸ್ಥಿತಿಗತಿಗಳನ್ನು ಈ ಕೃತಿ ಚರ್ಚಿಸುತ್ತದೆ. ಹಾಗೆಯೆ ಗೋವಾ ಮತ್ತು ಕರ್ನಾಟಕಕ್ಕೂ ಇದ್ದಂತಹ ಐತಿಹಾಸಿಕ ಸಂಬಂಧ ಹಾಗೂ ಮುಖ್ಯವಾಗಿ ಮಹಿಳೆಯರು, ಯುವಕರು, ದೇವದಾಸಿಯರು, ಬಾಲಕರು ಇತ್ಯಾದಿ ಜನರಿಗಿದ್ದ ಒತ್ತಡ ಸಮಸ್ಯೆಗಳನ್ನು ಕ್ಷೇತ್ರಕಾರ್ಯದ ಮೂಲಕ ಗುರುತಿಸುತ್ತಾರೆ.

**೨. ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ**

ಡಾ.ಪಿ.ಮಹಾದೇವಯ್ಯ ಅವರ ಈ ಕೃತಿಯಲ್ಲಿ ಆಂಧ್ರಪ್ರದೇಶದ ತೆಲುಗರು ಬಳ್ಳಾರಿಯ ಜಿಲ್ಲೆಗೆ ವಲಸೆ ಬಂದುದರ ಕಾರಣ ಪರಿಣಾಮ, ಸಮಸ್ಯೆಗಳು ಹಾಗೂ ಆಕರ್ಷಕ ಅಂಶಗಳನ್ನು ಕ್ಷೇತ್ರಕಾರ್ಯದ ಮೂಲಕ ವಿವರಿಸಿ ವಿಶ್ಲೇಷಿಸಿದ್ದಾರೆ. ಹಾಗೆಯೆ ಆಂಧ್ರಪ್ರದೇಶದಿಂದ ವಲಸೆ

ಬಂದುದರ ಪರಿಣಾಮವಾಗಿ ಮೂಲಸ್ಥಳದಲ್ಲಿ ಉಂಟಾಗುವ ಅನುಕೂಲ, ಅನಾನುಕೂಲಗಳು ಹಾಗೂ ವಲಸೆ ಬಂದ ನಂತರದ ಪ್ರದೇಶದಲ್ಲಿ ಉಂಟಾಗುವ ಅನುಕೂಲ ಅನಾನುಕೂಲಗಳನ್ನು ಪ್ರಮುಖವಾಗಿ ಚರ್ಚಿಸುತ್ತಾರೆ.

*** ಮಾಸ ಪತ್ರಿಕೆಗಳು**

**೧. ಮಹಿಳೆ ಮತ್ತು ಜಾಗತೀಕರಣ**

ಕೆ.ಷರೀಫಾ ಅವರ ಮಹಿಳೆ ಮತ್ತು ಜಾಗತೀಕರಣ ಎಂಬ ಈ ಲೇಖನದಲ್ಲಿ ಜಾಗತೀಕರಣ ದಿಂದಾಗಿ ಮಹಿಳೆಯರಿಗೆ ಉಂಟಾಗುತ್ತಿರುವ ಆಹಾರ, ಉದ್ಯೋಗ, ವಲಸೆ, ಸೂಳೆಗಾರಿಕೆ ಅನೈತಿಕ ಸಾಮಾಜಿಕ ಒತ್ತಡ ಮತ್ತು ಆರೋಗ್ಯದ ಮೇಲೆ ಬೀಳುವ ಪರಿಣಾಮಗಳ ಕುರಿತು ಚರ್ಚಿಸುತ್ತಾರೆ.

**೨. ಸ್ಥಳ ಪಲ್ಲಟ ವಲಸೆ ಮತ್ತು ಬುಡಕಟ್ಟು ಮೌಖಿಕ ಸಂಕಥನ**

ಮಂಜುನಾಥ ಬೇವಿನಕಟ್ಟಿ ಅವರ ಈ ಲೇಖನವೂ ಸ್ಥಳ ಪಲ್ಲಟ ಮತ್ತು ವಲಸೆಗಿರುವ ವ್ಯತ್ಯಾಸ ಮತ್ತು ಸ್ವಭಾವಗಳ ಕುರಿತಾಗಿ ವಿಶ್ಲೇಷಿಸಿದ್ದಾರೆ. ಹಾಗೆಯೆ ಬಿಟ್ಟು ಬಂದ ಪ್ರದೇಶಗಳ ನೆನಪಿಗಾಗಿ ವಲಸೆ ಬಂದವರು, ನೆಲೆನಿಂತ ಪ್ರದೇಶದ ಹೆಸರನ್ನು ಕರೆದು ತಾವು ಮೊದಲಿದ್ದ ಪ್ರದೇಶವೆಂದೇ ಭಾವಿಸುವ ಭಾವನಾತ್ಮಕ ಬದುಕಿನ ಬುಡಕಟ್ಟು ಜನರನ್ನು ಕುರಿತು ವಿಶ್ಲೇಷಿಸುತ್ತಾರೆ.

**೩. ನಗರದಲ್ಲಿರಲಾರೆ ಹಳ್ಳಿಗೆ ಹೋಗಲಾರೆ**

ಡಾ.ನಿರಂಜನ ವಾನಳ್ಳಿ ಅವರ ಈ ಲೇಖನವೂ ತಲತಲಾಂತರದಿಂದ ವಾಸವಿದ್ದ ಜಾಗ ಜಮೀನುಗಳನ್ನು ಪಾಳುಬಿಟ್ಟು ನಗರಗಳತ್ತ ವಲಸೆ ಬರುತ್ತಿರುವ ಹಳ್ಳಿಯ ಜನರ ಸ್ಥಿತಿಯ ಬಗ್ಗೆ ಮತ್ತು ವಲಸೆ ಬಂದ ನಂತರದಲ್ಲಿ ಉಂಟಾಗುವ ಸಮಸ್ಯೆಯಿಂದ, ಅಲ್ಲಿಯೂ ಇರಲಾರದೆ ಇಲ್ಲಿಯು ಬದುಕುಲಾರದೆ ಒಂದು ರೀತಿಯ ಗೊಂದಲದಲ್ಲಿ ಬದುಕುವ ವಲಸಿಗರ ಕುರಿತು ಚರ್ಚಿಸಿದ್ದಾರೆ.

**೪. ಹಳ್ಳಿಯ ಕಷ್ಟಗಳ ನಡುವೆ ಬದುಕು ಇದೆಯೇ**

ಬಾಲಚಂದ್ರ ಹೆಗ್ಗಡೆ ಅವರ ಲೇಖನದಲ್ಲಿ ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದ ಹಳ್ಳಿಯ ಬದುಕು ಇವತ್ತಿನ ದಿನಗಳಲ್ಲಿ ಎಲ್ಲವೂ ವ್ಯಾಪಾರೀಕರಣದಿಂದ ಮೊಬೈಲ್ ಇಂಟರ್‌ನೆಟ್‌ಗಳು ಕೈಗೆ ಬಂದು ಬದಲಾವಣೆಯಾಗುತ್ತಿರುವ ಹಿನ್ನೆಲೆಯಲ್ಲಿ ಹಳ್ಳಿಯ ಜನರು ನಗರಗಳ ಕಡೆ ವಲಸೆ ಹೋಗುತ್ತಿರುವುದರಿಂದ ಹಳ್ಳಿಯ ಕೃಷಿಯ ಬದುಕು ನಾಶವಾಗುವುದರ ಕುರಿತು ಈ ಲೇಖನದಲ್ಲಿ ಚರ್ಚಿಸಲಾಗಿದೆ.

೫. ನಿರಾಶ್ರಿತರಿಗೆ ಸ್ಪಂದಿಸಲು ಬೇಕು ಆಶ್ರಿತ ಮಾನವಿಯತೆ

ನಾ. ದಿವಾಕರ ಅವರು ಈ ಲೇಖನದಲ್ಲಿ ಭೂಕಂಪ, ಚಂಡಮಾರುತದಂತಹ ಪ್ರಾಕೃತಿಕ ವಿಕೋಪಗಳಿಗೆ ಒಳಗಾದ ನಿರಾಶ್ರಿತರ ಸಮಸ್ಯೆಗಳ ಕುರಿತಾಗಿ ಬೆಳಕು ಚೆಲ್ಲುತ್ತದೆ. ಪ್ರಾಕೃತಿಕ ವೈಪರಿತ್ಯದಿಂದಾಗಿ ಮನೆ ಕಳೆದುಕೊಂಡು ಆಶ್ರಯವಿಲ್ಲದೇ ನಿರಾಶ್ರಿತರಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಬಂದಾಗ ಅಲ್ಲಿಯ ಸರ್ಕಾರ ಸಹಾಯ ಮಾಡದೇ ಅವರ ಕಷ್ಟಗಳಿಗೆ ಸಮಸ್ಯೆಗಳಿಗೆ ಸ್ಪಂದಿಸದೇ ಇನ್ನಷ್ಟು ವೇದನೆಗಳಿಗೆ ಗುರಿಯಾಗುವಂತೆ ಮಾಡುತ್ತದೆ. ಹೀಗಾಗಿ ಸರ್ಕಾರ ನಿರಾಶ್ರಿತರಿಗೆ ಆಶ್ರಯಕೊಟ್ಟು ಅವರ ಸಮಸ್ಯೆಗಳಿಗೆ ಸ್ಪಂದಿಸಬೇಕು ಎಂಬುದೇ ಈ ಲೇಖನದ ಆಶಯವಾಗಿದೆ.

೬. ಸಮುದಾಯಗಳ ವಲಸೆ ಕೊರಗ ಉದಾಹರಣೆ

ಡಾ.ಪುರುಷೋತ್ತಮ ಬಿಳಿಮಲೆ ಅವರು ಈ ಲೇಖನದಲ್ಲಿ ಕರಾವಳಿ ಕರ್ನಾಟಕದ ಪುಟ್ಟ ಕೊರಗ ಸಮುದಾಯದವರ ವಲಸೆಯ ಮೂಲ ಕುರಿತಂತೆ ಚರ್ಚಿಸುತ್ತಾರೆ. ಹಿಂದೆ ಕೊರಗರ ಪಂಗಡದವರಾಗಿದ್ದ ಹುಬಶಿತ ಎಂಬ ರಾಜ ಆಫ್ರಿಕಾದಿಂದ ಭಾರತಕ್ಕೆ ವಲಸೆ ಬಂದುದರ ಚರ್ಚೆಗಳನ್ನು ಇಲ್ಲಿ ಪ್ರಮುಖವಾಗಿ ಕಾಣಬಹುದು.

೭. ಕನ್ನಡಿಗರ ವಲಸೆಯ ಸುತ್ತಮುತ್ತ

ಡಾ.ಪುರುಷೋತ್ತಮ ಬಿಳಿಮಲೆ ಅವರ ಈ ಲೇಖನದಲ್ಲಿ ಕರ್ನಾಟಕದಲ್ಲಿನ ಮಹಿಳೆಯರು ಉದ್ಯೋಗಕ್ಕಾಗಿ ವಲಸೆ ಹೋಗದಿರುವವರ ಹಿಂದಿರುವ ಕಾರಣಗಳ ಕುರಿತಾಗಿ ಚರ್ಚಿಸುತ್ತಾರೆ. ಕರ್ನಾಟಕವನ್ನು ಹೊರತುಪಡಿಸಿದ ಇತರೆ ರಾಜ್ಯಗಳಲ್ಲಿನ ಯುವತಿಯರು ಕರ್ನಾಟಕಕ್ಕೆ ವಲಸೆ ಬಂದು ಶಿಕ್ಷಣ ಕಲಿತು ವಿವಿಧ ರಾಜ್ಯಗಳಲ್ಲಿ ಉದ್ಯೋಗದಲ್ಲಿ ತೊಡಿಗಿದ್ದಾರೆ. ಅದರಲ್ಲೂ ದಾದಿಯರು ಆಸ್ಪತ್ರೆಗಳಲ್ಲಿ ಕೆಲಸ ಮಾಡುತ್ತಿರುವವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲೇ ಇದೆ. ಆದರೆ ಕರ್ನಾಟಕದಲ್ಲಿ ಇರುವ ಕುಟುಂಬಗಳಲ್ಲಿನ ಯುವತಿಯರು ಏಕೆ ಉದ್ಯೋಗಕ್ಕೆ ವಲಸೆ ಹೋಗಲು ಹಿಂಜರಿಯುತ್ತಿದ್ದಾರೆ ಎಂಬುದು ಲೇಖಕರ ಪ್ರಶ್ನೆಯಾಗಿದೆ. ಹಾಗೆಯೆ ಇಲ್ಲಿಯ ಯುವತಿಯರಿಗೆ ಭಯ ಹೆಚ್ಚಾಗಿ ಕಾಡುತ್ತಿರುವುದೇ ಒಂದು ಸಮಸ್ಯೆಯಾಗಿದೆ ಎಂದು ಚರ್ಚಿಸುತ್ತಾರೆ.

೮. ಕನ್ನಡದಲ್ಲಿ ವಲಸೆಯ ಪ್ರವೃತ್ತಿ ಮತ್ತು ವಲಸಿಗ ಸಮುದಾಯಗಳು

ತಾರಿಣಿ ಶುಭದಾಯಿನಿ ಅವರ ಈ ಲೇಖನದಲ್ಲಿ ಭಾಷಿಕ ಸಮುದಾಯಗಳ ವಲಸೆಯ ಬಗ್ಗೆ ಚರ್ಚಿಸುತ್ತಾರೆ. ಚಾರಿತ್ರಿಕವಾಗಿ ನಡೆಯುತ್ತಲೇ ಬಂದಿರುವ ಈ ವಲಸೆ ಪರಿಕಲ್ಪನೆ ಇಂದಿನ ಜಾಗತೀಕರಣದ ನಂತರ ಇನ್ನಷ್ಟು ವಿಸ್ತಾರಗೊಂಡಿರುವುದನ್ನು ಚರ್ಚಿಸುತ್ತಾ ಭಾಷಿಕ ಸಮುದಾಯಗಳ

ವಲಸೆಯ ಹಿಂದಿರುವ ಕಾರಣಗಳನ್ನು ಊಹಿಸುತ್ತಾರೆ. ಹೆಚ್ಚಾಗಿ ಭಾಷಿಕ ಸಮುದಾಯಗಳ ವಲಸೆ ಉದ್ಯೋಗ, ಆರ್ಥಿಕ ಅಭಿವೃದ್ಧಿಗಾಗಿ ನಡೆದರೆ ಅನ್ಯಭಾಷೆಯವರ ವಲಸೆ ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ನಡೆಯುತ್ತಿರುವುದರ ಕುರಿತು ವಿವರಿಸುತ್ತಾರೆ. ಜೊತೆಗೆ ವಲಸೆ ಜನಪ್ರಿಯರಾಗಿರುವ ಉತ್ತರ ಕರ್ನಾಟಕದ ಬಿಜಾಪುರ, ಗುಲಬರ್ಗಾದಂತಹ ಸೀಮೆಗಳಲ್ಲಿನ ಜನ ಬರ ಪ್ರವಾಹಗಳ ಕಾರಣದಿಂದ ಹೋಗುತ್ತಿದ್ದಾರೆ. ಆದರೂ ಇವರಲ್ಲಿನ ಭಾವನಾತ್ಮಕ ಸಂಬಂಧಗಳ ಕಾಡುವಿಕೆ ಇದ್ದೆ ಇದೆ. ಉದಾಹರಣೆಗೆ ಗುಜರಾತಿಗಳು, ತಮಿಳುರು, ಮಲಯಾಳಿಗಳು ತಮ್ಮ ಸಂಸ್ಕೃತಿ ಉಳಿಸಿಕೊಳ್ಳುವುದಕ್ಕಾಗಿ ತಮ್ಮದೇ ಆದ ಕೇರಿಗಳನ್ನು ಮಾಡಿಕೊಂಡು ಬದುಕುತ್ತಿರುವವರನ್ನು ಹೆಚ್ಚು ಪ್ರಸ್ತಾಪಿಸುತ್ತಾರೆ.

*** ಬುಡಕಟ್ಟು ಸಮುದಾಯಗಳ ಕುರಿತ ಕೃತಿಗಳು**

**೧. ಹಕ್ಕಿಪಿಕ್ಕಿಯ ಸಂಸ್ಕೃತಿ**

ರಾಜಪ್ಪ ದಳವಾಯಿ ಅವರ ಈ ಕೃತಿಯು ಹಕ್ಕಿಪಿಕ್ಕಿ ಸಮುದಾಯದವರ ಆಚಾರ, ವಿಚಾರ, ಸಂಪ್ರದಾಯ, ಆಹಾರ, ಉಡುಪು, ಕುಲ, ಕಸುಬು ವ್ಯಾಪಾರದಂತಹ ಸಾಂಸ್ಕೃತಿಕ ಬದುಕನ್ನು ಚಿತ್ರಿಸಲಾಗಿದೆ. ಜೊತೆಗೆ ಆಧುನಿಕರಣಕ್ಕೆ ಒಳಗಾಗಿ ಅವರ ಬದುಕಿನಲ್ಲಾದ ಪರಿವರ್ತನೆಯನ್ನು ಸಹ ಇಲ್ಲಿ ಚರ್ಚಿಸುತ್ತಾರೆ. ಹಾಗೆಯೆ ಕೃತಿಯ ಪ್ರಸ್ತಾವನೆಯಲ್ಲಿ ಬರಗೂರು ರಾಮಚಂದ್ರಪ್ಪ ಅವರು ಸಂಸ್ಕೃತಿ ಕುರಿತಂತೆ ಪ್ರಸ್ತಾಪಿಸುತ್ತಾರೆ. ಒಟ್ಟಾರೆ ಇದೊಂದು ಹಕ್ಕಿಪಿಕ್ಕಿ ಜನಾಂಗದ ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಕೊಡುತ್ತದೆ.

**೨. ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು**

ಡಾ.ಪಿ.ಕೆ.ಖಂಡೋಬಾ ಅವರ ಈ ಕೃತಿಯು ಕರ್ನಾಟಕದ ಬುಡಕಟ್ಟಿನ ಅಲೆಮಾರಿಗಳಾಗಿ ಬದುಕಿದ ಲಂಬಾಣಿ ಸಮುದಾಯದವರ ಸಾಂಸ್ಕೃತಿಕ ಬದುಕನ್ನು ಚಿತ್ರಿಸುತ್ತದೆ. ಲಂಬಾಣಿಗರ ಮೂಲ ಸ್ಥಳ, ಬಂಧುತ್ವ, ಆಚರಣೆ, ನಂಬಿಕೆ, ಕೃತಿ, ಸಾಂಪ್ರದಾಯಿಕ ಬದುಕಿನ ಜೀವನ ಶೈಲಿಯನ್ನು ವಿವರಿಸುತ್ತದೆ. ಜೊತೆಗೆ ಸಾಂಸ್ಕೃತಿಕ ಬದುಕಿಗೆ ಹೆಸರುವಾಸಿಯಾಗಿದ್ದ ಅಂದಿನ ಸಂಪ್ರದಾಯ, ಆಚರಣೆ, ನಂಬಿಕೆಗಳು ಇಂದು ಬದಲಾಗುತ್ತಿರುವ ಜೀವನ ಶೈಲಿಯನ್ನು ಸಹ ಪ್ರಮುಖವಾಗಿ ಚರ್ಚಿಸುತ್ತದೆ.

**೩. ಭಾರತದ ಕುರುಬರು, ಡಾ.ಬಿ.ಕೆ.ರವಿ(ಅನು)**

ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಗೊಂಡ ಈ ಪ್ರಕಟಿತ ಅಧ್ಯಯನವೂ ಭಾರತದ ಕುರುಬರ ಸಮಾಜೋ ಸಂಸ್ಕೃತಿ ಅಧ್ಯಯನವಾಗಿದ್ದು, ಕುರುಬರ ಐತಿಹಾಸಿಕ ಹಿನ್ನೆಲೆಯನ್ನು

ಒಳಗೊಂಡಂತೆ ಕುರುಬರ ಜಾತಿ, ಉಪಜಾತಿ, ವಸತಿ, ಕುರಿತಂತೆ ವಿವರಿಸಿಕೊಡುತ್ತಾರೆ ಹಾಗೂ ಇದರ ಜೊತೆಗೆ ಕುರುಬರ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳನ್ನು ಹೇಳುವ ಪ್ರಮುಖ ಕೃತಿಯಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಸಾಹಿತ್ಯೇತರ ಜ್ಞಾನ ಶಿಸ್ತುಗಳಲ್ಲಿ ಬಂದಂತಹ ಅಧ್ಯಯನಗಳು, ಕೃತಿಗಳು, ಲೇಖನಗಳು, ವಲಸೆಯನ್ನು ಪ್ರಮುಖ ಉದ್ದೇಶವಾಗಿರಿಸಿಕೊಂಡಿಲ್ಲ. ಒಂದು ವೇಳೆ ಕೆಲವು ಅಧ್ಯಯನಗಳಲ್ಲಿ ವಲಸೆ ಪ್ರಮುಖವಾಗಿದ್ದರೂ ಅವು ಕೆಲವೊಂದು ಪ್ರದೇಶ, ಸಮುದಾಯ ಗಳನ್ನು ವ್ಯಾಪ್ತಿಯಾಗಿರಿಸಿಕೊಂಡು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆದು ಕೋಷ್ಟಕಗಳ ಮೂಲಕ ವಿವರಿಸಲು ಪ್ರಯತ್ನಿಸಿವೆ. ಕೆಲವು ಕಡೆ ವಲಸೆ ಬಂದ ಜನರ ಸಮಸ್ಯೆಗಳನ್ನು ಗುರುತಿಸಿ ವಿಶ್ಲೇಷಿಸಿದ್ದರೂ ಅದು ಪರಿಣಾಮಕಾರಿಯಾಗಿರದೆ, ವಸ್ತುನಿಷ್ಠಮಾದರಿಯಾಗಿದೆ. ಹಾಗಾಗಿ ಸಾಹಿತ್ಯಕ್ಕಿಂತ ಸಾಹಿತ್ಯೇತರವಾಗಿ ವಿವರಿಸಿ ವಿಶ್ಲೇಷಿಸಿದ್ದ ವಲಸೆ ಕುರಿತ ಈ ಎಲ್ಲಾ ಕೃತಿಗಳು ಭಿನ್ನವಾಗುತ್ತವೆ ಹಾಗೂ ಹೆಚ್ಚಾಗಿ ಸಮುದಾಯ ಅಧ್ಯಯನಗಳಲ್ಲಿ ಅವರ ಸಾಂಸ್ಕೃತಿಕ ಬದುಕನ್ನು ವಿವರಿಸುವುದು ಮತ್ತು ಇದೇ ಅವರ ಪ್ರಮುಖ ಉದ್ದೇಶವಾಗಿರುವುದು ಕಂಡುಬರುತ್ತದೆ.

## ಅಧ್ಯಾಯ ನಾಲ್ಕು

# ಸಾಹಿತ್ಯ ಮತ್ತು ವಲಸೆಯ ಅಂತಃಸಂಬಂಧಗಳು

ಸಾಹಿತ್ಯಕ್ಕೂ, ಚರಿತ್ರೆಗೂ ಹೇಗೆ ಒಂದು ಅವಿನಾಭಾವ ಸಂಬಂಧವಿದೆಯೋ ಹಾಗೆಯೆ ಸಾಹಿತ್ಯಕ್ಕೂ ವಲಸೆಗೂ ಅಂತಃಸಂಬಂಧವಿದೆ. ಈ ನಂಟು ನಿನ್ನೇ ಮೊನ್ನೇಯದ್ದಲ್ಲದೆ ಮಾನವನ ಪರಂಪರೆಯಿಂದಿಡಿದು ಇಂದಿನವರೆಗೂ ಮತ್ತು ಮುಂದೆಯೂ ನೆಡೆಯುತ್ತಿರುವ ಚಲನೆಯಾಗಿ ಸಾಹಿತ್ಯದಲ್ಲಿ ಅಭಿವ್ಯಕ್ತಗೂಳ್ಳುತ್ತಾ ಬಂದಿದೆ. ವಲಸೆ ವಸ್ತುವಾಗಿ ಒದಗಿದ ಬಗೆಯನ್ನು ಸಾಹಿತ್ಯ ತನ್ನದೇ ಆದ ರೀತಿಯಲ್ಲಿ ಗ್ರಹಿಸಿ ಸ್ವೀಕರಿಸಿದೆ. ಸಾಮಾಜಿಕ ನೆಲೆಯಾದರೆ ಕುಟುಂಬ, ಗ್ರಾಮಕ್ಕೆ ಈ ವಲಸೆ ಹೇಗೆ ಪ್ರೇರಣೆಯಾಯಿತು, ಪರಿಣಾಮಗಳೇನು ಎಂಬೆಲ್ಲಾ ಅಂಶಗಳನ್ನು ಅನಾವರಣ ಗೊಳಿಸುತ್ತದೆ. ಇನ್ನು ಇಂತಹ ವಸ್ತು ವಿಷಯವೊಂದನ್ನು ಲೇಖಕರು ಕಾಲ್ಪನಿಕ/ವಾಸ್ತವಿಕ ಆಯ ಅಳತೆಗಳಲ್ಲಿ ವಲಸೆಯ ಸಂದರ್ಭವನ್ನು ಮನಗಾಣಿಸುವ ರೀತಿ ಅನೂಹ್ಯವಾದುದು.

ವಲಸೆಯು ಕೂಡ ಇತರ ಜ್ಞಾನಶಿಸ್ತುಗಳಲ್ಲಿ ಅಂದರೆ ಚಾರಿತ್ರಿಕ ಸಮುದಾಯಿಕ ಇತ್ಯಾದಿ ನೆಲೆಗಳಲ್ಲಿ ಚರ್ಚೆಗೊಳಗಾಗುತ್ತದೆ ಬಹುಶಃ ಈ ಎಲ್ಲಾ ಚರ್ಚೆಗಳು ಬೇಡುವ ಆಧಾರ/ದಾಖಲೆಗಳನ್ನು ಸಾಹಿತ್ಯ ಕರಾರುವಕ್ಕಾಗಿ ಬೇಡದೆ ಮೌಖಿಕ ಆಕರಗಳನ್ನು ಅಥವಾ ಲೇಖಕರ ಸಾಂದರ್ಭಿಕ ಸತ್ಯಗಳನ್ನು ಕೂಡ ಅನುಸರಿಸುತ್ತದೆ, ಎಲ್ಲಾ ಕಾಲ್ಪನಿಕ ಅಂತಲ್ಲಾ ಬಹುಶಃ ಪಾತ್ರಗಳು ಕೂಡ ಸಾಕ್ಷೀಕೃತ ಪ್ರಮಾಣವೇ ಅದು ಕೆಲವೊಮ್ಮೆ ಲೇಖಕರು ಕಂಡೂಂಡ ಸತ್ಯಗಳಾಗಿರಬಹುದು. ಹೀಗೆ ಸಾಹಿತ್ಯ ತನ್ನೆಲ್ಲ ಆಂತರಿಕ ಸತ್ವದಿಂದಲೇ ರೂಪುಗೊಂಡಿರುತ್ತದೆ. ಹೀಗೆ ಸಾಮಾಜಿಕ ಪ್ರಕ್ರಿಯೆಯಾದ ವಲಸೆಯನ್ನು ಸಮಾಜದ ಪ್ರತಿಬಿಂಬವಾದ ಸಾಹಿತ್ಯದಲ್ಲಿ ಲೇಖಕರು ಅಭಿವ್ಯಕ್ತಿಸುವ ಕ್ರಮ ಸಾಹಿತ್ಯದ ಉಗಮದಿಂದಲೂ ಕಾಣಬಹುದಾಗಿದೆ.

ಹೀಗೆ ಒಟ್ಟು ಸಾಹಿತ್ಯ ಕೃತಿಗಳಲ್ಲಿ ವಲಸೆ ಎಂಬ ಪರಿಕಲ್ಪನೆಯನ್ನು ಲೇಖಕರು ಪ್ರಮುಖ ಅಂಶವಾಗಿಯೂ ಅಥವಾ ಪ್ರಾತಿನಿಧಿಕವಾಗಿಯೂ ಅಭಿವ್ಯಕ್ತಿಸಿರುವ ಬಗೆಯನ್ನು ವಿಶ್ವಸಾಹಿತ್ಯ,

ಭಾರತೀಯ ಸಾಹಿತ್ಯ, ಮತ್ತು ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಸಾಹಿತ್ಯದಿಂದ ಆಧುನಿಕ ಸಾಹಿತ್ಯದ ವರೆಗಿನ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿ ಮೂಡಿಬಂದಿರುವ ಆದರೆ ಕಥನ ಸಾಹಿತ್ಯವನ್ನು ಹೊರತುಪಡಿಸಿದ ವಲಸೆ ಕುರಿತ ಕೃತಿಗಳನ್ನು ಅವಲೋಕಿಸುವ ಮೂಲಕ ಸಾಹಿತ್ಯಕ್ಕೂ ಮತ್ತು ವಲಸೆಗಿರುವ ಅಂತಃಸಂಬಂಧವನ್ನು ಇಲ್ಲಿ ನಿರೂಪಿಸಲಾಗಿದೆ.

**ವಿಶ್ವಸಾಹಿತ್ಯ**

**೧. ಗಲಿವರ್ಸ್ ಟ್ರಾವಲ್ಸ್–ಜೋನಾಥನ್ ಸ್ವಿಪ್ಟ:**

೧೯೦೦ರಲ್ಲಿ ರಚನೆಯಾದ ಜೊನಾಥನ್ ಸ್ವಿಪ್ಟರವರ ಗಲಿವರ್ಸ್ ಟ್ರಾವಲ್ಸ್ ಎಂಬ ಕೃತಿಯನ್ನು ಎಸ್.ಜಿ. ನರಸಿಂಹಚಾರ್ಯರು ಗಲಿವರನ ದೇಶಸಂಚಾರ ಎಂದು ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಿಸಿದ ಕೃತಿಯಾಗಿದೆ. ಈ ಕೃತಿಯಲ್ಲಿ ವಲಸೆಯೇ ಪ್ರಮುಖ ವಸ್ತು ಹಾಗಿರದಿದ್ದರೂ ಗಲಿವರ ತನ್ನ ವೈದ್ಯಕೀಯ ವೃತ್ತಿಗಾಗಿ ಹಡಗುಗಳಲ್ಲಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಅಲೆಮಾರಿಯಂತೆ ಅಲೆಯುವ ಸ್ಥಿತಿಯಲ್ಲಿ ಉಂಟಾಗುವ ಅನೇಕ ಘಟನೆಗಳು, ಸಮಸ್ಯೆಗಳು ಈ ಕೃತಿಯಲ್ಲಿ ಮೂಡಿಬಂದಿದೆ. ಇದು ಒಂದು ತರಹದ ವೃತ್ತಿಗಾಗಿ ವಲಸೆ ಎಂದರೆ ತಪ್ಪಾಗಲಾರದು

ಇಂಗ್ಲೆಂಡ್ ದೇಶದ ಒಂದು ಪುಟ್ಟ ಹಳ್ಳಿಯವನಾದ ಗಲಿವರ, ಸಮುದ್ರದಲ್ಲಿ ದೊಡ್ಡ ದೊಡ್ಡ ಹಡಗುಗಳಲ್ಲಿ ವೈದಕೀಯ ವೃತ್ತಿಯನ್ನು ಮಾಡುತ್ತ ಸಂಚರಿಸುತ್ತಿದ್ದವನು. ಒಂದು ಸಾರಿ ಮನೆಯವರ ವಿರೋಧದ ನಡುವೆ ಹಣ ಗಳಿಸಬೇಕೆಂಬ ಹುಚ್ಚಿನಿಂದ ದಕ್ಷಿಣ ಸಮುದ್ರಕ್ಕೆ ಹೊರಡುವ ಹಡಗಿನಲ್ಲಿ ಪಯಣಿಸುವಾಗ, ಹಡಗು ಬಿರುಗಾಳಿಗೆ ಸಿಕ್ಕಿ ದುರಂತಕ್ಕೀಡಾಗುತ್ತದೆ. ಮೊದಲೇ ದೈತ್ಯಾಕಾರದಲ್ಲಿದ್ದ ಗಲಿವರ ಸಮುದ್ರದಲ್ಲಿಯೇ ಒಂದಿಷ್ಟು ದೂರ ನಡೆದುಕೊಂಡು ಲಿಲ್ಲಿಪುಟ್ ಎಂಬ ರಾಜ್ಯ ಸೇರಿದ ಅಲ್ಲಿದ್ದ ತೀರ ಕುಳ್ಳಗಿನ ಜನರನ್ನು ಕಂಡು ಬೆರಗಾಗಿ ಸ್ವಲ್ಪದಿನಗಳ ಕಾಲ ಇದ್ದು ಅಲ್ಲಿದ್ದ ಉಚ್ಚ, ನೀಚಪಾದುಕೆ ಎಂಬ ಪಂಗಡಗಳ ಜೊತೆ ನಡೆಯುವ ಸಂಘರ್ಷದಲ್ಲಿ ತಾನು ಇದ್ದ ಲಿಲ್ಲಿಪುಟ್ ಸಂಸ್ಥಾನ ಕಡೆ ಹೋರಾಡಿ ಜಯ ತಂದುಕೊಟ್ಟ. ಮತ್ತೇ ಸ್ವಲ್ಪದಿನಗಳ ಕಾಲ ಬ್ಲೆಸಿಕ್ಕೊ ದ್ವೀಪಕ್ಕೆ ಹೋಗಿದ್ದು, ನಂತರ ತನ್ನ ತಾಯ್ನಾಡನ್ನೇ ಸೇರಿಕೊಳ್ಳುತ್ತಾನೆ. ಹೀಗೆ ಗಲಿವರ ಅಲೆದಾಟ ಒಂದು ರೀತಿಯ ಅಲೆಮಾರಿತನ ಅಥವಾ ಅರೆಶಾಶ್ವತ ವಲಸೆ ಎಂದು ಕರೆಯಬಹುದು.

**೨. ಗಾನ್‌ವಿತ್ ದಿ ವಿಂಡ–ಮಾರ್ಗರೇಟ್ ಮಿಷನ್**

ಈ ಕಾದಂಬರಿಯನ್ನು ಕನ್ನಡಕ್ಕೆ ಶಾಮಲರವರು ಅನುವಾದಿಸಿದ್ದಾರೆ. ಈ ಕಾದಂಬರಿಯಲ್ಲಿ ಯುದ್ಧ ಆಕ್ರಮಣಗಳಿಂದ ಜನಸಾಮಾನ್ಯರ ಬದುಕು ಎಷ್ಟು ಕಷ್ಟಕರವಾಗಿತ್ತು ಮತ್ತು ಆ ಯುದ್ಧದ

ಆಕ್ರಮಣ ತಪ್ಪಿಸಿಕೊಳ್ಳಲೆಂದು ಒಂದು ಪ್ರದೇಶಕ್ಕೆ ಹೊರಟು ಹೋಗುವ ಜನರ ಸ್ಥಿತಿಗತಿಯನ್ನು ಈ ಕಾದಂಬರಿಯಲ್ಲಿ ನೋಡಬಹುದು. ಹತ್ತೊಂಬತ್ತನೇ ಶತಮಾನದಲ್ಲಿ ಯಾಂಕಿಗಳೆಂದು ದಕ್ಷಿಣೀಯರಿಂದ ಕರೆಯಲ್ಪಡುವ ಉತ್ತರ ಅಮೆರಿಕದವರಾದ ಯೊಧರ ದಾಳಿಗೆ ಸಂಘಟನಾ ಸೇನೆ ಪತನವಾಗುತ್ತದೆ. ಈ ಪತನಕ್ಕೆ ಯುದ್ದದ ಆಕ್ರಮಣಕ್ಕೆ ಕೌಂಟಿಯ ಕೃಷಿಭೂಮಿ, ಸೌಧಗಳು, ಆ ನಾಗರೀಕತೆ ನೆಲೆತಪ್ಪಿ ಪಟ್ಟಣ ಸೇರುತ್ತಾರೆ. ಯಾಂಕಿಗಳ ದಾಳಿಯಿಂದ ತಪ್ಪಿಸಿಕೊಳ್ಳಲು ಯತ್ನಿಸುವ ಸ್ಥಿತಿಯನ್ನು ಚಿತ್ರಿಸುತ್ತಾರೆ.

ಒಟ್ಟಾರೆ ಯುದ್ಧದಿಂದಾಗಿ ಸೈನಿಕರು ಜನಸಾಮಾನ್ಯರ ಮನೆ, ಹೊಲ, ಎಲ್ಲವನ್ನು ನಾಶ ಮಾಡುತ್ತಿದ್ದರಿಂದ ಜನರ ಬದುಕು ಶೋಚನಿಯವಾಗಿತ್ತು. ಎಲ್ಲವನ್ನು ಕಳೆದುಕೊಂಡು ಕಾಡುಗಳಲ್ಲಿ ಅಲೆದು ಕಣ್ಣತಪ್ಪಿಸಿ ಬದುಕುತ್ತಿದ್ದರು. ಮತ್ತೆ ಒಂದು ಕಡೆ ನೆಲೆಯಾಗಿ ಜೀವನವನ್ನು ಆರಂಭಿಸುತ್ತಿದ್ದ ಜನರ ಸ್ಥಿತಿಗತಿಯನ್ನು ಇಲ್ಲಿ ಕಾಣಬಹುದು

**೩. ವೋಲ್ಗಾ ಗಂಗಾ–ರಾಹುಲ ಸಾಂಕೃತ್ಯಾಯನ**

ಹಿಂದಿಯಿಂದ ಕನ್ನಡಕ್ಕೆ ಅನುವಾದಗೊಂಡ ಈ ಕಾದಂಬರಿಯಲ್ಲಿ ಕ್ರಿ.ಪೂ. ೬೦೦೦ ರಿಂದ ಕ್ರಿ.ಶ. ೧೯೪೨ ರ ತನಕದ ಮಾನವರ ಸಮಾಜದ ಐತಿಹಾಸಿಕ, ಆರ್ಥಿಕ, ರಾಜನೈತಿಕ ಪ್ರವಾಹಗಳನ್ನು ೭೦ ಕತೆಗಳ ಮೂಲಕ ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿ ಲೇಖಕರು ಕಾಲಕ್ಕನುಗುಣ ವಾಗಿ ಪಾತ್ರಗಳ ಮೂಲಕ ಬೇಟೆ, ಆಹಾರ ಪದ್ಧತಿ, ಆಚಾರ–ವಿಚಾರಗಳು, ಹಸಿವು, ಮಾನವ ಮಾನವರಲ್ಲಿನ ವೈಷಮ್ಯಗಳು ಕಾಲಾನಂತರದಲ್ಲಿ ಬಂದಂತಹ ಅನೇಕ ಧರ್ಮಗಳು, ಜಮೀನ್ದಾರಿ ಪದ್ಧತಿ, ಜನಸಾಮಾನ್ಯರಿಗೆ ಮಾಡುತ್ತಿದ್ದ ಶೋಷಣೆಗಳು, ಜಾತಿ ಪದ್ಧತಿಯ ವಿಂಗಡನೆ, ವರ್ಗ ವರ್ಗಗಳಲ್ಲಿ ನಡೆಯುತ್ತಿದ್ದ ಸಂಘರ್ಷಗಳನ್ನು ಲೇಖಕರು ಕತೆಯಲ್ಲಿ ಪಾತ್ರಗಳ ಮೂಲಕ ವಿವರಿಸಿದ್ದಾರೆ.

ಆದಿಮಾನವರು ಮೊದಲು ಬೇಟೆಗಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋದಾಗ, ಎರಡು ಪಂಗಡಗಳಿಂದ ಜಗಳಗಳು ಉಂಟಾಗುತ್ತಿದ್ದ ಪರಿಣಾಮದಿಂದ ಮಾನವರು ಮತ್ತೊಂದು ಕಾಡಿಗೆ ವಲಸೆ ಬರುವ ಸನ್ನಿವೇಶವನ್ನು ಕೃತಿಕಟ್ಟಿಕೊಡುತ್ತದೆ. ಇದಷ್ಟೆ ಅಲ್ಲದೆ ಆಕಸ್ಮಿಕವಾಗಿ ವಲಸೆ ಬಂದ ಮಾನವರು ಮತ್ತೊಂದು ಕಡೆ ನೆಲೆಯಾಗಿ ಅಲ್ಲಿಯೇ ಅಧಿಪತಿಗಳಾಗಿ ಆಡಳಿತ ನಡೆಸುತ್ತಿದ್ದರು. ಇನ್ನು ದಾಸ್ಯಗಳಂತೂ ಒಂದಿಷ್ಟು ದಿನ ಇಲ್ಲಿ ಇದ್ದರೆ ಇನ್ನು ಒಂದಿಷ್ಟು ದಿನ ಮತ್ತೊಂದು ಕಡೆ ಹೆಂಡತಿ ಮಕ್ಕಳು ಪರಿವಾರವನ್ನು ಬಿಟ್ಟು ಇರಬೇಕಾದ ಸಂದರ್ಭಗಳು ಇರುತ್ತಿದ್ದವು.

ಹಾಗೆಯೆ ಕಾಲಾನಂತರದಲ್ಲಿ ಆರ್ಯರು ಅಸುರರನ್ನು ಸೋಲಿಸಿ ಅಲ್ಲಿಯೇ ನೆಲೆಸಿ ಅವರ ಮೇಲೆಯೇ ಆಡಳಿತ ನಡೆಸುತ್ತಿದ್ದರು. ಮುಂದೆ ಇಸ್ಲಾಂ ಧರ್ಮದವರು ಹಿಂದೂಗಳಿಗೆ

ಸಹಾಯ ಮಾಡುವ ನೆಪದಲ್ಲಿ ತಮ್ಮ ಧರ್ಮವನ್ನು ಸ್ಥಾಪಿಸಿ ತಾವು ಸಹ ಇಲ್ಲಿಯೇ ಗಟ್ಟಿಯಾಗಿ ನೆಲೆಸಿದರು. ಕ್ರೈಸ್ತಧರ್ಮದವರಂತೂ ಏನು ಹರೆಯದ ಚಿಕ್ಕಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ನೆಪದಲ್ಲಿ ಮತಾಂತರಗೊಳಿಸಿ ಬೇರೆ ದೇಶಗಳಿಗೆ ಕಳುಹಿಸುತ್ತಿದ್ದರು. ಹೀಗೆ ಮಾನವರ ಉಗಮದಿಂದ ಇಂದಿನವರೆಗೂ ಸಾಗಿ ಬಂದ ಬದುಕಿನ ಸ್ಥಿತಿಯನ್ನು ಇಲ್ಲಿ ನೋಡಬಹುದು.

**೩. ತಲೆಮಾರು–ಅಲೆಕ್ಸ ಹೇಲಿ**

ರೂಟ್ಸ್ ಕಾದಂಬರಿಯನ್ನು ಬಂಜಗೆರೆ ಜಯಪ್ರಕಾಶ ಅವರು ತಲೆಮಾರು ಎಂದು ಅನುವಾದಿಸಿದ್ದಾರೆ. ಆಫ್ರಿಕಾದ ಕಪ್ಪುಜನರನ್ನು ಬಿಳಿಯರು ಪ್ರಾಣಿಗಳಂತೆ ಸೆರೆ ಹಿಡಿದು ಗುಲಾಮರಂತೆ ನಡೆಸಿಕೊಂಡ ಅಂದಿನ ಸಂದರ್ಭವನ್ನು ಈ ಕತೆ ಚಿತ್ರಿಸುತ್ತದೆ. ಗಾಂಬಿಯಾದ ಜಪೂರ್ ಎಂಬ ಸ್ಥಳದಲ್ಲಿ ಹುಟ್ಟಿ ಅಲ್ಲಿಯ ಸಾಂಸ್ಕೃತಿಕ ಸಮೃದ್ಧಿಯ ಪರಿಸರದಲ್ಲಿ ಬೆಳೆದು ಕನಸು ಕಾಣುತ್ತಿದ್ದ ಕುಂಟಾಕಿನ್ ಟೆ ಎಂಬ ಕಪ್ಪುವರ್ಣಿಯರನ್ನು ಬೇಟೆಯಾಡಿ ಸೆರೆ ಹಿಡಿದು ಹಡಗಿನಲ್ಲಿ ಪ್ರಾಣಿಗಳಂತೆ ಬಂಧಿಸಿ ಅಮೆರಿಕಾಗೆ ಒಯ್ದು ಗುಲಾಮನಂತೆ ಮಾರಲಾಗುತ್ತದೆ. ತನ್ನ ತಂದೆ, ತಾಯಿ, ಬಂಧು ಬಳಗದವರೊಂದಿಗೆ ಬದುಕುವ ಹಂಬಲದಿಂದ ಅಲ್ಲಿಂದ ತಪ್ಪಿಸಿಕೊಳ್ಳಲು ಮತ್ತೆ ಮತ್ತೆ ಪ್ರಯತ್ನಿಸಲು ಹೋಗಿ ಶಿಕ್ಷೆಗೆ ಗುರಿಯಾಗುತ್ತಾನೆ. ಕೊನೆಗೆ ಅಲ್ಲಿಯೇ ಇವನಂತೆ ಗುಲಾಮಳಾಗಿ ಬಂದ ಹುಡುಗಿ ಯನ್ನು ಮದುವೆಯಾಗಿ ಸಂಸಾರ ಕಟ್ಟಿಕೊಳ್ಳುತ್ತಾನೆ.

ಇನ್ನು ವಯಸ್ಸಾದವರು, ಚಿಕ್ಕ ಮಕ್ಕಳಿಂದ ಯಾವ ಕೆಲಸವನ್ನು ಮಾಡಿಸಿಕೊಳ್ಳಲು ಸಾಧ್ಯವಿಲ್ಲವೆಂದಾಗ ಅವರನ್ನು ಅಲ್ಲಿಯೇ ಬಿಟ್ಟು ಅವರ ಮಕ್ಕಳು ಸೊಸೆಯಂದಿರನ್ನು ಮಾರಾಟ ಮಾಡಲು ಮುಂದಾಗುತ್ತಾರೆ. ಅವರು ಸಾಯುವರೆಗೂ ಬಂಧಿಯಾಗಿ ಬದುಕು ನಡೆಸುತ್ತಾರೆ. ಹೀಗೆ ಈ ಕತೆಯಲ್ಲಿ ಅಮಾನವೀಯ ಘಟನೆಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಒಂದು ಪ್ರದೇಶದಲ್ಲಿ ನೆಲೆಯಾಗಿ ಹೊಂದಿಕೊಳ್ಳುವಷ್ಟರಲ್ಲಿ ಮತ್ತೊಬ್ಬರಿಗೆ ಮಾರುವಾಗ ಅವರಲ್ಲಿ ಉಂಟಾಗುವ ಸಂವೇದನೆಗಳನ್ನು ಚಿತ್ರಿಸಿದ್ದಾರೆ.

**೪. ದೊರೆ ಈಡಿಪಸ್ ಮತ್ತು ಸಾಫೋಕ್ಲಿಸ್**

ಈ ನಾಟಕವನ್ನು ಪಿ. ಲಂಕೇಶ್ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಥೀಬ್ಸ್ ನಗರದ ರಾಜನಾದ ಲಾಯಿಸ್ ಮತ್ತು ಹೆಂಡತಿ ಯೊಕಾಸ್ತಾನಿಗೆ ಮಕ್ಕಳಾಗಿರದ ಕಾರಣ ಡೆಲ್ಫಿಯ ದೇವವಾಣಿಯನ್ನು ಕೇಳುತ್ತಾರೆ. ಅದು ಲಾಯಿಸ್‌ಗೆ ಆಗುವ ಮಗು ತನ್ನ ತಂದೆಯನ್ನು ಕೊಂದು ತಾಯಿಯನ್ನು ಮದುವೆಯಾಗುವುದಾಗಿ ದೇವವಾಣಿ ಹೇಳುತ್ತದೆ. ಸ್ವಲ್ಪದಿನಗಳ ನಂತರ ಲಾಯಿಸ್ ಮತ್ತು ಯೊಕಾಸ್ತಾನಿಗೆ ಗಂಡು ಮಗುವಾಗುತ್ತದೆ. ಅವನೇ ಈ ನಾಟಕದ ನಾಯಕ ಈಡಿಪಸ್.

ತಂದೆಯನ್ನೆ ಕೊಲ್ಲುತ್ತಾನೆ ಎಂಬ ದೇವವಾಣಿಯನ್ನು ಸುಳ್ಳಾಗಿಸಲೆಂದೇ ರಾಜ ಮಗನನ್ನು ಅರಮನೆಯ ಸೇವಕನಿಗೆ ಕೊಟ್ಟು ಕೊಲ್ಲಿಸಲು ಹೇಳುತ್ತಾನೆ. ಆದರೆ ಸೇವಕ ಮಗುವಿಗೆ ಸೂಜಿ ಚುಚ್ಚಿ ತೆವಳಲು ಸಹ ಬಾರದಾಗೆ ಮಾಡುತ್ತಾನೆ. ಆದರೆ ಕೊಲಲ್ಲು ಸಾಧ್ಯವಾಗದೆ ಕರುಣೆಯಿಂದ ಕುರುಬನೊಬ್ಬನಿಗೆ ಕೊಟ್ಟು ಸಾಕಲು ಹೇಳುತ್ತಾನೆ. ಮಗುವನ್ನು ತೆಗೆದುಕೊಂಡ ತಾರಿಂಥನ್ ಕುರುಬ ತಾರಿಂಥನ ದೊರೆ ಪಾಲಿಬಸ್‌ಗೆ ಕೊಡುತ್ತಾನೆ. ಪಾಲಿಬಸ್‌ಗೆ ಮಕ್ಕಳಿಲ್ಲವಾದ್ದರಿಂದ ಈಡಿಪಸ್‌ನನ್ನು ಪ್ರೀತಿಯಿಂದ ಸಾಕಿ ದೊಡ್ಡವನನ್ನಾಗಿ ಮಾಡುತ್ತಾನೆ. ಆದರೆ ಹಬ್ಬವೊಂದರ ಸಮಯದಲ್ಲಿ ಕುಡುಕನೊಬ್ಬನ ಬಾಯಿಂದ ಈಡಿಪಸ್ ತನ್ನ ಭವಿಷ್ಯವಾಣಿ ಗೊತ್ತಾಗುತ್ತದೆ. ಕೊನೆಗೆ ಥೀಬ್ಸ್‌ಗೆ ಬರುತ್ತಿದ್ದಾಗ ಮೂರು ದಾರಿಗಳು ಕಲಿಯುವ ಒಂದು ಕಡೆ ಥೀಬ್ಸ್ ನಗರದ ರಾಜನಾದ ಲಾಯಿಸ್‌ಗೂ ಮತ್ತು ಈಡಿಪಸ್‌ಗೂ ಜಗಳ ಉಂಟಾಗಿ ಲಾಯಿಸ್‌ನನ್ನು ಈಡಿಪಸ್ ಕೊಂದು ಹಾಕುತ್ತಾನೆ. ನಂತರ ಈಡಿಪಸ್ ಥೀಬ್ಸ್ ನಗರಕ್ಕೆ ಬರುತ್ತಾನೆ. ಅಲ್ಲಿ ದೊರೆಯ ಮರಣದ ವಿಷಯ ಕೇಳಿ ಹಾಹಾಕರಗೊಂಡಿತ್ತು. ಅಷ್ಟೇ ಅಲ್ಲದೆ ಸ್ಫಿಂಕ್ಸ್ ಮಾರಿ ಎಂಬುವವಳು ಒಗಟುಗಳನ್ನು ಹೇಳುತ್ತಾ ಅದನ್ನು ಬಿಡಿಸಲಾರದ ಜನರನ್ನು ಕೊಲ್ಲುತ್ತಿದ್ದಳು. ಈಡಿಪಸ್ ಈ ಒಗಟುಗಳನ್ನು ಬಿಡಿಸಿ ಥೀಬ್ಸ್‌ನ್ನು ಸ್ಫಿಂಕ್ಸ್‌ನಿಂದ ಮುಕ್ತಗೊಳಿಸುತ್ತಾನೆ. ನಂತರ ಲಾಯಿಸ್ ಹೆಂಡತಿ ಯೊಕಾಸ್ತಾಳನ್ನು ಮದುವೆಯಾಗುತ್ತಾನೆ.

ಕಾಲನಂತರದಲ್ಲಿ ದೊರೆ ಲಾಯಿಸ್‌ನ ಮರಣ ವೃತ್ತಾಂತವನ್ನು ಕೇಳಿದ ಈಡಿಪಸ್ ತನ್ನ ತಾಯಿಯನ್ನೇ ಮದುವೆಯಾದ ಸಂಗತಿ ತಿಳಿದು ತನ್ನ ಕಣ್ಣುಗಳನ್ನು ಕಳೆದುಕೊಳ್ಳುತ್ತಾನೆ. ಮತ್ತು ಯಾಕಾಸ್ತಾ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈಡಿಪಸ್‌ನ ಸಿಂಹಾಸನವನ್ನು ಅವನ ಮೈದುನ ಕ್ರಿಯಾನ್ ಪಡೆಯುತ್ತಾನೆ. ಈಡಿಪಸ್ ತನ್ನ ಕಣ್ಣುಗಳನ್ನು ಕಳೆದುಕೊಂಡು ೪ ಜನ ಮಕ್ಕಳನ್ನು ಬಿಟ್ಟು ದೇಶಾಂತರ ಹೋಗಲು ಸಿದ್ಧನಾಗುತ್ತಾನೆ. ಆದರೆ ಮೈದುನ ಕ್ರಿಯಾನ್ ದೇಶಾಂತರ ಕಳುಹಿಸಲು ಒಪ್ಪುವುದಿಲ್ಲ. ಅನೇಕ ವರ್ಷಗಳವರೆಗೆ ಥೀಬ್ಸ್‌ನಲ್ಲೇ ಅವಹೇಳನ ಅನುಭವಿಸುತ್ತಾನೆ. ಇವನಿಗೆ ಮುಪ್ಪು ಬಂದ ಕಾಲದಲ್ಲಿ ಈಡಿಪಸ್‌ನ ಮಗಳಾದ ಅಂತಿಗೊನಿಯೊಂದಿಗೆ ಊರುಬಿಟ್ಟು ಅಲೆಯುತ್ತಾನೆ. ಹೀಗೆ ಈಡಿಪಸ್ ಹುಟ್ಟಿನಿಂದ ಹಿಡಿದು ಸಾಯುವವರೆಗೆ ಒಂದಲ್ಲಾ ಒಂದು ಕಾರಣಕ್ಕೆ ಅಲೆಯುತ್ತಾ ಜೀವನ ಸಾಗಿಸುತ್ತಾನೆ.

**೫. ಒಡೆಸ್ಸಿ–ಹೋಮರ**

ಗ್ರೀಕ್ ದೇಶದ ವೀರನಾದ ಒಡಿಸ್ಸಿ ಟ್ರೋಯ್ ಎಂಬ ನಗರಕ್ಕೆ ಹೋಗಿ ಅಗ್ನಿಗಾಹುತಿ ಮಾಡಿ ಊರಿಗೆ ಹಿಂದಿರುಗುವ ಮರುಪಯಣವೆ ಒಡಿಸ್ಸಿಯೇ ಕಾವ್ಯದ ಕಥೆ. ಊರಿಗೆ ಹಿಂತಿರುಗು ವಾಗ ದೇವತೆಗಳ ಆಕ್ರೋಶಕ್ಕೊಳಗಾದ ಗ್ರೀಕರು ಒಡಿಸ್ಸಿಯನ್ನಾಳಿದ ಉಳಿದ ವೀರರು ಸಾವನ್ನಪ್ಪುತ್ತಾರೆ.

ಗ್ರೀಕರು ೧೨ ವರ್ಷಗಳು ಟ್ರೋಜನರ ಮೇಲೆ ಹೋರಾಟ ಮಾಡಿ ಕೊನೆಗೆ ಜಯಗಳಿಸುತ್ತಾನೆ. ನಂತರ ಎಂಟು ವರ್ಷಗಳ ಕಾಲ ಊರೂರು ಅಲೆದಾಡಿ ನಾನಾ ಕಷ್ಟಗಳಿಗೆ ಒಳಗಾಗಿ ಕೊನೆಗೆ ೨೦ ವರ್ಷಗಳು ಆದ ನಂತರ ಊರನ್ನು ಸೇರುತ್ತಾನೆ.

ಒಡಿಸ್ಸಿ ಟ್ರೋಯ್ ಕದನಕ್ಕೆ ಬಂದಾಗ ಇನ್ನು ಚಿಕ್ಕವನಾಗಿದ್ದ ಮಗ ಬೆಲೆಮೇಕಸನು ಇಪ್ಪತ್ತು ವರ್ಷಗಳ ನಂತರ ವಯಸ್ಸಿಗೆ ಬಂದು ನವತರುಣನಾಗಿರುತ್ತಾನೆ. ಮಗನಿಗೆ ತಂದೆಯ ಪರಿಚಯವೇ ಇರುವುದಿಲ್ಲ. ಹಾಗಾಗಿ ಮಗನಿಗೆ ತಾನು ಯಾರು ಎಂದು ತಿಳಿಸುತ್ತಾನೆ ಮತ್ತು ಅಲ್ಲಿ ನಡೆದ ಕದನದ ಕುರಿತು ವಿವರಿಸುತ್ತಾನೆ. ಕೊನೆಗೆ ಪತ್ನಿ ಪುತ್ರ ಸಮೇತ ಬಾಳನ್ನು ನಡೆಸುತ್ತಾನೆ. ಹೀಗೆ ಕದನಕ್ಕೆ ಹೋದ ಒಡಿಸ್ಸಿ ಮತ್ತೇ ಊರು ಸೇರುವಾಗ ದಾರಿಯಲ್ಲಿ ನಾನಾ ಕಷ್ಟಗಳಿಗೆ ಗುರಿಯಾಗಿ ಅಲೆಯುವ ಕಥೆಯೇ ಒಡಿಸ್ಸಿಯಾಗಿದೆ.

**ಭಾರತೀಯ ಸಾಹಿತ್ಯ**

**೧. ಗೋದಾನ–ಪ್ರೇಮಚಂದ್**

ಹಿಂದಿ ಕಾದಂಬರಿಯಾದ ಈ ಕೃತಿಯನ್ನು ಕನ್ನಡಕ್ಕೆ ಜಾನಕಿಯವರು ಅನುವಾದಿಸಿದ್ದಾರೆ. ೧೯ರ ದಶಕದಲ್ಲಿನ ರೈತರ ಸಮಸ್ಯೆಗಳನ್ನು ಮುಖ್ಯವಾಗಿರಿಸಿಕೊಂಡು ರಚನೆಯಾದ ಕಾದಂಬರಿ ಯಾಗಿದೆ. ಈ ಕತೆಯ ನಾಯಕ ಹೋರಿ ಕೆಳಜಾತಿಯಲ್ಲಿ ಹುಟ್ಟಿ ಜಮೀನ್ದಾರರ ಕೈಯಲ್ಲಿ ಪರದಾಡುವ ಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ. 'ಹೋರಿ' ಜಮೀನ್ದಾರರ ಹತ್ತಿರ ಗೇಣಿ ಮಾಡಿ ವ್ಯವಸಾಯ ಮಾಡುತ್ತಿದ್ದ ಜೊತೆಗೆ ಜಮೀನ್ದಾರರನ್ನು ಕಂಡರೆ ಅಂಜುವ ವ್ಯಕ್ತಿ ಏಕೆಂದರೆ ಎಲ್ಲಿ ತನ್ನ ಹೊಲವನ್ನು ಕಳೆದುಕೊಳ್ಳುತ್ತೇನೋ ಎನ್ನುವ ಭೀತಿ ಅವನದಾಗಿತ್ತು. ಹಾಗಾಗಿ ಮಾಲೀಕನ ಹತ್ತಿರ ಹೋಗುವುದು ರೂಢಿಯಾಗಿತ್ತು. ಹೋರಿಗೆ ಎಷ್ಟೇ ಬಡತನವಿದ್ದರೂ ಒಂದು ಹಸುವನ್ನು ಸಾಕಬೇಕೆಂಬ ಆಸೆ. ಆದರೆ. ಹೆಂಡತಿ ಧನಿಯಾ ಮತ್ರ ಸ್ವಲ್ಪ ಗಟ್ಟಿಗಳಾಗಿದ್ದಳು. ನಾವು ಜಮೀನನ್ನು ಹೂಳುತ್ತೇವೆ. ಅದಕ್ಕೆ ಬದಲಾಗಿ ಅವನು ತನ್ನ ಗೇಣಿ ವಸೂಲು ಮಾಡುತ್ತಾನೆ ಅಷ್ಟೇ. ಅದಕ್ಕೆ ನಾವೇಕೆ ಮಾಲಿಕನ ಹಿಂದೆ ಮುಂದೆ ತಿರುಗಬೇಕು ಎನ್ನುವ ಸ್ವಭಾವದವಳು.

ಮಗ ಗೋಬರನದು ಮತ್ತೊಂದು ರೀತಿಯ ಸ್ವಭಾವ. ವ್ಯವಸ್ಥೆಯ ವಿರುದ್ಧ ಅನ್ಯಾಯದ ವಿರುದ್ಧ ಧ್ವನಿ ಎತ್ತುವ ನಿಲುವು ಅವನದಾಗಿತ್ತು. ಹಾಗಾಗಿ ತಾನು ಪ್ರೀತಿಸಿದ ಕ್ರಿಶ್ಚಿಯನ್ ಹುಡುಗಿಯೊಂದಿಗೆ ಸಂಬಂಧ ಹೊಂದಿ ಅವಳು ಗರ್ಭಿಣಿಯಾದಾಗ ತಂದೆ ತಾಯಿಗೆ ಹೆದರಿ ಮನೆ ಬಿಟ್ಟು ಲಖನೌಕ್ಕೆ ಓಡಿ ಹೋಗುತ್ತಾನೆ. ಬೇರೆ ಜಾತಿಯ ಹುಡುಗಿಯನ್ನು ಮನೆಯಲ್ಲಿರಿಸಿಕೊಂಡ ಅಪರಾಧಕ್ಕೆ ಹೋರಿಗೆ ಬಹಿಷ್ಕಾರ ಹಾಕುತ್ತಾರೆ. ಗೋಬರ ತಂದೆ, ತಾಯಿ, ಹೆಂಡತಿಯನ್ನು ಬಿಟ್ಟು ನಗರಕ್ಕೆ ಹೋಗಿ ಒಂದು ವರ್ಷಗಳ ಕಾಲ ಅಲ್ಲಿ ದುಡಿದು ಅಲ್ಲಿಯ ರೀತಿನೀತಿಗಳನ್ನು

ತಿಳಿದು ಮತ್ತೆ ತನ್ನ ಊರಿಗೆ ಬಂದು ಹೆಂಡತಿ ಜುನಿಯಾಳನ್ನು ಕರೆದುಕೊಂಡು ಹೋಗುತ್ತಾನೆ. ಆದರೆ, ಈಗ ನಗರದಲ್ಲಿ ಬದುಕಲು ಅವನಿಗೆ ಕಷ್ಟವಾಗುತ್ತದೆ. ಸಂಸಾರ ನಿಭಾಯಿಸಲು ತೊಂದರೆಯಾಗಿ ಕೆಟ್ಟ ಚಟಗಳಿಗೆ ಬಲಿಯಾಗುತ್ತಾನೆ. ಹೀಗೆ ಹಳ್ಳಿಯಲ್ಲಿನ ಭೂ ಮಾಲಿಕರ ಅನ್ಯಾಯಗಳಿಗೆ ಒಳಗಾಗುವ ಜಾತಿ ಧರ್ಮಗಳಿಗೆ ಹೆದರಿ ನಗರಕ್ಕೆ ಬಂದ ಗೋಬರನ ಜೀವನ ಕತೆ ಅನೇಕ ತಿರುವುಗಳನ್ನು ಪಡೆದುಕೊಳ್ಳುತ್ತದೆ.

**೨. ವಿಷಕನ್ನಿಕೆ–ಎಸ್.ಕೆ.ಪೊಟ್ಟೆಕಾಟ್**

ಮಲೆಯಾಳಂ ಸಾಹಿತ್ಯದಲ್ಲಿ ಬಂದ ಈ ಕಾದಂಬರಿಯನ್ನು ಕನ್ನಡಕ್ಕೆ ಶ್ರೀ ಕೃಷ್ಣಭಟ್ ರವರು ಅನುವಾದ ಮಾಡಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ತಿರುವನಂತಪುರ ಪ್ರದೇಶದಲ್ಲಿನ ಹಲವು ಬಡಪಾಯಿ ಕ್ರೈಸ್ತ ಕೃಷಿಕರು ತಮ್ಮ ಊರಿನ ಸ್ವಂತ ಸ್ವತ್ತನೆಲ್ಲಾ ಮಾರಿ ಗಂಟು ಮೂಟೆ ಕಟ್ಟಿಕೊಂಡು ಉತ್ತರ ಪ್ರದೇಶದ ಮಲಬಾರಿನ ನಾಯನಾಡ್‌ಗೆ ವಲಸೆ ಬರುತ್ತಾರೆ. ಇಲ್ಲಿ ಬೆಟ್ಟವನ್ನು ಕಡಿದು ಸಮತೋಲನಗೊಳಿಸಿ ಹಲವು ತಟ್ಟುಗಳನ್ನಾಗಿ ಮಾಡಿ ವ್ಯವಸಾಯ ಮಾಡುತ್ತಾರೆ. ಜೊತೆಗೆ ಕಾಡುಮೃಗಗಳು, ಮಲೇರಿಯಾಂತಹ ಮಾರಕ ಜ್ವರವೂ ಕೊರೆಯುವ ಚಳಿಯು ಎಲ್ಲವೂ ಒಂದುಗೂಡಿ ಅಲ್ಲಿಯ ಜನರನ್ನು ಒಬ್ಬರ ನಂತರ ಒಬ್ಬರಂತೆ ಬಲಿತೆಗೆದುಕೊಳ್ಳುತ್ತದೆ. ಬದುಕು ವುದಕ್ಕಾಗಿ ವಲಸೆ ಬಂದ ಕುಟುಂಬಗಳು ಪ್ರಕೃತಿಯ ವಿಕೋಪಕ್ಕೆ ಬಲಿಯಾಗುತ್ತವೆ. ಕೊನೆಗೆ ಮನುಷ್ಯರನ್ನು ಕಾಪಾಡುವ ಪ್ರಕೃತಿಯೇ, ಶಾಪವಾದುದರ ಪರಿಣಾಮವನ್ನು ಈ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಬದುಕಿನ ಸ್ಥಿತ್ಯಂತರದ ಘಟ್ಟದಲ್ಲಿ ಹೊಸ ಪ್ರಾಕೃತಿಕ ಪರಿಸರವು ಮನುಷ್ಯನಿಗೆ ಎಲ್ಲ ರೀತಿಯಿಂದಲೂ ಅನುಕೂಲವಾಗಿರುತ್ತದೆ ಎಂದು ಹೇಳಲಾಗದು. ಹಾಗಾಗಿ ವಲಸೆ ಬಂದ ಕುಟುಂಬಗಳು ಅನೇಕ ಬಗೆಯ ಸಮಸ್ಯೆಗಳಿಗೆ ಗುರಿಯಾಗಿ ಸಾವು–ನೋವುಗಳಿಗೆ ಬಲಿಯಾಗುವ ಸಂಗತಿಯೇ ವಿಷಕನ್ನಿಕೆಯಾಗಿದೆ.

**೩. ಅಡವಿ–ವಸಂತರಾವ್ ದೇಶಪಾಂಡೆ**

ಈ ಕಾದಂಬರಿಯನ್ನು ತೆಲುಗಿನಿಂದ ಕನ್ನಡಕ್ಕೆ ಆರ್.ಕೃಷ್ಣಪ್ಪನವರು ಅನುವಾದಿಸಿದ ಕಾದಂಬರಿಯಾಗಿದೆ. ವ್ಯಾಪಾರಕ್ಕೆಂದು ಬಂದಂತಹ ಮಾರಾವಾಡಿಗಳು ಕಾಡಿನಲ್ಲಿ ಬದುಕುತ್ತಿದ್ದ ಗಿರಿಜನರ ಮೇಲೆ ನಡೆಸಿದ ದಬ್ಬಾಳಿಕೆಯನ್ನು ಕುರಿತಂತೆ ಈ ಕಾದಂಬರಿ ಚಿತ್ರಿತವಾಗಿದೆ.

ಈ ಕತೆಯ ಆರಂಭದಲ್ಲಿ ರಾಘವ ಎನ್ನುವ ವ್ಯಕ್ತಿ ತನ್ನ ಸಂಬಂಧಿಕರನ್ನು ಹುಡುಕಿ ಕೊಂಡು ಇಂದ್ರಪಲ್ಲಿಗೆ ವ್ಯಾಪಾರ ಮಾಡಲು ವಲಸೆ ಬರುತ್ತಾನೆ. ಹೀಗೆ ವ್ಯಾಪಾರ ಮಾಡಲು ಬಂದು ಜನರಿಗೆ ಅವಶ್ಯಕವಾದ ವಸ್ತುಗಳನ್ನು ಮಾರುವುದನ್ನು ಬಿಟ್ಟು ಅನಾವಶ್ಯಕವಾದ ವಸ್ತುಗಳನ್ನು ಮಾರಿ ಕಾಡಿನ ಜನರ ಮೇಲೆ ದಬ್ಬಾಳಿಕೆ ನಡೆಸುತ್ತಾರೆ. ಇರಲು ನೆಲೆಕೊಟ್ಟ ಕಾಡಿನ ಜನರ

ಮೇಲೆ ಕೊಲೆ, ಸುಲಿಗೆ, ಅತ್ಯಾಚಾರವೆಸಗುತ್ತಾರೆ. ವ್ಯಾಪಾರಿಗಳು ಗಿರಿಜನರನ್ನು ಮೋಸಗೊಳಿಸಿ ಜಮೀನುಗಳನ್ನು ತಮ್ಮ ಹೆಸರಿಗೆ ಮಾಡಿಕೊಳ್ಳುತ್ತಾರೆ. ಹೀಗೆ ಕಾಡಿನ ಜನರನ್ನು, ವ್ಯಾಪಾರಕ್ಕೆಂದು ಗಂಟುಮೂಟೆ ಸಮೇತ ಬಂದ ವ್ಯಾಪಾರಿಗಳು ನಡೆಸುವ ದಬ್ಬಾಳಿಕೆ ಮೋಸ ವಂಚನೆ ಕುರಿತಂತೆ ಈ ಕಾದಂಬರಿಯಲ್ಲಿ ನೋಡಬಹುದು.

**೪. ಲಜ್ಜಾ–ತಸ್ಲೀಮಾ ನಸ್ರೀನ್**

ಹಿಂದಿ ಮೂಲವಾದ ಈ ಕಾದಂಬರಿಯನ್ನು ರಾಮಣ್ಣ ಆರ್ಥೆಜ್ಜೆ  ರವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕೃತಿಯಲ್ಲಿ ಪ್ರಮುಖವಾಗಿ ಚರ್ಚಿಸುವ ವಿಷಯವೆಂದರೆ, ಅಯೋಧ್ಯೆಯಲ್ಲಿದ್ದ ಬಾಬರ್ ಮಸೀದಿಯನ್ನು ಹಿಂದೂಗಳು ಹೊಡೆದರು ಎಂಬ ಕಾರಣಕ್ಕಾಗಿ ಬಾಂಗ್ಲಾದಲ್ಲಿದ್ದ ಮುಸ್ಲೀಮರು ಬಾಂಗ್ಲಾದಲ್ಲಿದ್ದ ಹಿಂದೂಗಳನ್ನು ಹತ್ಯೆಗೈಯುವುದು, ಮಹಿಳೆಯರ ಮೇಲಿನ ಆತ್ಯಾಚಾರವೆಸುಗುವಂತಹ ಕ್ರೂರ ಕೃತ್ಯಗಳನ್ನು ನಡೆಸುತ್ತಾರೆ. ಇದರಿಂದಾಗಿ ಬಾಂಗ್ಲಾದಲ್ಲಿದ್ದ ಲಕ್ಷಾಂತರ ಜನ ಭಾರತೀಯರು ನಿರಾಶ್ರಿತರಾಗಿ ಭಾರತ ದೇಶಕ್ಕೆ ವಲಸೆ ಬಂದುದರ ಜನರ ಯಾತನೆಯನ್ನು ಈ ಕತೆಯಲ್ಲಿ ನೋಡಬಹುದು

**೫. ಉಚಲ್ಯಾ–ಲಕ್ಷಣ ಗಾಯಕವಾಡ**

ಇದು ಮೂಲ ಮರಾಠಿ ಕೃತಿಯಾಗಿದ್ದು ಕನ್ನಡಕ್ಕೆ ಚಂದ್ರಕಾಂತ ಪೋಕಳೆ ಅವರು ಅನುವಾದ ಮಾಡಿದ್ದಾರೆ. ಜಂಗಮ ಜಾತಿಯ ಅಲೆಮಾರಿ ಜನಾಂಗಕ್ಕೆ ಸೇರಿದ ಇವರು ಕಳ್ಳತನವೇ ಮುಖ್ಯ ಕಸಬುನ್ನಾಗಿ ಮಾಡಿಕೊಂಡು ಹಸಿವು, ನಿರುದ್ಯೋಗ ದಾರಿದ್ರ್ಯದಿಂದ ಕಳ್ಳತನ ಮಾಡುತ್ತಾ ಅಲೆಮಾರಿಯಾಗಿ ಅಲೆಯುತ್ತಿದ್ದರು. ಈ ಅಲೆಮಾರಿ ಬದುಕಿನ ನಡುವೆ ನಡೆಯುವ ಸಾಂಸ್ಕೃತಿಕ ಬದುಕು ಈ ಜನಾಂಗದ ಮೇಲಾದ ಅನ್ಯಾಯ ಕಳ್ಳತನದ ಆರೋಪದ ಮೇಲೆ ದಾಳಿ ಮಾಡಿದ ಪೊಲೀಸರ ಕ್ರೂರ ವರ್ತನೆಯನ್ನು ಈ ಕೃತಿಯಲ್ಲಿ ನೋಡಬಹುದು.

ಅನ್ಯಾಯದಿಂದ ಕೋಟ್ಯಾಂತರ ರೂಪಾಯಿಗಳನ್ನು ಕಳ್ಳತನ ಮಾಡುವ ಲಂಚ ಪಡೆಯುವ ಅಧಿಕಾರಿಗಳ ಮುಂದೆ ದಿನಕ್ಕೆ ಹತ್ತು ಇಪ್ಪತ್ತು ರೂಪಾಯಿ ಕಳ್ಳತನವೇ ದೊಡ್ಡದೆಂದು ಶಿಕ್ಷೆ ಕೊಡುವ ಸಮಾಜದ ವಿರುದ್ಧ ಧ್ವನಿ ಎತ್ತಿದ್ದಾರೆ. ಹೀಗೆ ಅಲೆಮಾರಿ ಜೀವನದಲ್ಲಿ ಹಲವಾರು ಸಮಸ್ಯೆಗಳನ್ನು ಹೆದರಿಸುತ್ತಾ ಬದುಕಿದ ಲೇಖಕರ ಬದುಕಿನ ಚಿತ್ರಣವಾಗಿದೆ.

**ಕನ್ನಡ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಸಾಹಿತ್ಯದಿಂದ ಇಂದಿನವರೆಗೂ ಅಂದರೆ ಕಾವ್ಯಗಳಲ್ಲಿ, ನಾಟಕಗಳಲ್ಲಿ, ಕತೆ, ಕಾದಂಬರಿಗಳಲ್ಲಿ ಅಲಲ್ಲಿ ಕಾಣಿಸಿಕೊಳ್ಳುವ ವಲಸೆ ಕುರಿತಂತೆ ಅಭಿವ್ಯಕ್ತಿಸಿದ ರೀತಿಯನ್ನು ನೋಡುವುದಾದರೆ  ಮೊದಲಿಗೆ ಪ್ರಾಚೀನ ಕಾವ್ಯಗಳಲ್ಲಿ

೧. ವಡ್ಡಾರಾಧನೆ–ಶಿವಕೋಟ್ಯಾಚಾರ್ಯರ

ಕ್ರಿ.ಶ. ೪೫೦ರಲ್ಲಿ ರಚನೆಯಾದಂತಹ ಶಿವಕೋಟ್ಯಾಚಾರ್ಯರ ವಡ್ಡಾರಾಧನೆಯ ೧೯ ಕತೆಗಳಲ್ಲಿ ಒಂದಾದ ಸುಕುಮಾರಸ್ವಾಮಿಯ ಕತೆಯಲ್ಲಿ ಅಗ್ನಿಭೂತಿ–ವಾಯುಭೂತಿಯ ಬದುಕಿನ ಹುಡುಕಾಟವನ್ನು ನೋಡಬಹುದು. ಸೂರ್ಯಮಿತ್ರನ ತಂಗಿಯಾದ ಕೌಶ್ಯಪಿಯು ತನ್ನ ಮಕ್ಕಳಾದ ಅಗ್ನಿಭೂತಿ–ವಾಯುಭೂತಿಯನ್ನು ಶಿಕ್ಷಣ ಕಲಿಯಲೆಂದು ತನ್ನ ಅಣ್ಣನ ಅರಮನೆಗೆ ಕಳುಹಿಸುತ್ತಾಳೆ. ಆದರೆ, ತನ್ನ ಅಣ್ಣ ಎಂದು ಹೇಳುವುದನ್ನು ಮುಚ್ಚಿಟ್ಟ ಕಾರಣಕ್ಕಾಗಿ ವಾಯುಭೂತಿ ತಾಯಿಯ ಮೇಲೆ ಸಿಟ್ಟಾಗಿ ಗರ್ವದಿಂದ ತನ್ನ ಅಣ್ಣನಾದ ಅಗ್ನಿಭೂತಿಯನ್ನು ನಿಂದಿಸಿದ ಕಾರಣಕ್ಕೆ ಕುಷ್ಟರೋಗಕ್ಕೆ ತುತ್ತಾಗಿ ಸತ್ತು ಹೋಗುತ್ತಾನೆ. ಹೀಗೆ ಶಿಕ್ಷಣ ಕಲಿಯಲೆಂದು ಹೋಗುವ ಅಗ್ನಿಭೂತಿ ವಾಯು ಭೂತಿಯು ತನ್ನ ರಾಜ್ಯದ ಮತ್ತೊಂದು ರಾಜ್ಯಕ್ಕೆ ಹೊರಡುವ ಈ ಚಲನೆ ವಡ್ಡಾರಾಧನೆಯ ಕತೆಯಲ್ಲಿ ಕಾಣಬಹುದು.

೨. ಬಸವಪುರಾಣ–ಭೀಮಕವಿ

ಈ ಕಾವ್ಯದಲ್ಲಿ ಬಸವಣ್ಣ ಜೀವನದ ಅಲೆಯುವಿಕೆಯನ್ನು ಕಾಣಬಹುದು. ಬಸವಣ್ಣನಿಗೆ ಎಂಟು ವರ್ಷಗಳಾಗಿದ್ದಾಗ ತಂದೆ ಮಾದರಸ ಮಗುವಿಗೆ ಉಪನಯನವನ್ನು ಮಾಡಲು ಹೊರಟಾಗ, ಬಸವಣ್ಣ ತಂದೆಯನ್ನೆ ಆಕ್ಷೇಪಿಸಿ "ಶಿವಭಕ್ತನಾದವನಿಗೆ ಮುಂಜಿಯೆನ್ನುವುದು ಅಸಹ್ಯವಾದ ಕಾರಣ ಅದನ್ನು ಹೇಳಬೇಡ"(ವಿದ್ಯಾಶಂಕರ್,ಎಸ್. ೨೦೦೪, ಮುನ್ನುಡಿ.) ಎಂದು ಮುಂಜಿಯನ್ನು ಧಿಕ್ಕರಿಸಿ ತಂದೆಯೊಂದಿಗೆ ಜಗಳವಾಡಿ ಇನ್ನು ಮುಂದೆ ನನಗೂ ನಿನಗೂ ಸಂಬಂಧವಿಲ್ಲವೆಂದು ಸಹೋದರಿ ನಾಗಲಾಂಬಿಕೆಯೊಡನೆ ಮನೆಬಿಟ್ಟು ಬಾಗೇವಾಡಿಗೆ ಬರುತ್ತಾನೆ. ನಂತರ ಕೂಡಲಸಂಗಮಕ್ಕೆ ಬಂದು ಗಂಗಾಂಬಿಕೆ ಮತ್ತು ನೀಲಾಂಬಿಕೆಯನ್ನು ಮದುವೆಯಾಗಿ ಅವರ ಜೊತೆ ಕಪ್ಪಡಿಸಂಗಮಕ್ಕೆ ಬರುತ್ತಾನೆ. ಕಲ್ಯಾಣದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿ ಸ್ವಲ್ಪ ದಿನಗಳವರೆಗೆ ಇದ್ದು ಅಲ್ಲಿ ಅಧಿಕಾರ ದುರುಪಯೋಗದ ಆಪಾದನೆಗೆ ಒಳಗಾಗಿ ಕಲ್ಯಾಣವನ್ನು ತ್ಯಜಿಸಿ ಸಂಗಮಕ್ಕೆ ನಡೆಯುತ್ತಾನೆ. ಕೊನೆಗೆ ಕೂಡಲಸಂಗಮದಲ್ಲಿ ಐಕ್ಯವಾದ ಎಂಬ ವಿವರವನ್ನು ಬಸವಪುರಾಣದಲ್ಲಿ ನೋಡಬಹುದು. ಹೀಗೆ ಬಸವಣ್ಣ ಹುಟ್ಟೂರನ್ನು ಬಿಟ್ಟು ನಾನಾ ಕಾರಣಗಳಿಂದ ನಾನಾಕಡೆ ಅಲೆದು ಐಕ್ಯನಾಗುವ ಕುರಿತಂತೆ ಭೀಮಕವಿಯು ಅಭಿವ್ಯಕ್ತಿಸಿದ್ದಾರೆ.

೩. ಕುಮಾರವ್ಯಾಸ ಭಾರತ–ಕುಮಾರವ್ಯಾಸ

೧೬ನೇ ಶತಮಾನದಲ್ಲಿ ರಚನೆಯಾದ ಕುಮಾರವ್ಯಾಸನ 'ಕುಮಾರವ್ಯಾಸ ಭಾರತ' ಕಾವ್ಯದಲ್ಲಿನ ಮೊದಲ ಹತ್ತು ಪರ್ವಗಳಲ್ಲಿ ಒಂದಾದ ವಿರಾಟ ಪರ್ವದಲ್ಲಿ ಪಾಂಡವರ ಅಜ್ಞಾತವಾಸವನ್ನು

ನೋಡಬಹುದು. ಕೌರವರ ಮೋಸದಿಂದ ಜೂಜಿನಲ್ಲಿ ಸೋತು ರಾಜ್ಯವನ್ನು ಬಿಟ್ಟು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತ ವಾಸ ಕಳೆದ ಪಾಂಡವರ ಬದುಕಿನ ಚಿತ್ರಣವನ್ನು ನೋಡಬಹುದು. ಐದು ಜನ ಪಾಂಡವರು ಹೆಂಡತಿ ದ್ರೌಪದಿಯೊಂದಿಗೆ ಇಂದ್ರಪ್ರಸ್ಥವನ್ನು ಬಿಟ್ಟು ಕಾಡಿನಲ್ಲಿ ಅಲೆಯುತ್ತಾರೆ. ಒಂದು ವರ್ಷದ ಅಜ್ಞಾತವಾಸಕ್ಕೆ ಕೀಚಕನ ಬಲದಿಂದ ರಾಜ್ಯವಾಳುತ್ತಿದ್ದ ವಿರಾಟನಗರ ತಮಗೆ ಸುರಕ್ಷಿತ ಜಾಗವೆಂದು ತಿಳಿದು ವಿರಾಟ ನಗರಕ್ಕೆ ಹೊರಡುತ್ತಾರೆ. ಧರ್ಮರಾಯನು ಪಂಡಿತನ ವೇಷದಲ್ಲಿ ಕಂಕಭಟ್ಟನಾಗಿ, ವಿರಾಟನ ಹತ್ತಿರ ಬಂದು ನಾವು ಈ ಮೊದಲು ಪಾಂಡವರ ಹತ್ತಿರ ಸೇವೆ ಮಾಡುತ್ತಿದ್ದು ಅವರು ಈಗ ವನವಾಸಕ್ಕೆ ಹೋದ ಮೇಲೆ ಅನಾಥರಾಗಿದೇವೆ ಎಂದು ಸುಳ್ಳು ಹೇಳಿ ಆಶ್ರಯ ಪಡೆದುಕೊಳ್ಳುತ್ತಾರೆ. ವಿರಾಟನಗರದಲ್ಲಿ ಭೀಮ ವಲಲ ಎಂಬ ಹೆಸರಿನಿಂದ ಅಡುಗೆ ಭಟ್ಟನಾಗಿ, ಅರ್ಜುನ ಬೃಹನ್ನಳೆಯಾಗಿ ನಕುಲ ಸಹದೇವರು ಗೋಪಾಲಕರಾಗಿ ಮತ್ತು ದ್ರೌಪದಿ ಸೈರಂಧ್ರಿಯಾಗಿ ಅರಮನೆಯಲ್ಲಿ ಹತ್ತು ತಿಂಗಳು ಕಾಲ ಜೀವನ ನಡೆಸಿದುದರ ಕುರಿತು ನೋಡಬಹುದು.

**೪. ಹರಿಶ್ಚಂದ್ರ ಕಾವ್ಯ–ರಾಘವಾಂಕ**

೧೩ನೇ ಶತಮಾನದಲ್ಲಿ ರಾಘವಾಂಕ ಬರೆದ ಹರಿಶ್ಚಂದ್ರ ಕಾವ್ಯದಲ್ಲಿ ವಶಿಷ್ಠಮುನಿ ಮತ್ತು ವಿಶ್ವಾಮಿತ್ರನು ನಡೆಸಿದ ವಾಗ್ವಾದದಲ್ಲಿ ವಿಶ್ವಾಮಿತ್ರ ಹರಿಶ್ಚಂದ್ರನನ್ನು ಸುಳ್ಳುಗಾರನನ್ನಾಗಿಸಬೇಕೆಂದು ಅನೇಕ ಬಗೆಯ ಪರೀಕ್ಷೆಗೆ ಒಳಪಡಿಸುತ್ತಾನೆ. ಆಯೋಧ್ಯೆ ನಗರವನ್ನು ಆಳುತ್ತಿದ್ದ ಹರಿಶ್ಚಂದ್ರನಿಗೆ ವಿಶ್ವಾಮಿತ್ರನ ಕೈ ಚಳಕದಿಂದ ಕಾಡಿನಲ್ಲಿ ಪ್ರಾಣಿ ಪಕ್ಷಿಗಳ ಹಾಹಾಕಾರವನ್ನು ಎಬ್ಬಿಸಿ ಹರಿಶ್ಚಂದ್ರ ಆ ಪ್ರಾಣಿಗಳನ್ನು ಕೊಲ್ಲುವಂತೆ ಮಾಡಿ ಕೊನೆಗೆ ಅರಣ್ಯವನ್ನು ನಾಶಪಡಿಸಿದ ಅಪಾದನೆಯನ್ನು ಹೊರಿಸಿ ತಾನು ಸೃಷ್ಟಿಸಿದ ಹೊಲತಿಯರನ್ನು ಮದುವೆಯಾಗು ಎಂದು ಪೀಡಿಸುತ್ತಾನೆ. ಇದಕ್ಕೆ ಒಪ್ಪದಿದ್ದಾಗ ಹರಿಶ್ಚಂದ್ರನ ರಾಜ್ಯವನ್ನೆಲ್ಲ ಕಸಿದುಕೊಂಡು ಇನ್ನು ಸಾಲಗಾರನಾಗಿ ಮಾಡಿ ರಾಜ್ಯದಿಂದ ಹೊರ ನೂಕುತ್ತಾನೆ.

ವಿಶ್ವಾಮಿತ್ರನ ಆಜ್ಞೆಯಂತೆ ಹರಿಶ್ಚಂದ್ರನು ಹೆಂಡತಿ ಮಗನೊಂದಿಗೆ ಮತ್ತು ಸಾಲ ವಸೂಲಿಗೆಂದು ನಕ್ಷತ್ರಿಕನೊಂದಿಗೆ ಕಾಶಿಯ ಕಡೆ ಕಾಲುನಡಿಗೆಯಲ್ಲಿ ಅಲೆಯುತ್ತಾ ಕೊನೆಗೆ ವಿಶ್ವಾಮಿತ್ರ ಕೊಟ್ಟ ಹಣ ವಸುಲಿಯ ಗಡುವ ಮುಗಿಯುವ ಹೊತ್ತಿಗೆ ಹೆಂಡತಿ ಮಗನನ್ನು ಮಾರಿ ಕೊನೆಗೆ ತನ್ನನ್ನು ಮಾರಿಕೊಂಡು ಹಣವನ್ನು ಹಿಂತಿರುಗಿಸುತ್ತಾನೆ. ಹೀಗೆ ಹರಿಶ್ಚಂದ್ರ ರಾಜನಾಗಿದ್ದರೂ ಸತ್ಯದ ಪರಿಪಾಲನೆಗೆ ಬಂದ ಕಷ್ಟಗಳನ್ನು ಸಹಿಸಿಕೊಳ್ಳುತ್ತಾ ಸುಳ್ಳುಗಾರನಾಗದೆ ಅಲೆಯುತ್ತಾ ಬದುಕಿದ ರೀತಿಯನ್ನು ಈ ಕಾವ್ಯದಲ್ಲಿ ನೋಡಬಹುದು.

## ಆಧುನಿಕ ಸಾಹಿತ್ಯ

### ನಾಟಕ

### ೧. ತುಘಲಕ್–ಗಿರೀಶ ಕಾರ್ನಾಡ

ಈ ನಾಟಕದಲ್ಲಿ ದೆಹಲಿಯಲ್ಲಿ ಸುಲ್ತಾನನಾಗಿದ್ದ ಮಹಮ್ಮದ ತುಘಲಕ್ ರಾಜ್ಯದ ಪ್ರಗತಿಗಾಗಿ ಹಿಂದೂ ಮುಸ್ಲಿಂರ ಸಮಾನತೆಗಾಗಿ ದಿಲ್ಲಿಯಿಂದ ದೌಲತ್ತಾಬಾದಿಗೆ ತನ್ನ ರಾಜಧಾನಿಯನ್ನು ವರ್ಗಾವಣೆ ಮಾಡಿದ. ಏಕೆಂದರೆ ದೌಲತ್ತಾಬಾದ್ ಮುಖ್ಯವಾಗಿ ಹಿಂದೂ ಜನರ ನಗರವಾಗಿದ್ದರಿಂದ ಹಿಂದೂ ಮುಸ್ಲಿಂ ರಲ್ಲಿ ಮೈತ್ರಿ ಬೆಳೆಸಬೇಕೆನ್ನುವ ಕಾರಣಕ್ಕಾಗಿ ಇಡೀ ರಾಜಧಾನಿಯ ಜನರನ್ನೇ ವರ್ಗಾವಣೆ ಮಾಡಿಸಿದ. ಇಂತಹ ಸಮಯದಲ್ಲಿ ಜನಸಾಮಾನ್ಯರಿಗೆ ಕಾಲುನಡಿಗೆಯಲ್ಲಿ ದೌಲತ್‌ನ್ನು ತಲುಪುವಾಗ ಅವರಿಗೆ ಉಂಟಾದ ಸಮಸ್ಯೆಗಳು ಅನೇಕ ಬಗೆಯಲ್ಲಿದ್ದವು. ಸುಲ್ತಾನರ ಈ ನಿರ್ಧಾರಕ್ಕೆ ಕಂಗೆಟ್ಟ ಜನ ದೌಲತ್ತಬಾದಿಗೆ ಹೋಗಲಾರದೆ ಎದೆ ಬಡಿದು ಅಳುತ್ತಿದ್ದರು. ಒಂದು ವೇಳೆ ದೌಲತ್ತಾಬಾದಗೆ ಬರದೆ ಬೇರೆಡೆ ಹೋಗಲೆತ್ನಿಸಿದವರಿಗೆ ಕಠಿಣ ಶಿಕ್ಷೆಯಾದಿತು ಎಂಬ ಆಜ್ಞೆಯನ್ನು ಹೊರಡಿಸಿದ್ದ ದೌಲತ್‌ಬಾದಿಗೆ ಹೋಗುವ ಪ್ರಜೆಗಳ ಅನುಕೂಲಕ್ಕಾಗಿ ದಾರಿಯಲ್ಲಿ ಔಷಧಾಲಯಗಳನ್ನು, ಅನ್ನಛತ್ರಗಳು, ಉಡುಪಿನ ವ್ಯವಸ್ಥೆಯನ್ನು ಮಾಡಿದ್ದ. ಆದರೆ ದಾರಿಯಲ್ಲಿ ನಡೆದು ನಡೆದು ಎಷ್ಟೋ ಜನ ಸತ್ತು ಹೋಗಿದ್ದರು. ಹೀಗೆ ಹುಚ್ಚ ಸುಲ್ತಾನನ ರಾಜಧಾನಿ ಬದಲಾವಣೆಯ ನಿರ್ಧಾರಕ್ಕೆ ರಾಜ್ಯದ ಜನಸಾಮಾನ್ಯರು ಬಲಿಯಾಗಿದ್ದರು.

### ೨. ಅಂಜು ಮಲ್ಲಿಗೆ–ಗಿರೀಶ ಕರ್ನಾಡರ

ಅಂಜು ಮಲ್ಲಿಗೆ ಈ ನಾಟಕದಲ್ಲಿ ಸತೀಶ ಮತ್ತು ಮಕ್ಕಳಾದ ಯಾಮಿನಿ ಬೆಂಗಳೂರಿನಿಂದ ಇಂಗ್ಲೆಂಡಿಗೆ ವಲಸೆ ಬಂದಿರುತ್ತಾರೆ. ಸತೀಶ ಉದ್ಯೋಗಕ್ಕಾಗಿ ಬಂದರೇ ಯಾಮಿನಿ ಪೇಂಟಿಂಗ್ ಕಲಿಯುವ ಆಸೆಯಿಂದ ಬಂದವಳು. ಈ ಮೊದಲೇ ಇಂಗ್ಲೆಂಡಿಗೆ ಬಂದ ಭಾರತದವನೆ ಆದ ಗೌತಮ ಸಹ ಇವರ ಸ್ನೇಹಿತನಾಗಿರುತ್ತಾನೆ. ಗೌತಮನ ಪ್ರಕಾರ "ಇಂಡಿಯಾ ಅಂದರೆ ಬ್ಯೂರಾಕ್ರಸಿ ಮತ್ತು ಕಂದಾಚಾರದ ಜಾಲ. ಅದರಲ್ಲಿ ಒಮ್ಮೆ ಸಿಕ್ಕಿಹಾಕಿಕೊಂಡರೆ ಬಿಡುಗಡನೇ ಇಲ್ಲ. ಅಲ್ಲದೇ ನೆಹರೂನ ಇಂಡಿಯಾಕ್ಕೆ ಬೇಕಾಗಿರುವುದು ಇಂಜನಿಯರ್ಸ್–ಮೆಕ್ಯಾನಿಕ್ಸ್ ನಿನ್ನಂಥ ಶುದ್ಧ ವಿಜ್ಞಾನಿಗಳು ಬರೇ ವಿಚಾರ ಮಾಡಲಿಕೆ, ಸಂಬಳ ಕೊಳ್ಳುವುದಕ್ಕೆ ಬೇಕಾಗಿಲ್ಲ"(ಗಿರೀಶ ಕರ್ನಾಡ, ೨೦೦೭, ಪು.೨೨೪) ಎನ್ನುವುದು ಅವನ ವಿಚಾರವಾಗಿರುತ್ತದೆ. ಆದರೆ ಕತೆಯ ಕೊನೆ ಕೊನೆಗೆ ಗೌತಮ ಯಾಮಿನಿಯನ್ನು ಮದುವೆಯಾಗುವುದರಲ್ಲಿ ಸೋತು ತಿರುಗಿ ಇಂಡಿಯಾಕ್ಕೆ ವಾಪಸುಗುತ್ತಾನೆ. ಯಾಮಿನಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸತೀಶ ಮಾತ್ರ ಪ್ರೇಯಸಿ ಜೂಲಿಯೊಂದಿಗೆ ಇಂಗ್ಲೆಂಡಿನಲ್ಲಿಯೇ ಬದುಕುತ್ತಾನೆ.

**ಪ್ರವಾಸ ಸಾಹಿತ್ಯ**

**೧. ಅಂಡಮಾನ ಕನಸು-ರಹಮತ್ ತರೀಕೆರೆ**

ಈ ಪ್ರವಾಸ ಕಥನದಲ್ಲಿ ಭೂಮಾಲಿಕರ ವಿರುದ್ದ ಮಲಬಾರಿನ ಗೇಣಿ ರೈತರು ಬ್ರಿಟಿಷರ ವಿರುದ್ಧ ಮಾಡಿದ ಹೋರಾಟದಿಂದ ಹದಿಮೂರು ನೂರು ಜನರನ್ನು ಬಂಧಿಸಿ ಅಂಡಮಾನಿಗೆ ಕಳುಹಿಸಲಾಯಿತು. ಇವರಿಗೆ ಹತ್ತು ವರ್ಷಗಳ ಸಜೆ ಮುಗಿದ ನಂತರವೂ ಸಹ ದ್ವೀಪ ಬಿಟ್ಟು ಹೋಗುವಂತಿಲ್ಲ ಎಂಬ ಷರತ್ತುಗಳನ್ನು ವಿಧಿಸಿತ್ತು. ಹಾಗಾಗಿ ಈ ಜನ ಅಲ್ಲಿಯೇ ಸಂಸಾರಗಳನ್ನು ಕಟ್ಟಿಕೊಂಡು ನೆಲೆನಿಂತರು.

ಹೀಗೆ ಶಿಕ್ಷೆ ಅನುಭವಿಸಲೆಂದೇ ಬಂದ ಕೆಲವು ಜನರು ಮತ್ತೆ ತಮ್ಮ ಊರಿಗೆ ಹೋಗಲಾರದೆ ಇಲ್ಲಿಯೇ ನೆಲೆಯಾದರೂ ಮತ್ತು ಅಂಡಮಾನಿನಲ್ಲಿ ಹೆಚ್ಚಿನ ಜನರು ವಲಸೆಗಾರರಾಗಿಯೇ ಬಂದಿರುವುದು ಕಾಣಸಿಗುತ್ತಾರೆ. ಇನ್ನು ಕೆಲವರು ಬ್ರಿಟಿಷರು ಪಂಜಾಬಿನಿಂದಲೂ ಪಾಕಿಸ್ತಾನದ ಭಾಗವಾಗಿರುವ ಬಲೂಚಿಸ್ಥಾನದಿಂದಲೂ ಅನೇಕ ಸ್ವಾತಂತ್ರ್ಯ ಹೋರಾಟಗಾರರನ್ನು ತಂದು ಇಲ್ಲಿ ಹಾಕಿದ್ದರು. ಹೆಚ್ಚಿನ ಕೈದಿಗಳು ಬಿಡುಗಡೆಯಾದ ಮೇಲೆ ಊರಿಗೆ ಹೋಗದೆ ಇಲ್ಲಿಯ ಸ್ಥಳೀಯ ಹೆಣ್ಣುಗಳನ್ನು ಮದುವೆಯಾಗಿ ಬ್ರಿಟಿಷರು ಕೊಟ್ಟ ಭೂಮಿಯಲ್ಲಿ ಸಾಗುವಳಿ ಮಾಡಿಕೊಂಡು ನೆಲೆಸಿದರು. ಇದು ಅಂಡಮಾನನ್ನು ಜನಭರಿತ ನಾಡಾಗಿ ಮಾಡುವ ಕೆಲಸ ಬ್ರಿಟಿಷರ ಯೋಜನೆಯಾಗಿತ್ತು. ಇವರಷ್ಟೇ ಅಲ್ಲದೆ ಬರ್ಮಾದಿಂದ ಅಂಡಮಾನಿಗೆ ಮರ ಕಡಿಯಲು ಬಂದ ಕೆಲಸಗಾರರು ಅಂಡಮಾನಿನ ಹೆಣ್ಣುಗಳನ್ನು ಮದುವೆಯಾಗಿ ಮಿಶ್ರತಳಿಗಳ ಮಕ್ಕಳು ಜನಿಸಿದವು.

ಹೀಗೆ ಅಂಡಮಾನಿಗೆ ನಾನಾ ಕಾರಣಗಳಿಗೆ, ಉದ್ದೇಶಗಳಿಗೆ, ಬೇರೆ ಬೇರೆ ಕಡೆಗಳಿಂದ ಬಂದ ವಲಸಿಗರು ಹೋಟೆಲ್, ಮರ ಕಡಿಯಲು, ಜೈಲುವಾಸಕ್ಕೆಂದು ರಸ್ತೆ ನಿರ್ಮಾಣಕ್ಕೆಂದು ಹಲವರು ಬಂದಿದ್ದಾರೆ ಮತ್ತು ಬರುತ್ತಲೇ ಇದ್ದಾರೆ.

**೨. ಜೋಕುಮಾರಸ್ವಾಮಿ-ಚಂದ್ರಶೇಖರ ಕಂಬಾರ**

ಈ ನಾಟಕದಲ್ಲಿ ಬರಗಾಲದ ಕಾರಣಕ್ಕಾಗಿ ಊರಿನ ಗೌಡನಿಗೆ ಗೇಣಿ ಹಣ ಕೊಡಲು ಹಣವಿಲ್ಲದೆ ಗೌಡನ ದಬ್ಬಾಳಿಕೆಗೆ ಹೆದರಿ ರಾತ್ರೋರಾತ್ರಿ ಕುಟುಂಬ ಸಮೇತ ವಲಸೆ ಹೋಗಲು ತಯಾರಿಯಾದಾಗ ನಾಟಕದ ನಾಯಕ ಜೈಹಿಸಿದನಾಯಕ ವಲಸೆ ಹೋಗುವವರನ್ನು ತಡೆದು ಗೌಡನ ವಿರುದ್ಧ ಹೋರಾಟ ಮಾಡಿ ಜಯಿಸುತ್ತಾನೆ. ಹಳ್ಳಿಯ ಜನ ಅನೇಕ ವರ್ಷಗಳಿಂದ ಮಳೆ ಬಾರದೆ, ಬೆಳೆ ಬೆಳೆಯಲು ನೀರಿಲ್ಲದೆ, ಊಟಕ್ಕೆ ಗತಿಯಿಲ್ಲದೆ ಬದುಕುತ್ತಿರುವಾಗ ಊರಿನ ಗೌಡ

ಹೊಲದ ಗೇಣಿಯ ವಸೂಲಿಗೆ ಬಂದೂಕಗಳನ್ನಿಡಿದು ದಬ್ಬಾಳಿಕೆ ನಡೆಸುತ್ತಾನೆ. ಗೇಣಿ ಹಣ ಕೊಡದ ಕುಟುಂಬದ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರವೆಸಗುವ ಕ್ರೂರ ಕೃತ್ಯಕ್ಕೆ ಎಸಗುತ್ತಾನೆ. ಇಂತಹ ಗೌಡನ ವಿರುದ್ಧ ಜೈಸಿದನಾಯಕ ಹೋರಾಡುತ್ತಾನೆ.

ಇನ್ನು ಜಾನಪದೀಯ ಕಾಲದಲ್ಲಿ ಮಲೆಮಾದೇಶ್ವರ ಮತ್ತು ಮಂಟೇಸ್ವಾಮಿಯಂತಹ ಜನಪದೀಯ ನಾಯಕರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಲೇ ಜೀವನ ಸಾಗಿಸಿದರು. ಹಿ.ಚಿ.ಬೋರಲಿಂಗಯ್ಯನವರ ಮಲೆಮಾದೇಶ್ವರ ಕೃತಿಯ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದಂತೆ "ಮಲೆಮಾದೇಶ್ವರ ಕಾವ್ಯದ ಮಾದಪ್ಪನದು ಸದಾ ಪಯಣದ ಬದುಕು ಭಿಕ್ಷೆ ಬೇಡುವುದೇ ಅವನ ವೃತ್ತಿ ತನ್ನ ಒಕ್ಕಲುಗಳನ್ನು ಹೆಬ್ಬಿಸಿಕೊಂಡು ಒಂದೇ ಕಡೆ ನೆಲೆ ನಿಲ್ಲಬೇಕೆಂಬ ತವಕ ಅವನದಾಗಿತ್ತು"(ಕೇಶವನ್ ಪ್ರಸಾದ್, ೧೯೯೭, ಪು.೧೧) ಎನ್ನುವುದನ್ನು ವ್ಯಕ್ತಪಡಿಸುತ್ತಾರೆ.

ಇನ್ನು ಮೈಲಾರಲಿಂಗನನ್ನು ದೈವವನ್ನಾಗಿರಿಸಿಕೊಂಡ ಕುರಬರು ಸಹ ಅಲೆಮಾರಿ ಜನಾಂಗದವರಾಗಿದ್ದು, ಇವರು ಎಲ್ಲಿ ಹೋಗಿ ನೆಲೆಯಾಗಿದ್ದರೂ ಅಲ್ಲಿ ಮಂಟೇಸ್ವಾಮಿ ದೈವ ಪುರುಷನಾಗಿ ಪವಾಡ ಪುರುಷನಾಗಿ ಬೆಳೆಯುತ್ತಾನೆ. "ಮೂಲತಃ ಕುರುಬ ಜನಾಂಗದ ಮೈಲಾರಲಿಂಗ ಕುರಿ ಸಾಕಣಿಕೆಗೆ ಅಲೆಮಾರಿ ಜೀವನ ನಡೆಸುತ್ತಿದ್ದರು. ಕಾಲಾನಂತರದಲ್ಲಿ ಒಂದೇ ಸ್ಥಳದಲ್ಲಿ ನೆಲೆ ನಿಂತು ಅವರು ಹಿಂದಿನ ಜನರೊಂದಿಗೆ ಬೆರೆತು ನೆರೆಹೊರೆ ಸಮುದಾಯಗಳಲ್ಲಿ ಜೀವಿಸ ತೊಡಗಿದರು"(ಮಂಜುನಾಥ ಬೇವಿನಕಟ್ಟೆ, ೧೯೯೭, ಪು.೦೯) ಹೀಗೆ ಜನಪದೀಯವಾಗಿ ಕೂಡ ಈ ವಲಸೆಯನ್ನು ನೋಡಬಹುದು.

**ಕೃತಿ**

**೧. ಡಯಾಸ್ಪೊರ–ಆರ್.ತಾರಿಣಿ ಶುಭದಾಯಿನಿ**

ಡಯಾಸ್ಪೊರ ಎಂಬ ಈ ಕೃತಿಯಲ್ಲಿ 'ಡಯಾಸ್ಪೊರ' ಎಂಬ ಪರಿಕಲ್ಪನೆಯೇ ವಲಸೆ ಎಂಬ ಅರ್ಥವನ್ನು ಹೊಂದಿದೆ ಎಂಬ ಅಂಶವನ್ನು ದಾಖಲೆಗಳ ಮೂಲಕ ಸ್ಪಷ್ಟಿಕರಿಸಿ ವಲಸೆ ಇಂದು ಜಾಗತಿಕ ಮಟ್ಟದಲ್ಲಿ ವಿಸ್ತೃತಗೊಂಡಿರುವ ಬಗೆಯನ್ನು ವಲಸೆಯ ಬಿನ್ನ ಆಯಾಮಗಳ ಮೂಲಕ ವಿಸ್ತರಿಸುತ್ತಾರೆ.

ಹಾಗೆಯೆ ಚೀನಾ, ಆಫ್ರೀಕಾ, ಭಾರತೀಯ ದೇಶದವರ ವಿದೇಶಿ ವಲಸೆಗಿರುವ ಕಾರಣ, ಪರಿಣಾಮಗಳನ್ನು ತಿಳಿಸುತ್ತಾರೆ, ತಲೆಮಾರಿನಿಂದ ತಲೆಮಾರಿನವರಿಗೆ ವಲಸೆಯ ಪರಿಣಾಮದ ಸ್ವರೂಪದಲ್ಲಿ ಉಂಟಾಗುವ ಭಿನ್ನತೆಗಳನ್ನು ಹೇಳುತ್ತಾರೆ, ಜೊತೆಗೆ ಈ ಒಂದು ಡಯಾಸ್ಪೊರ ವಲಸಿಗರ ಸಾಹಿತ್ಯದಲ್ಲಿ ಕಂಡುಬರುವ ಅಭಿವ್ಯಕ್ತ ಕ್ರಮವನ್ನು ಸ್ಪಷ್ಟಪಡಿಸುತ್ತಾರೆ, ಹಾಗೆಯೆ ಡಯಾಸ್ಪೊರ

ಎಂಬ ಪರಿಕಲ್ಪನೆಯ ವಿಸ್ತರಣೆಗೆ ಆತ್ಮಕಥೆ, ಪ್ರವಾಸಿ ಕಥನ ಕಾದಂಬರಿ ಸಣ್ಣಕಥೆಗಳಲ್ಲಿ ಹೆಚ್ಚು ಡಯಾಸ್ಪೋರ ಸಾಹಿತ್ಯದಲ್ಲಿ ಬಳಕೆಯಾಗಿದೆ ಎಂಬುದನ್ನು ಪ್ರಸ್ತಾಪಿಸುತ್ತಾರೆ.

ಒಟ್ಟಾರೆಯಾಗಿ ಸಾಹಿತ್ಯದಲ್ಲಿ ವಲಸೆಯ ಪಾತ್ರವನ್ನು ಇಲ್ಲಿಯ ಲೇಖಕರು ದೇಶದಿಂದ ವಿದೇಶಕ್ಕೆ ಹೋದ ವಲಸಿಗರ ಸಾಹಿತ್ಯದಲ್ಲಿ ಅದರಲ್ಲೂ ತಲೆಮಾರುಗಳ ಹಂತದಲ್ಲಿ ಅಭಿವ್ಯಕ್ತಗೊಳ್ಳುವ ಸೂಕ್ಷ್ಮವಿವರಗಳನ್ನು ಅದರಲ್ಲೂ ಅಲ್ಲಿಯೂ ಇಲ್ಲದೇ ಇಲ್ಲಿಯೂ ಇಲ್ಲದೇ ದ್ವಂದ್ವಮಯ ಬದುಕನ್ನು ನಡೆಸುವ ವಲಸಿಗ ಲೇಖಕರ ಸಾಹಿತ್ಯದ ಅಭಿವ್ಯಕ್ತಿಯನ್ನು ಇಲ್ಲಿ ಚಿತ್ರಿಸಿದ್ದಾರೆ.

**೨. ವಿಕ್ಟೋರಿಯಾ ಗೌರಮ್ಮ–ಸಿ.ಪಿ.ಬೆಳ್ಳಿಯಪ್ಪ**

ಈ ಕೃತಿಯನ್ನು ಡಾ.ಬಿ. ರಾಮಚಂದ್ರಾಚಾರ್ ರವರು ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ, ಇದೊಂದು ಚಾರಿತ್ರಿಕ ಕೃತಿಯಾಗಿದ್ದು ಇಲ್ಲಿ ೧೯ನೇ ಶತಮಾನದಲ್ಲಿದ್ದಂತಹ ಭಾರತದಲ್ಲಿನ ಸ್ಥಳೀಯ ರಾಜರುಗಳ ಆಡಳಿತದ ಸ್ಥಿತಿಗತಿ, ಬ್ರಿಟಿಷರ ಒಳಸಂಚುಗಳು ಮತ್ತು ಮತಾಂತರದ ಒತ್ತಡಗಳು, ರಾಜನಾದ ಚಿಕ್ಕವೀರರಾಜೇಂದ್ರನ ಕುಟುಂಬ ವಲಸೆ ಹೇಗೆ ಕಾರಣ ವಾಯಿತು ಎಂಬುದನ್ನು ತಿಳಿಸಿಕೊಡುತ್ತದೆ.

ಹಾಲೇರಿ ವಂಶಸ್ಥರಾದ ಕೊಡಗಿನ ರಾಜರಿಗೂ ಬ್ರಿಟಿಷರಿಗೂ ಇದ್ದ ಸ್ನೇಹ ಸಂಬಂಧ ಕೊಡಗಿನ ಕೊನೆಯ ಅರಸ ಚಿಕ್ಕವೀರರಾಜೇಂದ್ರನವರೆಗೂ ಸಾಗಿ ಬಂದು ಕೊನೆಗೆ ರಾಜನ ಮೇಲೆ ಹಲವು ಅಪಾದನೆಗಳು ಹೊರಿಸಿ ರಾಜನ ಪರಿಹಾರವನ್ನು ಕೊಡಗಿನಿಂದ ಬನರಸ್ಸ್‌ಗೆ ಗಡಿಪಾರು ಮಾಡಲಾಗುತ್ತದೆ ಅಪಾದನೆಯನ್ನು ಹೊತ್ತು ತನ್ನ ರಾಜ್ಯವನ್ನು ಕಳೆದುಕೊಂಡು ತನ್ನ ಜೀವಿತದ ಕೊನೆಯವರೆಗೂ ಬ್ರಿಟಿಷರ ಗುಲಾಮನಾಗಿ ಇರಬೇಕೆಂಬ ಚಿಂತೆಯಿಂದ ತನ್ನ ಪ್ರೀತಿಯ ಮಗಳು ಗೌರಮ್ಮನಿಗೆ ಇಂಗ್ಲೀಷ್ ಶಿಕ್ಷಣ ಕೊಡಿಸಿ ಕ್ರೈಸ್ತಧರ್ಮ ದೀಕ್ಷೆ ಕೊಡಿಸುವ ನೆಪದಲ್ಲಿ ಉನ್ನತ ಶಿಕ್ಷಣ ಕಲಿಸುವ ಆಶಯವನ್ನು ಕಂಪನಿಯವರ ಮುಂದಿಟ್ಟು ಇಂಗ್ಲೆಂಡಿಗೆ ತೆರೆಳುತ್ತಾನೆ.

ನಂತರ ಇಂಗ್ಲೆಂಡನಲ್ಲಿ ಗೌರಮ್ಮನ ಬದುಕಿನಲ್ಲಿ ಉಂಟಾಗುವ ಸ್ಥಿತ್ಯಂತರಗಳನ್ನು ಕೃತಿ ದಾಖಲಿಸುತ್ತದೆ, ಕೊನೆಗೂ ಗೌರಮ್ಮ ಮತ್ತು ರಾಜ ತನ್ನ ದೇಶಕ್ಕೆ ವಾಪಾಸಾಗದೇ ಅಲ್ಲೇ ನೆಲೆಯಾಗಿ ಸಾವನ್ನಪ್ಪುತ್ತಾರೆ. ಹೀಗೆ ರಾಜ ಮತ್ತು ಗೌರಮ್ಮಳ ವಲಸೆಗೆ ರಾಜಕೀಯ ಹಿನ್ನಲೆಗಳು ಕಾರಣವಾಗುವ ಸ್ಥಿತಿಗತಿಗಳನ್ನು ಕೃತಿ ಪ್ರಮುಖವಾಗಿ ಕಟ್ಟಿಕೊಡುತ್ತದೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಪ್ರಾಚೀನ ಸಾಹಿತ್ಯದಿಂದಿಡಿದು ಇಂದಿನ ಆಧುನಿಕ ಸಾಹಿತ್ಯದವರೆಗೆ ಎಲ್ಲಾ ಪ್ರಕಾರಗಳಲ್ಲಿಯೂ ವಲಸೆ ಮೂಡಿಬಂದಿರುವ ಬಗೆಯನ್ನು ಗಮನಿಸಿದಾಗ ವಲಸೆ ಮತ್ತು ಸಾಹಿತ್ಯಕ್ಕಿರುವ ಅಂತಃಸಂಬಂಧವನ್ನು ಸೂಕ್ಷ್ಮವಾಗಿ ನೋಡಬಹುದಾಗಿದೆ. ಹೀಗೆ ಅನುವಾದ,

ನಾಟಕ, ಕತೆ, ಕಾದಂಬರಿ, ಪ್ರಾಚೀನ ಕಾವ್ಯಗಳಲ್ಲಿ ಮೂಡಿಬಂದಿರುವ ವಲಸೆಯ ಚಿತ್ರಣದ ಮೂಲಕ ವಿಶ್ವಸಾಹಿತ್ಯದ ಗಲಿವರ ಟ್ರಾವೆಲ್ಸ್‌ನಿಂದ ಹಿಡಿದು ಇಂದಿನ ಚಂದ್ರಶೇಖರ್ ಕಂಬಾರ ರವರ ಜೋಕುಮಾರಸ್ವಾಮಿ ನಾಟಕದವರೆಗೂ ಸಹ ವಲಸೆಯ ವಿಭಿನ್ನ ಮಾದರಿಗಳು ಮೂಡಿ ಬಂದಿರುವುದನ್ನು ಗಮನಿಸಿದಾಗ ಸಾಹಿತ್ಯಕ್ಕೂ ಮತ್ತು ವಲಸೆಗಿರುವ ಅಂತಃಸಂಬಂಧದ ನಂಟು ಹೇಗೆ ಸಾಹಿತ್ಯದಲ್ಲಿ ಬೆಳೆದುಬಂದಿದೆ ಎಂಬುದನ್ನು ಗಮನಿಸಲಾಗಿದೆ. ಮತ್ತು ಈ ಮೂಲಕ ಮುಂದಿನ ಅಧ್ಯಾಯದಲ್ಲೂ ಅದರಲ್ಲೂ ಕಥನ ಸಾಹಿತ್ಯದಲ್ಲಿ ಲೇಖಕರು ವಲಸೆಯನ್ನು ವಿಭಿನ್ನ ಆಯಾಮಗಳನ್ನಾಗಿಸಿಕೊಂಡು ಚಿತ್ರಿಸಿರುವ ವಲಸೆಯ ಸಂವೇದನೆಯನ್ನು ಮುಂದಿನ ಭಾಗದಲ್ಲಿ ಸಣ್ಣಕತೆ ಕಾದಂಬರಿಗಳ ಮೂಲಕ ಸ್ಪಷ್ಟಪಡಿಸಲಾಗುವುದು.

132312

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಅಧ್ಯಾಯ ಐದು

# ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ವಿಭಿನ್ನ ಆಯಾಮಗಳು

೫.೧. ವ್ಯಕ್ತಿ ವಲಸೆ

೫.೨. ಕುಟುಂಬ ವಲಸೆ

೫.೩. ಸಮುದಾಯ ವಲಸೆ

೫.೪. ಊರಿನ ವಲಸೆ

ಅಧ್ಯಾಯ ಐದು

# ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆ ವಿಭಿನ್ನ ಆಯಾಮಗಳು

ಸಾಹಿತ್ಯದ ಇತರ ಪ್ರಕಾರಗಳಲ್ಲೂ ವಲಸೆ ಮೂಡಿಬಂದರೂ ಕಥನ ಸಾಹಿತ್ಯ ನಿರೂಪಿಸುವ ಮಾದರಿ ಭಿನ್ನವೇ ಅಂತಹ ಕಥನ ಸಾಹಿತ್ಯದಲ್ಲಿ ವಲಸೆಯ ಕುರಿತು ಮೂಡಿಬಂದಿರುವ ವಿಭಿನ್ನ ಆಯಾಮಗಳನ್ನು ಇಲ್ಲಿ ವಿವರಿಸಲಾಗುವುದು.

ಪ್ರತಿ ಕಥೆಯ ಆರಂಭದಲ್ಲಿ, ವಿವರಣೆಯಲ್ಲಿ, ಅಂತಿಮವಾಗಿ ಏನ್ನನ್ನು ಅಭಿವ್ಯಕ್ತಿಸಿದೆಯೋ ಯಾವ ರೀತಿ ತನ್ನನ್ನು ವಿಸ್ತರಿಸಿಕೊಂಡಿದೆ ಎಂಬುದರ ಮೂಲಕ ವಲಸೆಯ ನೆಲೆ ಬೆಲೆಗಳನ್ನು ಅರಿಯುವ ಪ್ರಯತ್ನವಿದೆ. ಕೇವಲ ವಲಸೆ ಮಾತ್ರವಲ್ಲ, ವಲಸೆಯ ಪ್ರೇರಕ–ಪೂರಕ ಅಂಶಗಳೆನಿಸುವ ಇನ್ನಿತರ ವಿವರಗಳನ್ನು ಅರ್ಥೈಸಿಕೊಳ್ಳುತ್ತಲೇ ವಲಸೆಯ ವಿರಾಡ್ರೂಪವನ್ನು ಗಮನಿಸಲಾಗುವುದು. ಅಂದರೆ ಸಾಹಿತ್ಯ ಕೃತಿಯೊಂದು ವಲಸೆಯ ಮೂಲಕ ಸಾಧಿಸುವ ಅಂಶಗಳು ಮೊದಲ ಘಟಕವಾದರೆ ನಂತರ ವಲಸೆಯ ಜೊತೆ ಜೊತೆಗೆ ಚರ್ಚಿತಗೊಳ್ಳುವ ಇನ್ನಿತರ ಅಂಶಗಳನ್ನು ಎರಡನೆಯ ಘಟಕವಾಗಿಸಿ ವಿಸ್ತರಿಸಲಾಗುವುದು. ಆ ಮೂಲಕ ವಲಸೆ ಕುರಿತಂತೆ ಇರುವ ವಿಭಿನ್ನ ಒಳನೋಟ ಗಳನ್ನು Permutation Combination ಆಗಿ ಹಲವು ವಿಭಿನ್ನ ಆಯಾಮಗಳನ್ನು ಅನಾವರಣ ಗೊಳಿಸಲು ಪ್ರಯತ್ನಿಸಲಾಗಿದೆ. ಪರಿವರ್ತಿತ ಕ್ರಮ ಜೋಡಣೆಯ ಮೂಲಕ ಸಾಧಿಸಲು ಸಾಧ್ಯವಾಗುತ್ತದೆ. ಆ ಮೂಲಕ ವಲಸೆಯ ಆಗಾದ ಸಾಧ್ಯತೆಯನ್ನು ಸಾಹಿತ್ಯದ ಅನುಸಂಧಾನದ ಮೂಲಕ ಅದು ತನ್ನನ್ನು ವಿಸ್ತರಿಸಿಕೊಳ್ಳುವ ಅನೂಹ್ಯ ಪ್ರಪಂಚವನ್ನು ಅನಾವರಣಗೊಳಿಸಬಹುದು. ಅಧ್ಯಯನದ ಅನುಕೂಲಕ್ಕಾಗಿ ಈ ಅಧ್ಯಯನದಲ್ಲಿ ನಾಲ್ಕು ಉಪ ಅಧ್ಯಯನಗಳಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೇ

೫.೧. ವ್ಯಕ್ತಿ ವಲಸೆ

೫.೨. ಕುಟುಂಬ ವಲಸೆ

೫೩. ಊರಿನ ವಲಸೆ

೫.೪. ಸಮುದಾಯ ವಲಸೆ

## ೫.೧. ವ್ಯಕ್ತಿ ವಲಸೆ

ವ್ಯಕ್ತಿ ಸಂಬಂಧಿ ನೆಲೆಯಲ್ಲಿ ನಡೆದ ವಲಸೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ವ್ಯಕ್ತಿ ವಲಸೆಯ ಹಲವು ಕಾರಣಗಳು ಹಾಗೂ ಲೇಖಕರ ವಿಭಿನ್ನ ಅಭಿವ್ಯಕ್ತಿ ಕ್ರಮಗಳನ್ನು ಇಲ್ಲಿ ಪರಿಶೀಲಿಸಲಾಗುವುದು. ಸ್ವಯಂಪ್ರೇರಿತ ಅಥವಾ ಪ್ರಚೋದಿತ ಕ್ರಿಯೆಗಳಲ್ಲಿ ಕಾರಣಗಳನ್ನು ದ್ವಿಭಾಗಿಸಬಹುದಾಗಿದೆ. ಈ ದ್ವಿಭಾಗವು ಪಡೆದುಕೊಳ್ಳುವ ವಿಭಿನ್ನ ಆಯಾಮಗಳನ್ನು ಹಲವು ರೀತಿಯಲ್ಲಿ ಪರಿಕಲ್ಪಿಸಿಕೊಳ್ಳ ಬಹುದಾಗಿದೆ. ಇಂತಹ ವಿಭಿನ್ನ ಆಯಾಮಗಳ ಹಲವು ಸಾಧ್ಯತೆಗಳನ್ನು, ಲೇಖಕರ ಅಭಿವ್ಯಕ್ತಿ ಕ್ರಮವಾಗಿ ಗುರುತಿಸಬಹುದಾಗಿದೆ. ವ್ಯಕ್ತಿ ಒಬ್ಬನಾದರೂ ಆತನನ್ನು ನಿಯಂತ್ರಿಸುವ ಹಲವು ಅಂಶಗಳನ್ನು ಗುರುತಿಸಿ ವಿಶ್ಲೇಷಿಸುವುದು ಹಾಗೂ ಚರ್ಚೆ ಒದಗಿಸುವುದು ಪ್ರಮುಖ ಆದ್ಯತೆಯಾಗಿದೆ.

ಹೀಗೆ ವ್ಯಕ್ತಿಗಳು ವಲಸೆಯನ್ನು ನಿರೂಪಿಸುವ ಹಲವಾರು ಸಣ್ಣಕತೆಗಳು, ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ 'ತ್ರಿಶಂಕು', 'ಮರಳಿಮಣ್ಣಿಗೆ', 'ಬೀಜ', 'ಹಳ್ಳ ಬಂತು ಹಳ್ಳ', 'ಚಿಗುರಿದ ಕನಸು', 'ವಲಸೆ ಹಕ್ಕಿಯ ಹಾಡು' ಅಂತಹ ಕಾದಂಬರಿಗಳು ಹಾಗೂ 'ಕ್ಲಿಪ್ ಜಾಯಿಂಟ್', 'ಕ್ಷಿತಿಜ', 'ವಿಫಲತೆ', ಬೇರುಬಿಟ್ಟಂತಹ ಕತೆಗಳಲ್ಲಿ ವ್ಯಕ್ತಿ ವಲಸೆಯನ್ನು ಗುರುತಿಸಬಹುದಾಗಿದೆ.

ಇದಕ್ಕೆ ಪೂರಕವಾಗಿ ವಿಶ್ವನಾಥ ಕಾರ್ನಾಡರು ತಮ್ಮ 'ತುಳುವರ ಮುಂಬಯಿ ವಲಸೆ' ಎಂಬ ಪ್ರಕಟಿತ ಪಿಎಚ್.ಡಿ. ಪ್ರಬಂಧದಲ್ಲಿ ವ್ಯಕ್ತಿಗಳು ಸಂಬಂಧಿತ ವ್ಯಾಖ್ಯಾನವನ್ನು ಇಲ್ಲಿ ನೋಡಬಹುದು. "ವಲಸೆ ಎಂದರೆ ಒಬ್ಬ ವ್ಯಕ್ತಿ ಇಲ್ಲವೆ ಒಂದು ಗುಂಪು(ಕುಟುಂಬ) ದೈಹಿಕವಾಗಿ ಒಂದು ಸಾಮಾಜಿಕ ಪರಿಸ್ಥಿತಿಯಿಂದ ಇನ್ನೊಂದು ಸಾಮಾಜಿಕ ಪರಿಸ್ಥಿತಿಗೆ ವರ್ಗಾಯಿಸುವುದು" (ವಿಶ್ವನಾಥ ಕಾರ್ನಾಡರು, ೧೯೯೪, ಪು.೩೭) ಎಂದು ಉಲ್ಲೇಖಿಸುತ್ತಾರೆ. ಹಾಗಾಗಿ ಈ ಅಭಿಪ್ರಾಯ ವ್ಯಕ್ತಿಗಳ ವಲಸೆಗೆ ಪೂರಕ ಅಂಶವಾಗಿ ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ವ್ಯಕ್ತಿಗಳ ವಲಸೆಗೆ ಸಂಬಂಧಿಸಿದ ಕತೆ, ಕಾದಂಬರಿಗಳನ್ನು ನೋಡು ವುದಾದರೆ, ವಿ.ಎಂ.ಇನಾಂದಾರ್ ಅವರ 'ತ್ರಿಶಂಕು' ಕಾದಂಬರಿ ಇದೊಂದು ವ್ಯಕ್ತಿ ವಲಸೆಗೆ ಸಂಬಂಧಿಸಿದ ಕಾದಂಬರಿಯಾಗಿದೆ. 'ತ್ರಿಶಂಕು' ಈ ಕಾದಂಬರಿಯ ಶೀರ್ಷಿಕೆಯೇ ಒಂದು ರೀತಿಯ ಅತಂತ್ರ ಸ್ಥಿತಿಯನ್ನು ಸೂಚಿಸುತ್ತದೆ. ಕಾರಣ ಕತೆಯ ನಾಯಕ ನಾಗರಾಜ ಬೆಂಗಳೂರಿನಿಂದ ಅಮೇರಿಕಕ್ಕೆ ಹೋಗುವ ವಲಸೆಯೇ ನಾಗರಾಜನ ತ್ರಿಶಂಕು ಸ್ಥಿತಿಗೆ ಕಾರಣವಾಗುತ್ತದೆ.

ಸಿ.ಎಸ್.ಯಾದವಾಡ ಹೇಳುವಂತೆ 'ಇದೊಂದು ವೈಚಾರಿಕ ಕಾದಂಬರಿ"(ರಾಜಗೋಪಾಲಾ ಚಾರ್ಯ. ಎಂ, ೧೯೮೪, ಪು.೩೭) "ತ್ರಿಶಂಕು ಕಾದಂಬರಿಯ ಹೆಸರೇ ಸೂಚಿಸುವಂತೆ ಭಾರತೀಯ ಪುರಾಣ ಪ್ರಸಿದ್ಧವಾದ ತ್ರಿಶಂಕುವಿನ ಕಥೆಯನ್ನು ಸಾಂಕೇತಿಕವಾಗಿ ಪ್ರತಿಧ್ವನಿಸುವುದಾಗಿದೆ. ಆದರೆ ತ್ರಿಶಂಕುವು ತನ್ನ ಪಾಲಿಗೆ ಸ್ವರ್ಗವೂ ಇಲ್ಲದಾಗಿ ನೆಲವೂ ಇಲ್ಲದಾಗಿ ತಲೆ ಕೆಳಗಾಗಿ ಅಂತರೀಕ್ಷದಲ್ಲಿ ನಿಲ್ಲಬೇಕಾದಂತೆ ಇಂದಿನ ಅನೇಕ ಭಾರತೀಯರು ವಿದೇಶಗಳ ಸೆಳೆತಕ್ಕೆ ಒಳಗಾಗಿ ಅಲ್ಲಿ ಹೋಗಿ ನೆಲೆನಿಲ್ಲಬೇಕಾಗಿ ಬಂದಾಗ ತಾವು ಬೆಳೆದು ಬಂದ ಸಂಸ್ಕೃತಿಯ ತಮ್ಮತನವನ್ನು ಉಳಿಸಿಕೊಳ್ಳದೆ ವಿದೇಶಿಯರ ಸಂಸ್ಕೃತಿಯನ್ನು ಒಗ್ಗಿಸಿಕೊಳ್ಳದೇ ಇಲ್ಲಿಯೂ ಸಲ್ಲದವರಾಗಿ ಅಲ್ಲಿಯೂ ಸಲ್ಲದವರಾಗಿ, ಮಾನಸಿಕ ಅಶಾಂತಿಗೊಳಗಾಗಿ ಸಾಂಸ್ಕೃತಿಕ ನಿರ್ವಾತದಲ್ಲಿ ಉಬ್ಬಸಕ್ಕೊಳಗಾಗಿ ಚಡಪಡಿಸುವಂತಾಗು ತ್ತಿರುವುದರ ಪರಿಸ್ಥಿತಿಯನ್ನು ಕಾದಂಬರಿಕಾರ ವಿ.ಎಂ.ಇನಾಂದಾರ್ ವೈಚಾರಿಕ ನೆಲೆಯಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾರೆ"(ಅದೇ, ಪು.೫) ಎಂದು ಅಭಿಪ್ರಾಯಪಡುತ್ತಾರೆ ಇಲ್ಲಿ ತ್ರಿಶಂಕು ಸ್ಥಿತಿಗೆ ಒಳಗಾಗುವ ಪ್ರಮುಖ ಪಾತ್ರ.

ಕತೆಯ ನಾಯಕ ನಾಗರಾಜ ನಾಲ್ಕು ವರ್ಷಗಳ ಕಾಲ ನಾರ್ಟನ್ ವಿಶ್ವವಿದ್ಯಾಲಯದಲ್ಲಿ ಸೀನಿಯರ್ ಫೆಲೋಶಿಪ್‌ಗಾಗಿ ವಿಶೇಷ ವ್ಯಾಸಂಗ ಮಾಡಲು ಸ್ವ ಇಚ್ಛೆಯಿಂದಲೇ ಭಾರತದಿಂದ ಅಮೆರಿಕಗೆ ವಲಸೆ ಹೋಗಿ ನಾನಾ ತಾಕಲಾಟಗಳಿಗೆ ಬಲಿಯಾಗುತ್ತನೆ. ಮದುವೆ ಮಾಡಿಕೊಂಡರೆ ಮಾವ ಕೊಡುವ ಹಣದಿಂದ ಅಮೆರಿಕಕ್ಕೆ ಹೋಗಬಹುದೆಂದು ಮದುವೆ ಮಾಡಿಕೊಳ್ಳುತ್ತಾನೆ ಆದರೆ ಹೆಂಡತಿ, ನಾಗರಾಜ ಅಮೆರಿಕಾದಲ್ಲಿರುವಾಗಲೇ ನದಿ ನೀರಿನಲ್ಲಿ ಕಾಲು ಜಾರಿ ಸಾಯುತ್ತಾಳೆ. ಇದೇ ಕೊರಗಲ್ಲಿ ತಾಯಿಯು ಸಾಯುತ್ತಾಳೆ. ತಾಯಿ ಸತ್ತ ಅದೇ ತಿಂಗಳಲ್ಲಿ ತಂದೆಯೂ ಸಾವಿಗಿಡಾಗುತ್ತಾನೆ ಹೀಗೆ ಸತತವಾಗಿ ಮೂರು ಸಾವುಗಳು ನಡೆಯುವುದು ನಾಗರಾಜ ಅಮೆರಿಕದಲ್ಲಿ ಇದ್ದಾಗಲೇ. ಆದರೂ ಸಾವಿನ ಮಾಹಿತಿ ತಿಳಿಯದೇ ಒಬ್ಬರ ಅಂತ್ಯಕ್ರಿಯೆಗೂ ಹೋಗದವನಾಗುತ್ತಾನೆ. ಮೂವರನ್ನು ಕಳೆದುಕೊಂಡು ಅನಾಥನಂತಾಗುತ್ತಾನೆ.

ಮೊದಲೇ ತನ್ನ ಊರಲ್ಲಿ ಸುಖವಿಲ್ಲ ಎಂದು ಬಂದವನಿಗೆ ಈ ಅನಾಥ ಪ್ರಜ್ಞೆ ಇನ್ನಷ್ಟು ದುಃಸ್ಥಿತಿಗೆ ತಳ್ಳುವಂತೆ ಮಾಡುತ್ತದೆ, ನಾಲ್ಕು ವರ್ಷಗಳ ನಂತರ ತನ್ನ ಶಿಕ್ಷಣ ಮುಗಿದ ಮೇಲೆ ಅನಿವಾರ್ಯತೆಯಿಂದ ಅಮೆರಿಕದಿಂದ ಭಾರತಕ್ಕೆ ಮತ್ತೆ ವಲಸೆ ಹೋಗಲೇಬೇಕಾದ ಸಂದರ್ಭ ಎದುರಾದಾಗ ಅತಂತ್ರಕ್ಕೆ ಒಳಗಾಗುತ್ತಾನೆ. "ಹೋಗುವ ಮನಸ್ಸಿಲ್ಲ ನಾಲ್ಕು ವರ್ಷ ಈ ದೇಶದಲ್ಲಿಯ ಸುಖಾಸುಕೂಲಗಳನ್ನು ಅನುಭವಿಸಿ ಮತ್ತೇ ಇಂಡಿಯಾಕ್ಕೆ ಹೋಗಬೇಕೆಂದರೆ ಯಾರಿಗೆ ಮನಸ್ಸಾದಿತು. ಅಲ್ಲಿ ಸುಖವಿಲ್ಲ ಎಂದು ಏನೇನೋ ಆತ ಪ್ರಯತ್ನ ಮಾಡಿ ಇಲ್ಲಿ ಬಂದವನಿಗೆ ಮತ್ತೇ ಅಲ್ಲಿಗೆ ಹೋಗುವುದೇ ಅದರೇನು ಮಾಡುವುದು? ಹೋಗಬೇಕಾಗಿದೆ. ಇಂಡಿಯಾ ದೇಶದ ಮಣ್ಣನ್ನೇ

ತಲೆಯ ಮೇಲೆಯೇ ಹುಯ್ದುಕೊಂಡು ಹಾ ಹಾ ಎಷ್ಟು ಚೆನ್ನಾಗಿದೆ ಈ ಮಣ್ಣು, ಈ ಮಣ್ಣಿನ ಮೇಲೆಯೇ ಅಲ್ಲವೇ ನಾನು ಮೊದಲು ತಾಯಿಯ ಹೊಟ್ಟೆಯಿಂದ ಬಂದಿದ್ದು, ಆದ್ದರಿಂದ ಈ ಮಣ್ಣೇ ಪುಣ್ಯವೆಂದು ಸಂತೋಷಪಡುವುದೇ ನನ್ನ ಹಣೆಬರಹವಾಗಿದ್ದರೇ ಯಾರೇನು ಮಾಡುವುದಕ್ಕಾಗುತ್ತದೆ"(ಇನಾಂದಾರ ವಿ.ಎಂ, ೧೯೯೩, ಪು.೨೨)

"ನನಗೆ ಇಲ್ಲಿಂದ ಹೋಗುವುದು ಬೇಡವಾಗಿದೆ. ಹೋಗಬೇಕಾದದ್ದು ಅನಿವಾರ್ಯವಾಗಿದೆ. ಅಷ್ಟು ಮಾತ್ರ ನಿಜ"(ಅದೇ, ಪು.೧) ಎನ್ನುವ ಮಾತಿನಿಂದ ನೋವಿದೆ, ನಿರಾಸೆ ಇದೆ. ಜೊತೆಗೆ ಅನಿವಾರ್ಯತೆಯೂ ಕಾಣಿಸುತ್ತದೆ. ಇಚ್ಛಾಪೂರ್ವಕವಾಗಿ ಐಷಾರಾಮಿ ಜೀವನಕ್ಕಾಗಿ ಖುಷಿಯಿಂದ ವಲಸೆ ಹೋದ ವ್ಯಕ್ತಿ ತಿರುಗಿ ಬರಬೇಕೆಂದಾಗ ಭಾರತೀಯ ಸಂಪ್ರದಾಯವನ್ನು ಅಲ್ಲಗೆಳೆಯುತ್ತಾನೆ. ಭಾರತದಲ್ಲಿನ ಭಾವನಾತ್ಮಕ ಸಂಬಂಧಗಳನ್ನು ವ್ಯಂಗ್ಯ ಮಾಡುತ್ತಾನೆ. ತಾನು ಬೆಳೆಯಲು ಆಗದಿರುವುದಕ್ಕೆ ತನ್ನ ಮಾತೃ ಭಾಷೆಯೇ ಕಾರಣವೆಂದು ಹಿಯಾಳಿಸುತ್ತಾನೆ.

ಈ ಎಲ್ಲಾ ಮಾನಸಿಕ ತಳಮಳಗಳು ನಡೆಯುವುದು ನಾಗರಾಜ ಅಮೆರಿಕಾದಿಂದ ಇಂಡಿಯಾಕ್ಕೆ ಬರುವ ವಿಮಾನದ ಪ್ರಯಾಣದಲ್ಲಿ ಹೀಗೆ ತನ್ನ ಭೂತಕಾಲ, ವರ್ತಮಾನಕಾಲ, ಭವಿಷ್ಯತ್ಕಾಲಗಳನ್ನು ವಿಮರ್ಶಿಸುತ್ತಾನೆ. ಇವನಂತೆ ಭಾರತದ ಇನ್ನಿತರ ಪ್ರದೇಶಗಳಿಂದ ಶಿಕ್ಷಣ ಉದ್ಯೋಗಕ್ಕಾಗಿ ಅಮೆರಿಕಾಗೆ ವಲಸೆ ಬಂದವರ ಪಾತ್ರಗಳು ಸಹ ಇಲ್ಲಿ ಕಂಡುಬರುತ್ತವೆ.

ಈ ಕಾದಂಬರಿಯ ಕುರಿತು ಸಿ.ಎಸ್.ಯಾದವಾಡರವರು ವಿದೇಶಕ್ಕೆ ವಲಸೆ ಬಂದವರಲ್ಲಿ ಎರಡು ರೀತಿಯ ಜನರನ್ನು ಗುರುತಿಸುತ್ತಾರೆ. ಒಂದು "ತಾವು ನೆಲೆ ತಪ್ಪಿದವರು ಎನ್ನುವುದನ್ನು ಪ್ರಾಮಾಣಿಕವಾಗಿ ಒಪ್ಪಲಾಗದ ಇವರು ಎಲ್ಲಿಯಾದರೇನು, ಮಾನವಕುಲವೇ ಒಂದೇ ಎಂಬಂಥ ಘನವಾದ ಮಾತುಗಳ ಮೂಲಕ ತಮ್ಮ ಸಾಂಸ್ಕೃತಿಕ ವಿಲಾಸವನ್ನು ಮರೆಯಲೆತ್ನಿಸುತ್ತಾರೆ. ಇನ್ನು ಕೆಲವರು ನಿಶ್ವಿತವಾದ ನೆಲೆಯನ್ನು ಕಂಡುಕೊಂಡವರು ವಿದೇಶಿಗಳಿಂದ ನಾವು ಕಲಿತುಕೊಳ್ಳ ಬೇಕಾದಷ್ಟಿದೆ. ನಾವು ಅಲ್ಲಿಗೆ ಹೋಗುವುದು ಅಷ್ಟಕ್ಕಾಗಿ ಆ ಕೆಲಸ ಮುಗಿದಾಗ ಹಿಂದಿರುಗುವುದು ಯುಕ್ತವಲ್ಲದೆ ಅಗತ್ಯವೂ ಎಂದು ನಂಬಿದವರಾಗಿದ್ದರಿಂದ ತಮ್ಮ ಪರಿಸರಕ್ಕೆ ಹೊರತಾಗಿ ಬಾಳಲು ಒಲ್ಲದ ಪ್ರಾಮಾಣಿಕ ತಿಳುವಳಿಕೆ ಉಳ್ಳವರು ಇಂಥ ಮನೋವೃತ್ತಿಗಳ ಬಗೆಗಳನ್ನು ಚಿತ್ರಿಸುವ ಒಂದು ಋತು ಈ ಕಾದಂಬರಿಯಲ್ಲಿ ಮೂಡಿದೆ"(ರಾಜಗೋಪಾಲಾಚಾರ್ಯ. ಎಂ, ೧೯೮೪, ಪು.೫–೬) ಎನ್ನುತ್ತಾರೆ.

ಇವರ ಈ ಮಾತುಗಳಲ್ಲಿ ಮೊದಲ ವರ್ಗಕ್ಕೆ ಸೇರಿದ ಕಥಾನಾಯಕ ನಾಗರಾಜನ ವಲಸೆ ಉದಾಹರಣೆಯಾಗುತ್ತದೆ. ಅದೇ ರೀತಿ ಇನ್ನೊಂದು ವರ್ಗದ ಜನರ ಮನೋಭಾವಕ್ಕೆ ಈ ಕತೆಯಲ್ಲಿ ಬರುವ ಪ್ರಸಾದ್, ಚಂದ್ರಿಕಾ, ಪ್ರೊ, ಮಂಗಸೂಳೆಯಂತಹ ಪಾತ್ರಗಳು ಉದಾಹರಣೆ

ಯಾಗುತ್ತವೆ. ಭಾರತದಿಂದ ಅಮೆರಿಕಾಕ್ಕೆ ವಲಸೆ ಬರುವ ಪ್ರಸಾದ ಅಮೆರಿಕಾದ ಹೆಲೆನ್‌ನ್ನು ಮದುವೆ ಮಾಡಿಕೊಂಡು ಅಲ್ಲೇ ನೆಲೆಯಾಗುತ್ತಾನೆ ಆದರೆ ಭಾರತದ ಸಂಪ್ರದಾಯ ಸಂಸ್ಕೃತಿಯನ್ನು ಪ್ರೀತಿಸುವ ಪ್ರಸಾದ್ ತನ್ನ ಮಗ ಕುಮಾರನಿಗೆ ಬಲವಂತವಾಗಿ ಭಾರತದ ಸಂಸ್ಕೃತಿಯನ್ನು ಹೇರುತ್ತಾನೆ, ಹಾಗೆಯೆ ಪ್ರಸಾದ್‌ನಲ್ಲಿರುವ ಭಾರತದ ಅಭಿಮಾನ ಅಮೆರಿಕಾದ ಹೆಲನ್‌ಳನ್ನು ಸಿಟ್ಟಿಗೆಳುವಂತೆ ಮಾಡುತ್ತಿತ್ತು. ಇವರಿಬ್ಬರ ಸಂಸ್ಕೃತಿ ದೇಶಗಳ ಭಿನ್ನತೆಯಿಂದ ಇವರಿಬ್ಬರ ನಡುವೆ ಘರ್ಷಣೆ ಉಂಟಾಗುತ್ತಿತ್ತು ಏಕೆಂದರೆ ಭಾರತೀಯ ಜನರು ಪ್ರಸಾದ್‌ಗೆ ವಿದ್ಯಾವಂತರು, ಧನವಂತಾರಾಗಿ ಕಂಡರೆ ಹೆಲನ್‌ಳಗೆ ಸೋಮಾರಿಗಳಾಗಿ ಕಾಣುತ್ತಿದ್ದರು ಹಾಗೆಯೆ ಇವರಿಬ್ಬರ ಮನೋಭಾವಕ್ಕೂ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಮಗ ಕುಮಾರನದಾಗಿತ್ತು. ಉದಾ;- ಇಲ್ಲಿ ಹೆಲನ್‌ಳ ಮಾತನ್ನು ಉದಾಹರಿಸಬಹುದು

"ಭಾರತದ ಬಗೆಗಿನ ಅಷ್ಟು ಪ್ರೀತಿ ಅಭಿಮಾನ ನಿಮ್ಮದಾಗಿದ್ದರೆ ಇಲ್ಲಿಗೇಕೆ ಬಂದಿರಿ? ಇಲ್ಲಿಯ ಅವಕಾಶ ನಿಮಗೆ ಅಲ್ಲಿ ಸಿಕ್ಕುತ್ತಿತ್ತೆ? ಸಿಕ್ಕಿದ್ದರೆ ಇಲ್ಲಿ ಬರುತ್ತಿದ್ದಿರಾ? ಅಲ್ಲಿ ಸಿಕ್ಕುವುದಿಲ್ಲ ಎಂದೇ ಹಿಂದಿರುಗಿ ಹೋಗುತ್ತಿಲ್ಲ. ಇದನ್ನು ನೀವು ಒಪ್ಪದಿರಬಹುದು. ಆದರೆ ಸತ್ಯ ಸಂಗತಿ ಅಷ್ಟೆ"(ಇನಾಂದಾರ ವಿ,ಎಂ, ೧೯೯೩, ಪು.೨೨) ಎನ್ನುವ ಹೆಲೆನ್‌ಳ ಮಾತಿಗೆ ಇಬ್ಬರ ನಡುವೆ ಪ್ರೀತಿಯ ಬದಲಿಗೆ ಘರ್ಷಣೆಗಳೇ ಹೆಚ್ಚಾಗುತ್ತಿದ್ದವು.

ಹೀಗೆ ಅವರ ಅವರ ದೇಶಗಳ ಅಭಿಮಾನ ಅವರಿಗೆ ಹೆಚ್ಚಿರುತ್ತಿತ್ತು. ಆದರೆ ಕೆಲವು ಅನಿವಾರ್ಯ ಕಾರಣಗಳಿಂದ ವ್ಯಕ್ತಿ ವಲಸೆ ಅನಿವಾರ್ಯವಾಗಿದೆ, ಅದರೆ ಇದಕ್ಕೆ ವಿರುದ್ದವಾಗಿ ಕಾಣಿಸಿಕೊಳ್ಳುವ ಪಾತ್ರ ನಾಗರಾಜನದು.

"ಅಮೆರಿಕ ಬೇಡವಾಗಿರಲಿಲ್ಲ. ಆದರೆ ಅಲ್ಲಿ ಉಳಿಯುವ ಅವಕಾಶ ಉಳಿಯಲಿಲ್ಲ. ಭಾರತ ಬೇಕಾಗಿರಲಿಲ್ಲ. ಆದರೆ ಅಲ್ಲಿ ಉಳಿಯುವ ಅವಕಾಶ ಉಳಿಯಲಿಲ್ಲ. ಭಾರತ ಬೇಕಾಗಿರಲಿಲ್ಲ ಅಲ್ಲಿ ಅವಕಾಶವಿರಲಿ ಇಲ್ಲದಿರಲಿ ಅಲ್ಲಿಗೆ ಹೋಗಬೇಕಾಗಿದೆ"(ಅದೇ, ಪು.೩೯) ಎನ್ನುವ ಮಾತುಗಳೇ ನಾಗರಾಜ ತ್ರಿಶಂಕು ಸ್ಥಿತಿಯನ್ನು ಸೂಚಿಸುತ್ತದೆ. ಅಮೇರಿಕದಿಂದ ಭಾರತಕ್ಕೆ ಹೋಗುತ್ತಿರುವ ನಾಗರಾಜನಿಗೆ ವಲಸೆ ಅನಿವಾರ್ಯವಾಗಿತ್ತು ಎಂಬುದನ್ನು ಈ ಮಾತು ಸ್ಪಷ್ಟೀಕರಿಸುತ್ತದೆ.

ಇಲ್ಲಿ ಬರುವ ಇನ್ನೊಂದು ಪಾತ್ರ ಪ್ರೊ. ಮಂಗಸೂಳೆಯವರದು. ತತ್ವಶಾಸ್ತ್ರದ ಅಧ್ಯಾಪಕರಾದ ಇವರು ಪುಣೆಯಿಂದ ಅಮೆರಿಕಾಕ್ಕೆ ಬಂದಿದ್ದರು. ಇವರ ಕೆಲಸದ ಹದಿನೈದನೇ ವರ್ಷದಲ್ಲಿ ಸಂದರ್ಶಕ ಅಧ್ಯಾಪಕರೆಂದು ನಾರ್ಟನ್ ವಿಶ್ವವಿದ್ಯಾಲಯದಲ್ಲಿ ಸ್ಥಾನ ಪಡೆದು ಪಿಎಚ್.ಡಿ.ಪದವಿ ಯನ್ನು ಗಳಿಸಿದ್ದರು. ಪತ್ನಿ ಮಗಳನ್ನು ಬಿಟ್ಟು ಬಂದು ಒಂಟಿ ಜೀವನ ನಡೆಸುತ್ತಿದ್ದ ಇವರಿಗೆ ಬೇಗನೆ ಪೂರೈಸಿ ಹಿಂದಿರುಗುವ ಆಲೋಚನೆ ಇವರಾದಾಗಿತ್ತು. ದೈವಭಕ್ತರಾಗಿದ್ದ ಇವರು "ಎಲ್ಲಿ

ಹೋದರೂ ನಮ್ಮ ಕರ್ಮ ನಮ್ಮನ್ನು ಬಿಡುವುದಿಲ್ಲ. ದೇಹವನ್ನು ಬಿಟ್ಟು ಹೊರಡುವ ಜೀವ ಹೋಗುವುದು ಕೂಡ ಕರ್ಮದ ಹಿಂದಿನಿಂದಲೆ"(ಅದೇ, ಪು.೨೯)ಎನ್ನುವ ಮಾತು ಭಾರತದಿಂದ ಅಮೆರಿಕಗೆ ವಲಸೆ ಹೋದರು ಭಾರತೀಯ ಸಂಪ್ರದಾಯ ನಂಬಿಕೆಯೊಂದಿಗೆ ಬದುಕುತ್ತಿರುತ್ತಾರೆ.

ಇವರಂತೆ ಗಂಡ ಮಗನನ್ನು ಬಿಟ್ಟು ಬಂದ ಚಂದ್ರಿಕ ದೇಶಭಿಮಾನವಿರುವ ವ್ಯಕ್ತಿತ್ವ ಇವಳದು. "ವಿದೇಶಕ್ಕೆ ಬಂದ ಅನೇಕ ಭಾರತೀಯರು ತಮ್ಮ ದೇಶವನ್ನು ಮರೆತುಬಿಡುತ್ತಾರೆ. ದೇಶವನ್ನು ಇಲ್ಲಿಯವರು ಅವಹೇಳನಕ್ಕೆ ಗುರಿ ಮಾಡುತ್ತಾರೆ ಅದು ಸಲ್ಲದು"(ಅದೇ, ಪು.೯೩) ಎನ್ನುವ ಪ್ರವೃತ್ತಿ ಇವಳದಾಗಿತ್ತು. ಇಲ್ಲಿ ಒಂದು ಅಂಶವನ್ನು ಗಮನಿಸಬಹುದು. ಚಂದ್ರಿಕ ಪೈ, ಮಂಗಸೂಳೆಯವರು ಸಂಸಾರವನ್ನು ಬಿಟ್ಟು ವಲಸೆ ಬಂದು ತಮ್ಮ ಓದು ಮುಗಿಸಿ ಹೋಗುವ ಉದ್ದೇಶವಿಟ್ಟುಕೊಂಡೆ ಬಂದವರು. ಇವರಲ್ಲಿನ ದೇಶಭಿಮಾನ ಮತ್ತೆ ಹೋಗಬೇಕೆನ್ನುವ ಹಂಬಲ. ನಾಗರಾಜನ ಒಂಟಿ ಜೀವನದಲ್ಲಿ ಕಾಣುವುದಿಲ್ಲ. ಮೊದಲೇ ಎಲ್ಲರನ್ನು ಕಳೆದುಕೊಂಡವನಿಗೆ ಮತ್ತಷ್ಟು ಭಾರತ ಬೇಸರ ತರಿಸಿತ್ತು. ಇವನಂತೆ ಶಿಕ್ಷಣಕ್ಕಾಗಿ ಮೊದಲೇ ಬಂದ ನಾಗರಾಜನ ಸ್ನೇಹಿತರಾದ ಪ್ರಸನ್ನ, ಪಟ್ಟಾಭಿಯರ ವಿಲಾಸಿ ಜೀವನವೇ ನಾಗರಾಜನನ್ನು ವಿದೇಶಕ್ಕೆ ಬರುವಂತೆ ಪ್ರೇರೇಪಿಸಿತ್ತು.

ಇಲ್ಲಿ ನಾಗರಾಜನ ವಿದೇಶಿ ವಲಸೆ ಮತ್ತು ಉನ್ನತ ಶಿಕ್ಷಣವೇ ಆಗಿದ್ದರೂ ಇದಕ್ಕೆ ಇನ್ನೊಂದು ಕಾರಣ ಐಷಾರಾಮಿ ಜೀವನ ಮತ್ತು ಉತ್ತಮ ಜೀವನ ಸೌಲಭ್ಯಗಳ ಆಕಾಂಕ್ಷೆಗಳೇ ಆಗಿತ್ತು. ಇನ್ನು ಹೆಲೆನ್ ಮತ್ತು ಪ್ರಸಾದನ ಮಗನಾದ ಕುಮಾರನು ತಂದೆಯ ಒತ್ತಾಯದಿಂದ ಇಂಡಿಯಾ ಪ್ರವಾಸ ಕೈಗೊಳ್ಳುತ್ತಾನೆ. ಮೊದಲೇ ಅಮೆರಿಕಾದಲ್ಲಿ ಜನಿಸಿದ ಕುಮಾರನಿಗೆ ಇಂಡಿಯಾದ ಹೊಸ ದೇಶಕ್ಕೆ ಕಾಲಿಡುವುದು ಅವನಿಗೆ ಬೇಡವಾಗಿತ್ತು. ಬೊಂಬಾಯಿ ಹತ್ತಿರ ಬರುತ್ತಿದ್ದಾಗೆ ಹೊರಡುವಾಗಿನ ಉತ್ಸಾಹ ಈಗ ಉಳಿದಿಲ್ಲ ಎಂದು ತೊಳಲಾಡುವ ಕುಮಾರನಿಗೆ "ಇಂಡಿಯಾಕ್ಕೆ ಬಂದು ತಲುಪುವ ಮೊದಲೇ ಇಂಡಿಯಾ ಬೇಸರವಾಯಿತೇ"(ಅದೇ, ಪು.೯೩) ಎನ್ನುವ ಮಾತು ಕುಮಾರನ ಮನೋಭಾವವನ್ನು ಅಭಿವ್ಯಕ್ತಿಸುತ್ತಾನೆ.

ಹೀಗೆ ಇಂಡಿಯಾದಿಂದ ಅಮೆರಿಕಾಕ್ಕೆ ಹೋದ ಇಲ್ಲಿನ ಅನೇಕ ಪಾತ್ರಗಳು ಅಭಿವ್ಯಕ್ತಿಯ ಭಿನ್ನತೆಯನ್ನು ಲೇಖಕರು ಚಿತ್ರಿಸಿದ್ದಾರೆ. ಇಲ್ಲಿ ಬಂದ ಎಲ್ಲ ಪಾತ್ರಗಳ ವಲಸೆ ಶಿಕ್ಷಣಕ್ಕಾಗಿಯಾದರೂ ಅವರ ಉದ್ದೇಶ, ಅನುಭವಗಳು ಭಿನ್ನವಾಗಿವೆ.

ಹೀಗೆ ನಾಗರಾಜ, ಚಂದ್ರಿಕಾ, ಕುಮಾರ, ಪ್ರಸನ್ನ, ಮಂಗಸೂಳೆಯಂತವರು ಅಮೆರಿಕಾದಿಂದ ಇಂಡಿಯಾಕ್ಕೆ ತೆರಳುತ್ತಿದ್ದ ವಿಮಾನ ಅಪಘಾತಕ್ಕಿಡಾಗಿ ಅಲ್ಲಿಯೇ ಹತ್ತಿರದ ಬ್ಯಾಂಕಾಕ್ ಆಸ್ಪತ್ರೆಯಲ್ಲಿ ಗಾಯಗೊಂಡವರನ್ನು ಸೇರಿಸಲಾಗಿತ್ತು. ಅದರಲ್ಲಿ ನಾಗರಾಜನು ಒಬ್ಬನಾಗಿದ್ದನು.

"ನನ್ನದಲ್ಲ ಅಮೇರಿಕವನ್ನು ನನ್ನದಾಗಿಸಿಕೊಂಡು ಅಲ್ಲಿ ಸುಖಿ ಎಂದೆ ನೀನು ಇಲ್ಲಿಯವನಲ್ಲ ಇಲ್ಲಿರುವ ಯೋಗ್ಯತೆ ನಿನ್ನದಲ್ಲ ಎಂದು ಅಲ್ಲಿಂದ ಹೊರತಳ್ಳಿದಾಗ ನನ್ನದೆಂಬ ನಾಡಿಗೆ ಹಿಂದಿರುಗ ಬೇಕೆಂದರೆ ನನ್ನದಲ್ಲದ ನನಗೆ ಬೇಕಾಗಿಯೂ ಇರದ ಈ ಬ್ಯಾಂಕಾಕನಲ್ಲಿ ಒಂದು ಆಸ್ಪತ್ರೆಯಲ್ಲಿ ಬಂದು ಬಿದ್ದುಕೊಳ್ಳುವಂತಾಯಿತೆ? ಅಲ್ಲಿಯವರು ನನ್ನನ್ನು ತಮ್ಮವನನ್ನಾಗಿ ನೋಡಿಕೊಳ್ಳಲಿಲ್ಲ. ಇವ ತಮ್ಮವ ಎಂದುಕೊಳ್ಳವ ಯಾರು ನನ್ನ ನಾಡಿನಲ್ಲಿ ಉಳಿಯಲಿಲ್ಲ. ಹಾಗೆಂದು ಅದೂ ಅಲ್ಲದ ಇದೂ ಅಲ್ಲದ ಈ ಪ್ರಪಂಚದ ಈ ಬೇರೊಂದು ಮೂಲೆಯಲ್ಲಿ ನನ್ನನ್ನು ತಂದು ನನ್ನ ಅದೃಷ್ಟ ಎಸೆದೆಯೇ.?"(ಅದೇ, ಪು.೨೧೨) ಎಂದು ದುಃಖಪಡುತ್ತಾನೆ.

ಕೊನೆಗೆ ಯಾರದೂ ಆರೈಕೆಯಲ್ಲಿ ಯಾವುದೊ ಊರಲ್ಲಿ ಬಿದ್ದಾಗ ತನ್ನ ತಂದೆಯ ಮಾತುಗಳು, ತನ್ನ ಊರು ಎಲ್ಲವೂ ನೆನಪಿಸಿಕೊಳ್ಳುತ್ತಾನೆ. "ತನ್ನತನವನ್ನು ಮರೆತು ಇನ್ನೊಬ್ಬರಂತೆ ಬಾಳಬೇಕೆಂದವನ ಬಾಳುವೆ ಒಂದು ನಟನೆಯಾಗುತ್ತದೆ. ಅಂತಹ ನಟನೆ ಕೊನೆಯಲ್ಲಿ ವ್ಯಕ್ತಿತ್ವವೇ ಹಾಳು ಮಾಡಿಬಿಡುತ್ತದೆ."(ಅದೇ, ಪು.೨೧೪) ಎಂದಿದ್ದ. ಮಂಗಸೂಳೆಯ ಮಾತು ತ್ರಿಶಂಕು ಸ್ಥಿತಿಯಲ್ಲಿರುವವ ಸ್ಥಿತಿಯನ್ನು ಸೂಚಿಸುತ್ತದೆ. ಇಡೀ ಕತೆ ಚಲನೆಯಲ್ಲಿ ವಲಸೆಯ ಹಿನ್ನೆಲೆ ಪರಿಣಾಮಗಳನ್ನು ಅಭಿವ್ಯಕ್ತಪಡಿಸುತ್ತಾ ಅಮೇರಿಕಾಗೆ ಹೋಗಿ ಮತ್ತೆ ವಾಪಸ್ಸು ಬರುವ ಕಥಾನಾಯಕನ ತಿರುವಲಸೆ ಮತ್ತು ಶಿಕ್ಷಣ ಉದ್ಯೋಗಕ್ಕಾಗಿ ವಲಸೆ ಹೋದ ಇನ್ನಿತರ ಪಾತ್ರಗಳ ಸಂವೇದನೆಗಳನ್ನು ಚಿತ್ರಿಸುತ್ತದೆ.

ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯು ವ್ಯಕ್ತಿ ವಲಸೆಗೆ ಒಂದು ಉದಾಹರಣೆಯಾಗಿದೆ, ಇಲ್ಲಿ ಬರುವ ಕಥಾನಾಯಕ ಶ್ರೇಯಾಂಸ್ ತಾನು ಪ್ರೀತಿಸಿದ ತನ್ನ ಊರಿನ ರೇವತಿ ಎಂಬ ಹುಡುಗಿಯೊಂದಿಗೆ ಮದುವೆಯಾಗಬೇಕೆಂಬ ಹಠದಿಂದ ತಂದೆಯೊಂದಿಗೆ ಜಗಳವಾಡಿ ಮನಶಾಂತಿಯನ್ನು ಹುಡುಕಿಕೊಂಡು ತನ್ನ ಹಳ್ಳಿಯನ್ನು ಬಿಟ್ಟು ಮುಂಬೈಗೆ ವಲಸೆ ಹೋಗುತ್ತಾನೆ, ಕಾಲನಂತರ ತಾನು ಪ್ರೀತಿಸಿದ ಹುಡುಗಿಯನ್ನು ಮರೆತು ಮುಂಬೈಯಲ್ಲಿನ ಒಬ್ಬ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಿ ಅಲ್ಲಿ ನೆಲೆಯಾಗುತ್ತಾನೆ, ಆದರೆ ತಂದೆಯ ಮರಣದ ವಿಷಯ ತಿಳಿದು ಶವ ಸಂಸ್ಕಾರಕ್ಕೆಂದು ಬಂದು ಮತ್ತೇ ತನ್ನ ಹಳ್ಳಿಯಲ್ಲಿಯೇ ನೆಲೆಯಾಗುವ ಒಂದು ತಿರು ವಲಸೆಯನ್ನು ಈ ಕಥೆ ಸೂಚಿಸುತ್ತದೆ.

ಈ ಹೋಗಿ ಬರುವ ಹಂತದಲ್ಲಿಯೇ ಒಂದು ವಲಸೆ ಪ್ರಕ್ರಿಯೆ ನಡೆಯುತ್ತದೆ. ತನ್ನ ಹಳ್ಳಿಯಿಂದ ತಂದೆಯೊಂದಿಗೆ ಜಗಳವಾಡಿ ಹಠದಿಂದ ಮುಂಬೈಗೆ ಹೊರಡುವುದಕ್ಕೆ ಶ್ರೇಯಾಂಸ್ ಮನಸ್ಸುಗಳು ಕಾರಣವಾಗುತ್ತದೆ. ಹದಿಹರೆಯದ ಇಪ್ಪತ್ತನೆಯ ವಯಸ್ಸಿನಲ್ಲಿನ ಹಠ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾಗಬೇಕೆಂಬ ಪ್ರೀತಿ, ತಂದೆಯ ಮೇಲೂ ಕೈ ಎತ್ತುವಂತೆ ಮಾಡುತ್ತದೆ.

ಇನ್ನು ಬರಲೇಬಾರದು ಎಂದು ಹೊರಡುವ ಶ್ರೇಯಾಂಸ್ ತಂದೆ ಸತ್ತಾಗ ಕೊನೆಯ ಸಾರಿ ತನ್ನ ಕರ್ಮಗಳನ್ನು ಮುಗಿಸಬೇಕೆಂದು ಅನಿವಾರ್ಯತೆಯಿಂದಲೇ ಬಂದವನಿಗೆ ತಾಯಿ ತಂಗಿ ಊರಿನ ಸಂಬಂಧಗಳು ಮತ್ತೆ ಗಟ್ಟಿಗೊಳ್ಳುವಂತೆ ಮಾಡುತ್ತದೆ ಹಾಗೂ ಮತ್ತೆ ತಿರುಗಿ ಮುಂಬೈಗೆ ಹೋಗದಂತೆ ಅಚಲವಾಗುವ ಭಾರತೀಯ ರಕ್ತಸಂಬಂಧದ ಸೂಕ್ಷ್ಮತೆಯನ್ನು ಈ ಕೃತಿ ಎತ್ತಿ ಹಿಡಿಯುತ್ತವೆ.

ಮುಂಬಯಿನ ಪರಿಸರಕ್ಕೂ ತನ್ನ ಹಳ್ಳಿಯ ಜೀವನದ ಪರಿಸರಕ್ಕೂ ಇರುವ ಜೀವನ ಶೈಲಿಯ ಭಿನ್ನತೆ ಶ್ರೇಯಾಂಸನನ್ನು ಅತಂತ್ರ ಸ್ಥಿತಿಗೆ ತಳ್ಳುವಂತೆ ಮಾಡುತ್ತದೆ ಉದಾಹರಣೆಗೆ ಈ ಕತೆಯಲ್ಲಿ ಬರುವ ಒಂದು ಸಂದರ್ಭವನ್ನು ನೋಡುವುದಾದರೆ "ಮುಂಬಯಿ ಹೊರಜಗತ್ತಿನ ಸಂಕೀರ್ಣತೆಯ ಜೊತೆಗೆ ಗುದ್ದಾಡುವ ತನಕ ದಿನದ ಇಡೀ ಸಮಯ ಹೋಗಿ ಬಿಡುವುದು. ಆದರೆ ಇಲ್ಲಿ ಕಣ್ಣು ತೆರೆದು ರಾತ್ರಿ ಕಣ್ಣು ಮುಚ್ಚುವವರೆಗೆ ನಾನಾ ತರಹದ ಮಾನವೀಯ ಮನಸ್ಸುಗಳ ಪರಸ್ಪರ ತಾಕಲಾಟ ಉಂಟಾಗುತ್ತದೆ. ಕೆಲವೊಮ್ಮೆ ತನಗೆ ಗೊತ್ತಿಲ್ಲದೆಯೇ ತಾನು ಬಯಸದೆಯೇ ಸಾಕಪ್ಪ ಮುಂಬಯಿ ಹೋಗಿಬಿಡಬೇಕು ಎಂದು ಅನಿಸುತ್ತದೆ."(ಶಾಂತಿನಾಥ ದೇಸಾಯಿ, ೨೦೦೨, ಪು.೧೬೦) ಎಂಬ ಶ್ರೇಯಾಂಸನ ಮಾತುಗಳು ಶ್ರೇಯಾಂಸನ ಅತಂತ್ರವನ್ನು ಸೂಚಿಸುತ್ತವೆ, "ಎಲ್ಲಾರೂ ಗುಡಚಾಪೆ ಕಟ್ಟಿಕೊಂಡು ಹೋದರ ಏನು ಬಂದಾಂಗಾತು? ನಾನೇನು ಆ ಲಮಾಣಿರು ಇರ್ತಾರಲ್ಲ ಅಂಥ ಭಟಾಕ್ಯ ಜನರೇನು ನಾನಂತೂ ಇಲ್ಲೇ ಸಾಯಕಿ"(ಅದೇ, ಪು.೨೧೦) ಎನ್ನುವ ಮನಸ್ಥಿತಿಯವಳೂ. ಹಾಗೆಯೇ ಶ್ರೇಯಾಂಸ್‌ನ ಮಗಳು ಕಲ್ಪನಾಳು ಸಹ ಅದು ಮುಂಬಯಿಯಲ್ಲಿ ಹುಟ್ಟಿದ ಬೀಜ ಹಾಗಾಗಿ ಅವಳ ಮನಸ್ಥಿತಿಯೂ ಸಹ ಶ್ರೇಯಾಂಸ್‌ಗಿಂತ ಭಿನ್ನವಾದುದು. ಮುಂಬೈಯಲ್ಲಿ ಹುಟ್ಟಿ ಬೆಳೆದ ಕಲ್ಪನಾಳಗೂ ಹಾಗೂ ಹಳ್ಳಿ ಮತ್ತು ನಗರ ಜೀವನವನ್ನು ಅನುಭವಿಸಿದ ಶ್ರೇಯಾಂಸನಿಗೂ ಇರುವ ವ್ಯತ್ಯಾಸವನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ.

"ನಾನು ಬೆಳೆದ ರೀತಿ ಬೇರೆ, ನೀನು ಬೆಳೆದ ರೀತಿ ಬೇರೆ, ನಾನು ಹುಟ್ಟಿಬಂದ ಬೀಜ ಬೇರೆ, ನೀನು ಹುಟ್ಟಿಬಂದ ಬೀಜ ಬೇರೆ. ನನಗೆ ಯಾವಾಗಲೂ ನನ್ನೊಳಗಿನ ಏನೇನೋ ಅಸ್ಪಷ್ಟ, ಗೂಢ, ಕಪ್ಪುಶಕ್ತಿಗಳೊಡನೆ ಹೊರಾಡುತ್ತಲೇ ಜೀವನ ನಡೆಸಬೇಕಾಗುತ್ತದೆ. ನನಗೆ ಯಾವುದು ಅಷ್ಟು ಸುಲಭ ಸ್ಪಷ್ಟ ಎಂದು ತೋರುವುದಿಲ್ಲ. ನಿನಗೆ ಮಾತ್ರ ಎಲ್ಲವೂ ಸ್ಪಟಿಕದಂತೆ ನಿಚ್ಚಳ– ಕಲ್ಪನಾ"(ಅದೇ, ಪು.೧೭೧) ಎಂದು ಹೇಳುವಾಗ ಕೃಷ್ಣಪುರದ ಹಳ್ಳಿಯಲ್ಲಿ ಹುಟ್ಟಿದ ಶ್ರೇಯಾಂಸ್ ಕಾರಣಾಂತರದಿಂದ ಮುಂಬೈಗೆ ಹೋಗಿ ಸಂಪೂರ್ಣವಾಗಿ ಬದಲಾದ ವ್ಯಕ್ತಿಯಾಗಿರುತ್ತಾನೆ. ಹಾಗೆಯೆ ಕಲ್ಪನಾ ಮುಂಬೈಯಲ್ಲಿ ಹುಟ್ಟಿ ಅಲ್ಲೇ ಬೆಳೆದ ಮನೋದೃಷ್ಟಿಕೋನ ತಂದೆಗಿಂತ ಭಿನ್ನವಾಗಿರುತ್ತೆದೆ ಮತ್ತು ಸ್ಪಷ್ಟವಾಗಿರುತ್ತದೆ.

ಶ್ರೇಯಾಂಸ್ ಮನೆಬಿಟ್ಟು ಮುಂಬೈಗೆ ಹೋಗಿ ಇಪ್ಪತ್ತು ವರ್ಷಗಳ ನಂತರ ತನ್ನ ಹಳ್ಳಿಗೆ ಬಂದಾಗ ಅವನಲ್ಲಿ ಮುಂಬೈ ನಗರದ ಪರಿಣಾಮದಿಂದ ಅನೇಕ ಬದಲಾವಣೆಗಳು ಉಂಟಾಗಿರುತ್ತವೆ, ಅವನಲ್ಲಿ ಮಾನಸಿಕ ಸ್ವಾತಂತ್ರ್ಯದ ಜೊತೆಗೆ ವಿಚಾರವಂತಿಗೆಯನ್ನು ಸಹ ಬೆಳೆಸಿಕೊಂಡಿರುತ್ತಾನೆ. ಉದಾಹರಣೆಗೆ ತನ್ನ ಹೆಂಡತಿ ಲಿಝಿಯಾ ತನ್ನ ಹಳ್ಳಿಗೆ ಬರಲು ನಿರಾಕರಿಸಿ ದಾಗ ಅವಳ ಸ್ವಾತಂತ್ರ್ಯದ ಆಯ್ಕೆಯನ್ನು ಅವಳಿಗೆ ಬಿಡುತ್ತಾನೆ. ವೈಯಕ್ತಿಕ ಸ್ವಾತಂತ್ರ್ಯಕ್ಕೆ ಬೆಲೆಕೊಡುತ್ತಾನೆ. ಜೊತೆಗೆ ಹಳ್ಳಿಯಲ್ಲಿ ತನ್ನ ಹೊಲ ಪಾಲಿನ ಸಮಸ್ಯೆಯನ್ನು ವಿಚಾರವಂತಿಕೆಯಿಂದ ಬಿಡಿಸಿಕೊಳ್ಳುತ್ತಾನೆ. ಇವೆಲ್ಲವನ್ನು ಶ್ರೇಯಾಂಸನು ಮುಂಬೈಯಿಂದ ಕಲಿತ ಪಾಠವಾಗಿರುತ್ತದೆ. ಆದರೂ ತನ್ನ ಮೂಲ ಬೇರು ಹಳ್ಳಿಯಾಗಿದ್ದರಿಂದ ಅರ್ಧ ಆಧುನಿಕ ಅರ್ಧ ಸಾಂಪ್ರದಾಯಿಕ ಶೈಲಿಯಲ್ಲಿ ಮಾತನಾಡುತ್ತಾ ಬದುಕುತ್ತಾನೆ. ಮುಂಬೈಯಂತಹ ಮಹಾ ನಗರದಲ್ಲಿ ಇಪ್ಪತ್ತು ವರ್ಷ ಕಳೆದಿದ್ದರೂ ತನ್ನ ಹಳ್ಳಿಯ ಸಂಪ್ರಾದಾಯದಲ್ಲಿ ಬೆಳೆದ ಕಾರಣ ತಮ್ಮೆದೆಯ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ಎಂಬ ಮಾತು ತನಗೆ ಗೊತ್ತಿಲ್ಲದೆ ಬಂದ ಕೂಡಲೆ ತಾನು ಈ ಊರಿನಲ್ಲಿರುವುದೆ ತಪ್ಪು ಮುಂಬಯಿಯ ವ್ಯಕ್ತಿ ಸ್ವಾತಂತ್ರ್ಯದ ವಿಚಾರ ಸ್ವಾತಂತ್ರ್ಯದ ಸುರಕ್ಷಿತ ಜಗತ್ತಿಗೆ ಮರಳಿ ಹೋಗಬೇಕು"(ಅದೇ, ಪು.೧೬೦) ಎಂದೆನಿಸುತ್ತದೆ. ಹೀಗೆ "ಈ ಕತೆಯು ವೃತ್ತಿಯ ವೈಯಕ್ತಿಕತೆಗೂ ಸಾಂಪ್ರಾದಾಯಿಕ ಇರುವ ಸಂಬಂಧಗಳನ್ನು ಶೋಧಿಸುತ್ತದೆ"(ಅದೇ, ಮುನ್ನುಡಿ) ಎಂದು ಹೇಳುವ ವೈ.ಎನ್.ಕೆ.ರವರ ಬೆನ್ನುಡಿಯಲ್ಲಿ ಹೇಳಿರುವ ಮಾತು ಸ್ಪಷ್ಟವಾಗಿದೆ

ಕೊನೆಗೂ ಮುಂಬಯಿ ಶ್ರೇಯಾಂಸನಿಗೆ "ನನಗ ಅದು ನಮ್ಮದಂತ ಅನಿಸ್ತದೆ–ನನ್ನದಂತ ಇನ್ನು ಅನಿಸೋದಿಲ್ಲ"(ಅದೇ, ಪು.೩೧) ಎಂದು ವಿಠಲನಿಗೆ ಹೇಳುವ ಮಾತು ತನ್ನ ಬೀಜ ಕೃಷ್ಣಪುರದಲ್ಲಿ ಇದೆ ಎಂದು ನಾನು ಇಂದು ಇಲ್ಲೇ ಬದುಕಬೇಕು ಎಂಬ ದೃಢ ನಿರ್ಧಾರ ತೆಗೆದುಕೊಳ್ಳುತ್ತಾನೆ. ಇದಕ್ಕೆ ಪ್ರತಿಯಾಗಿ ಕಲ್ಪನಾಳು ಸಹ "ಡ್ಯಾಡಿ ನೀ ಇಲ್ಲೇ ಇರಬೇಕು ಇದೇ ನಿನ್ನ ಕರ್ಮಭೂಮಿ"(ಅದೇ, ಪು.೨೧೧) ಎಂದು ದೃಢವಾಗಿ ಹೇಳುತ್ತಾಳೆ. ಇದಕ್ಕೆ ಲಿಝಿಯ ಸಹ ನನ್ನ ಕರ್ಮಭೂಮಿ ಮುಂಬಯಿ. ಆದರೆ ನಾನು ಈಗಲೇ ಬರಲು ಸಾಧ್ಯವಿಲ್ಲ. ನನಗೆ ಒಳಗಿನಿಂದ ಅನಿಸಿದಾಗ ನನ್ನ ದೇವರು ನನಗೆ ಹೋಗೆಂದು ಹೇಳಿದಾಗ ನಾ ಬರುವೆ ಎಂದು ತನ್ನ ಅಭಿಪ್ರಾಯವನ್ನು ತಿಳಿಸುತ್ತಾಳೆ.

ಒಟ್ಟಾರೆಯಾಗಿ ಹೇಳುವುದದರೆ ಜಿ.ಎಸ್,ಅಮೂರ್‌ರವರು ಹೇಳುವಾಗೆ ಶ್ರೇಯಾಂಸ್ ಜಮೀನ್ದಾರಿ ಮನೆತನದಲ್ಲಿ ತನ್ನ ಪರಿಸರದಿಂದ ದೂರ ಹೋಗಿ ಹೊಸ ವೈಚಾರಿಕತೆಯನ್ನು ಮೈಗೂಡಿಸಿಕೊಂಡು ಮತ್ತೆ ತನ್ನ ಪರಿಸರಕ್ಕೆ ಮರಳಿ ಆ ಪರಿಸರದಲ್ಲಿ ಕ್ರಿಯೆ ಹಾಗೂ ಮಾನವೀಯ ಸಂಬಂಧದ ಮೂಲಕ ಗಟ್ಟಿಯಾಗಿರಿಸಲು ಪ್ರಯತ್ನಿಸಿ ಹಾತೋರಿಯುತ್ತಾನೆ.

ಹೀಗೆ ತಂದೆ, ತಾಯಿ, ವಿಧವೆ, ಅಕ್ಕ ಎಲ್ಲರನ್ನು ತೊರೆದು ಮುಂಬಯಿಗೆ ವಲಸೆ ಹೋಗಿ ನೆಲೆಯಾದರೂ ತಾನು ಹುಟ್ಟಿ ಬೆಳೆದ ಊರು ತನ್ನ ರಕ್ತಸಂಬಂಧಿ ಸಂಪ್ರದಾಯಗಳು ಶ್ರೇಯಾಂಸ್‌ನನ್ನು ಬಿಟ್ಟು ಹೋಗದೆ ತಿರುಗಿ ಮತ್ತೆ ಅದೇ ಜಾಗಕ್ಕೆ ಬರುವ ಮೂಲಕ ಕತೆ ಕೊನೆಗೊಳ್ಳುತ್ತದೆ. ನಗರದಲ್ಲಿನ ವ್ಯಕ್ತಿ ಸ್ವಾತಂತ್ರ್ಯಕ್ಕಿಂತ ರಕ್ತ ಸಂಬಂಧದ ಸಾಂಪ್ರದಾಯ ನೆಲೆಗಟ್ಟಿನಲ್ಲಿ ಬೆಳೆದ ರೀತಿಯನ್ನು ಮರೆಯಾದೆ ಮತ್ತೇ ತನ್ನ ಮೂಲ ನೆಲೆಗೆ ಬಂದು ಸೇರಿಕೊಳ್ಳುವಲ್ಲಿಗೆ ಕಥೆ ಕೊನೆಗೊಳ್ಳುತ್ತದೆ. ಶ್ರೇಯಾಂಸ್ ಮೂಲ ನೆಲೆಗೆ ಬೆಲೆಕೊಟ್ಟು ಕೃಷ್ಣಪುರದಲ್ಲೇ ಉಳಿದರೆ ಹೆಂಡತಿ ಆಯ್ಕೆಯೂ ತನ್ನ ಮೂಲ ನೆಲೆಯಾದ ಮುಂಬೈಯಲ್ಲಿ ಉಳಿದುಕೊಳ್ಳುವುದು. ವಲಸೆಯನ್ನು ನಕರಾತ್ಮಕವಾಗಿ ನೋಡುವ ಧೋರಣೆ ಸೂಕ್ಷ್ಮವಾಗಿ ಕಂಡುಬರುತ್ತದೆ. ವಲಸೆಯ ಕಾರಣ ಇಲ್ಲಿ ಅಷ್ಟಾಗಿ ಹೆಚ್ಚಾಗಿ ಬಲವಾದ ಕಾರಣವಲ್ಲದಿದ್ದರೂ ಅದರಿಂದಾಗುವ ಪರಿಣಾಮ ಭಿನ್ನವಾಗಿ ಕಾಣುತ್ತದೆ ಮತ್ತು ವ್ಯಕ್ತಿಯ ಮೇಲೆ ಹೆಚ್ಚು ಪರಿಣಮಿಸುತ್ತದೆ ಹೀಗೆ ಕತೆ ವ್ಯಕ್ತಿ ವಲಸೆಯ ಪ್ರೇರಣೆ ಪರಿಣಾಮಗಳನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ.

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯು ಇದೊಂದು ವ್ಯಕ್ತಿ ವಲಸೆಗೆ ಸಂಬಂಧಿಸಿದೆ ವ್ಯಕ್ತಿ ಒಬ್ಬ ವಲಸೆ ಹೋದ ನಂತರ ಉಂಟಾಗುವ ಭಿನ್ನ ಪರಿಣಾಮಗಳನ್ನು ದಾಖಲಿಸುವ ನಿಟ್ಟಿನಲ್ಲಿ ಕಥೆ ಮುಂದುವರೆದಿದೆ. ಇದು ಮಾನವ ನಿರ್ಮಿತ ಅನಿವಾರ್ಯ ದಾಳಿ ಈ ದಾಳಿಯನ್ನು ನೇರ ಮಾನವ ಎನ್ನದೇ ಹೋದರೂ ಅದು ವಸಾಹತು ಸಂದರ್ಭದಂತಹ ಅನಪೇಕ್ಷಿತ ಹಾಗೂ ಪರೋಕ್ಷ ನಿಲುವಿನಿಂದ ರೂಪಿತಗೊಂಡ ಚಾರಿತ್ರಿಕ ಘಟನೆ. ಹಾಗಾಗಿ ಒದಗಿಬಂದ ಶಿಕ್ಷಣ ವ್ಯವಸ್ಥೆಯ ಪರಿಣಾಮವಾಗಿ ಹಳ್ಳಿ ಬಿಟ್ಟು ಪಟ್ಟಣ ಸೇರುವ ಅನಿವಾರ್ಯತೆ ಸೃಷ್ಟಿಯಾಗುತ್ತದೆ.

ಈ ಕಾದಂಬರಿಯಲ್ಲಿ ಮೂರು ತಲೆಮಾರುಗಳ ನಡುವಿನ ಸಾಮಾಜಿಕ ಸ್ಥಿತ್ಯಂತರಗಳು ಹಾಗೂ ಇಂಗ್ಲೀಷ್ ಶಿಕ್ಷಣದ ಪ್ರಭಾವ ಅಂದಿನ ಬ್ರಾಹ್ಮಣ ಸಮುದಾಯದವರ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಸೂಕ್ಷ್ಮವಾಗಿ ಸೆರೆ ಹಿಡಿದಿದ್ದಾರೆ. ಜೊತೆಗೆ ಪ್ರಸ್ತುತ ಈ ಅಧ್ಯಯನಕ್ಕೆ ಬೇಕಾದಂತಹ ವಲಸೆ ಪ್ರಕ್ರಿಯೆ ಕುರಿತಂತೆ ಮರಳಿ ಮಣ್ಣಿಗೆ ಕತೆಯ ಶೀರ್ಷಿಕೆಯಲ್ಲಿ ಅಡಗಿರುವುದನ್ನು ಸೂಕ್ಷ್ಮವಾಗಿ ಗ್ರಹಿಸಬಹುದಾಗಿದೆ.

ಮೂರು ತಲೆಮಾರುಗಳ ಕೌಟುಂಬಿಕ ಕಥನದಲ್ಲಿ ಮೊದಲನೆಯ ತಲೆಮಾರಿನ ರಾಮ ಐತಳನ ನಂತರ ಬರುವ ಲಚ್ಚ ಮತ್ತು ಲಚ್ಚನ ಮಗ ರಾಮ ಜೀವನ ಶಿಕ್ಷಣಕ್ಕಾಗಿ ಹಳ್ಳಿಯಿಂದ ಪಟ್ಟಣಕ್ಕೆ ಹೊರಡುವ ಸಂದರ್ಭ ಉಂಟಾಗುತ್ತದೆ. ಆದರೆ ಇವರಿಬ್ಬರ ಉದ್ದೇಶ ಒಂದೇ ಆಗಿದ್ದರೂ ಅವರು ಹೊರಡುವ ಕಾಲ, ಸಂದರ್ಭ ಬೇರೆಯಾದದ್ದು. ಜೊತೆಗೆ ಪರಿಣಾಮವೂ ಭಿನ್ನವಾಗಿಯೇ ಉಂಟಾಗುತ್ತದೆ.

ಲೇಖಕರೇ ಈ ಕಾದಂಬರಿಯ ಕುರಿತು ಒಂದು ಕಡೆ ಹೇಳುತ್ತಾರೆ. "ಮೊದಲನೆಯ ತಲೆಮಾರಿನಲ್ಲಿ ಬಡತನ ಸಂಪ್ರದಾಯ ಆಚಾರ-ವಿಚಾರಗಳೇ ಒಳಗೊಂಡಿದ್ದರೆ, ಎರಡನೆಯ ತಲೆಮಾರಿನಲ್ಲಿ ಜನಕ್ಕೆ ಇಂಗ್ಲೀಷ್ ವಿದ್ಯಾಭ್ಯಾಸದ ಗಾಳಿ ಬೀಸುತ್ತದೆ. ಒಂದು ಗುಂಪು ಹಳ್ಳಿಯನ್ನು ಬಿಟ್ಟು ಪರವೂರುಗಳನ್ನು ಸೇರಿ ಹೋಟೆಲುಗಳನ್ನು ನಡೆಯಿಸಿ, ಊರಿಗೆ ಹಣ ತಂದು ಕೊಡುತ್ತಾರೆ. ಸಂಪತ್ತು ಹೆಚ್ಚುತ್ತ ಬರುತ್ತದೆ ದುಡ್ಡಿನ ಬಲದಿಂದ ಕೀಟಲೆಯಲ್ಲೆ ಸಂತೋಷಗೊಳ್ಳುವ ವ್ಯಕ್ತಿಗಳು ಊರಲ್ಲಿ ಉದಯಿಸುತ್ತಾರೆ. ಇನ್ನೊಂದು ಕಡೆ ಲಚ್ಚನಂಥ ವ್ಯಕ್ತಿಗಳು ಪೇಟೆಯ ಮೋಹಕ್ಕೆ ಬಲಿಬಿದ್ದು ಹೊಸ ಆವರಣದಲ್ಲಿ ತಲೆ ಕೇಡಿಸಿಕೊಳ್ಳುತ್ತಾರೆ. ಇವರ ಪಾಲಿಗೂ ನಿಸರ್ಗವು ಜಡ ವಸ್ತುವೇ. ಮೂರನೆಯ ತಲೆಮಾರಿನಲ್ಲಿ ಇಂಗ್ಲೀಷ್ ವಿದ್ಯಾಭ್ಯಾಸ ತೀರ ಸಾಮಾನ್ಯವಾಗುತ್ತದೆ. ಇವೆಲ್ಲ ರಾಮನಂಥ ಹುಡುಗನನ್ನು ಕುಣಿಸುತ್ತದೆ. ಕೊನೆಗೆ ನಿರಾಶೆಯಿಂದ ಆತ ಹಳ್ಳಿಗೆ ಮುಖ ಮಾಡುತ್ತಾನೆ. ಇಲ್ಲಿ ಸ್ತ್ರೀಯರ ಪಾಡು ಮೊದಲಿನಂತೆಯೇ ಉಳಿಯುತ್ತದೆ. ದುಡಿಯುವುದು, ದಣಿಯುವುದು ರಾಮನಾಥ ವ್ಯಕ್ತಿಗೆ ನಿಸರ್ಗವು ಹೆಚ್ಚಿನ ಸಂತೋಷದ ಪ್ರೇರಣೆಯಾಗುತ್ತದೆ. ಅದು ಹೊಸ ಸಂಸ್ಕಾರದ ಫಲ. ಹೀಗೆ ಜನರ ಆರ್ಥಿಕ ಜೀವನದ ಮಾನಸಿಕ ಜೀವನಗಳನ್ನು ಆ ಬರಹದಲ್ಲಿ ಚಿತ್ರಿಸಲೆತ್ನಿಸಿದೆ" (ಶಿವರಾಮ ಕಾರಂತ, ೧೯೯೧, ಪು.೨೨೨) ಎಂದು ತಮ್ಮ ಈ ಕಾದಂಬರಿಯ ಬರವಣಿಗೆಯ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಕಾದಂಬರಿಯ ಆಶಯಗಳನ್ನು ಬರೆಯುತ್ತಾರೆ. ನಾವು ಇಲ್ಲಿ ಗಮನಿಸುವಂತದ್ದು ಸಹ ಎರಡನೆಯ ತಲೆಮಾರಿನ ಲಚ್ಚನ ಬದುಕನ್ನು. ಲಚ್ಚನ ತಂದೆ ರಾಮ ಐತಾಳ ಪುರೋಹಿತತನವನ್ನೇ ತನ್ನ ಬದುಕಿನ ದಾರಿಯನ್ನಾಗಿ ಮಾಡಿಕೊಂಡು ಬದುಕುತ್ತಿದ್ದನು. ಅದೇ ರೀತಿ ರಾಮ ಐತಾಳನ ಹೆಂಡತಿ ಪಾರ್ವತಿ ಮತ್ತು ಗಂಡ ಸತ್ತ ನಂತರ ಅಣ್ಣನ ಮನೆಯಲ್ಲಿ ಉಳಿದಿದ್ದ ರಾಮನ ತಂಗಿ ಸರಸ್ವತಿ ಇಬ್ಬರು ಹೆಣ್ಣುಮಕ್ಕಳು ಜಮೀನಿನ ಕೆಲಸವನ್ನು ನೋಡುತ್ತ ಬದುಕುತ್ತಿದ್ದ ಕುಟುಂಬಕ್ಕೆ ಇದ್ದ ಕೊರತೆ ಮಕ್ಕಳಿಲ್ಲವೆಂಬುದು. ಹಾಗಾಗಿ ರಾಮ ಐತಾಳ ಪಡುಮುನ್ನೂರನ ಸತ್ಯಭಾಮೆಯನ್ನು ಎರಡನೆಯ ಮದುವೆಯಾಗುತ್ತಾನೆ. ಸತ್ಯಭಾಮೆಗೆ ಜನಿಸಿದ ಮಕ್ಕಳೇ ಲಚ್ಚ ಮತ್ತು ಸುಬ್ಬಿ ಇಬ್ಬರು ಮಕ್ಕಳು.

ತನ್ನಂತೆ ಬಡತನದಲ್ಲಿ ಪುರೋಹಿತನಂತೆ ಬದುಕಬಾರದೆಂಬ ಆಸೆಯಿಂದ ಮಗನನ್ನು ತನ್ನ ಸಂಪ್ರದಾಯಕ್ಕೆ ವಿರೋಧವಾಗಿ ಇಂಗ್ಲೀಷ್ ಶಾಲೆಗೆ ಕಳುಹಿಸುತ್ತಾನೆ. ಉನ್ನತ ಶಿಕ್ಷಣಕ್ಕಾಗಿ ಉಡುಪಿಗೆ ಹೋಗುವ ಲಚ್ಚ ಅಲ್ಲಿಯ ಸ್ನೇಹಿತರೊಂದಿಗೆ ಸೇರಿ ಹಲವು ಚಟಗಳಿಗೆ ಬಲಿಯಾಗಿ ಈ ಕಡೆ ತಂದೆಯಿಂದ ಇನ್ನೊಂದು ಕಡೆ ತಾತನಿಂದಲೂ ಹಣ ಸುಲಿಯುತ್ತಾನೆ. ಪೇಟೆಯ ಮೋಹಕ್ಕೆ ಬಲಿಬಿದ್ದು ತಂದೆ, ತಾಯಿ, ತಂಗಿ ಎನ್ನುವ ಯಾವ ಸಂಬಂಧಗಳಿಗೂ ಬೆಲೆ ಕೊಡದೇ ಹಾಳಾಗುತ್ತಾನೆ. ಅಷ್ಟೇ ಅಲ್ಲದೇ ಒಂದು ಹೆಣ್ಣಿನ ಸಹವಾಸವನ್ನು ಮಾಡುತ್ತಾನೆ. ಹೀಗಾಗಿ

ಮದುವೆಯಿಂದಾದರೂ ಸಂಭಾವಿತನಾದನೂ ಎಂದು ವಕೀಲ ವಾಸುದೇವಯ್ಯನವರ ಮಗಳು ನಾಗವೇಣಿಯನ್ನು ಸೊಸೆಯಾಗಿ ತರುತ್ತಾರೆ. ಅಷ್ಟೊತ್ತಿಗಾಗಲೇ ಇಂಗ್ಲೀಷ್ ಓದಿ ಹೆಸರು ತರುತ್ತಾನೆಂಬ ತಂದೆಯ ಹಂಬಲ ಅಳಿದಿತ್ತು. ಆದರೂ ಮದುವೆಯಾದ ನಂತರ ವಕೀಲನಾದ ಮಾವ, ಅಳಿಯನಿಗೆ ಎಫ್.ಎ.ವ್ಯಾಸಂಗಕ್ಕೆ ಮಂಗಳೂರಿಗೆ ಕಳುಹಿಸುತ್ತಾನೆ.

ಹೀಗೆ ನಾನಾ ಕಡೆ ಶಿಕ್ಷಣಕ್ಕಾಗಿ ಅಲೆದರೂ ಲಚ್ಚ ಸರಿಯಾಗಿ ಓದದೇ ಪಟ್ಟಣದ ವಿಲಾಸಿ ಜೀವನವನ್ನು ನಡೆಸಿ ಆಸ್ತಿಯನ್ನು ಕರಗಿಸುತ್ತಾನೆ. ಕೊನೆಗೆ ಹೆಂಡತಿ ನಾಗವೇಣಿ ಮಗ ರಾಮನ ಜೀವನ ಕಣ್ಣಿರಲ್ಲಿ ಕೈ ತೊಳೆಯುವಂತೆ ಮಾಡುತ್ತಾನೆ. ಲಚ್ಚ ಮನೆಯಲ್ಲಿ ಸ್ವಾರ್ಥವಿದೆ, ಮೋಹವಿದೆ ತನ್ನ ಸುಖಕ್ಕಾಗಿ ಹೆಂಡತಿ ಮಗನನನ್ನು ಸಹ ಲೆಕ್ಕಸದೇ ಬಿಟ್ಟು ಪಟ್ಟಣಕ್ಕೆ ಹೋಗಿ ತಿರುಗಿ ಬರಾದವನಾಗುತ್ತಾನೆ. ಆದರೆ ಇವನ ನಂತರದಲ್ಲಿ ಬಂದ ಮೂರನೆಯ ತಲೆಮಾರಿನ ರಾಮ ಬಡತನದಲ್ಲಿ ಬೆಳೆದು ತಾಯಿಯ ಆಸೆಯಂತೆ ತಾನು ಉನ್ನತ ಶಿಕ್ಷಣ ಕಲಿತು ಉದ್ಯೋಗದಲ್ಲಿ ಸೇರಬೇಕೆಂಬ ಆಸೆ ಇವನದಾಗಿತ್ತು. ಹಾಗಾಗಿ ರಾಮ, ಐತಾಳ, ಪಾರ್ವತಿ, ಸತ್ಯಭಾಮೆ, ಸರಸ್ವತಿ ಇವೆಲ್ಲರೂ ತೀರಿ ಹೋದ ಮೇಲೆ ನಾಗವೇಣಿ ಮಗನನ್ನು ಚೆನ್ನಾಗಿ ಓದಿಸಬೇಕೆಂಬ ಆಸೆಯಿಂದ ರಾಮನನ್ನು ಮದ್ರಾಸ್‌ಗೆ ಕಳುಹಿಸುತ್ತಾಳೆ. ಅಲ್ಲಿ ನಾಗವೇಣಿಯ ತಂಗಿ, ತಂಗಿಯ ಗಂಡನ ಸಹಾಯದಿಂದ ರಾಮ ಓದುತ್ತಾನೆ. ಹಣದ ವಿಷಯದಲ್ಲಿ ತುಂಬ ಸ್ವಾಭಿಮಾನಿಯಾದ ರಾಮ ಟ್ಯೂಶನ ಹೇಳಿ ತನ್ನ ಊಟದ ಖರ್ಚನ್ನು ಸಹ ಕೊಟ್ಟು ಉಳಿದದ್ದನ್ನು ತಾಯಿಯ ಮನೆ ನಿರ್ವಹಣೆ ಕಳುಹಿಸುತ್ತಾ ಬದುಕು ನಡೆಸಿದ ಭಿನ್ನ ವ್ಯಕ್ತಿತ್ವ ರಾಮನದಾಗುತ್ತದೆ.

ರಾಮ, ಲಚ್ಚನಷ್ಟೇ ಅಲ್ಲದೇ ಇಲ್ಲಿ ಬರುವ ಇನ್ನಿತರ ಪಾತ್ರಗಳು ನಿರೂದ್ಯೋಗದಿಂದ ನಗರೀಕರಣದ ಪ್ರಭಾವದಿಂದ ನಗರಗಳಿಗೆ ವಲಸೆ ಹೋಗಿ ಹೋಟೆಲ್‌ಗಳಲ್ಲಿ ದುಡಿದು ತನ್ನ ಕುಟುಂಬಕ್ಕೆ ಹಣ ಕಳುಹಿಸುತ್ತಿದ್ದ ಬ್ರಾಹ್ಮಣ ಕುಟುಂಬಗಳು ಸಹ ಇಲ್ಲಿ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ, ಶೀನನ ಮಗ ನರಸಿಂಹನನ್ನು ಬೆಂಗಳೂರಿಗೆ ಹೋಗಿ ಹೋಟೆಲ್ ಒಂದರಲ್ಲಿ ದುಡಿದು ತಂದೆಗೆ ಹಣ ಕಳುಹಿಸುತ್ತಿದ್ದರೆ ಸಂಪ್ರದಾಯವನ್ನು ಮೀರದ ಪುರೋಹಿತಶಾಹಿಯನ್ನು ನಂಬಿ ಬದುಕುತ್ತಿದ್ದ ರಾಮ ಐತಾಳ "ನಿನಗೆ ಮರುಳ ಶೀನ ಯಾವಾವ ಜಾತಿಯವರು ತಿಂದು ಬಿಟ್ಟ ಎಂಜಲನ್ನು ತೆಗೆಯಲಿಕ್ಕೆ, ದೇವರು ನಮಗೆ ಬ್ರಾಹ್ಮಣ ಜನ್ಮ ಕೊಟ್ಟಿದ್ದೇನು? ಹೇಳೆಯವರಿಗೇನು ಅನ್ನವನ್ನು ಮಾರಿ ಹಣ ಸಂಪಾದಿಸಿದರೂ ಚಿಂತೆಯಿಲ್ಲ. ಒಟ್ಟಿನಲ್ಲಿ ಮನೆಗೆ ಉಪ್ಪರಿಗೆ ಬಿದ್ದರಾಯಿತು"(ಅದೇ, ಪು.೨೫೦) ಎಂದು ತನ್ನ ಅಸಮಾಧಾನವನ್ನು ವ್ಯಕ್ತಪಡಿಸುತ್ತಾನೆ. ಆದರೂ ರಾಮ ಐತಾಳನು ಸಹ ಇಂಗ್ಲೀಷ್ ಶಿಕ್ಷಣದ ಪ್ರಭಾವದಿಂದ ತನ್ನ ಮಗ ಲಚ್ಚನನ್ನು ನಗರಕ್ಕೆ ಇಂಗ್ಲೀಷ್ ಶಿಕ್ಷಣ ಕಲಿಯಲು ತನ್ನ ಸಂಪ್ರದಾಯದ ವಿರುದ್ಧ ಕಳುಹಿಸುತ್ತಾನೆ. ಅದೇ ರೀತಿ

ಶೀನ ನಗರೀಕರಣದ ಪ್ರಭಾವದಿಂದ ನಿರುದ್ಯೋಗ ಸಮಸ್ಯೆಯಿಂದ ತನ್ನ ಮಗ ನರಸಿಂಹನನ್ನು ಬೆಂಗಳೂರಿಗೆ ಹೋಟೆಲ್‌ನಲ್ಲಿ ದುಡಿಯಲು ಕಳುಹಿಸುತಾನೆ. ಹೀಗೆ ಇಂಗ್ಲೀಷ್ ಶಿಕ್ಷಣದ ಪ್ರಭಾವ, ನಗರೀಕರಣ, ನಿರುದ್ಯೋಗ ಸಮಸ್ಯೆಗಳು ಅಂದಿನ ಯುವಕರನ್ನು ನಗರಕ್ಕೆ ವಲಸೆ ಹೋಗುವಂತೆ ಪ್ರೇರೆಪಿಸಲು ಕಾರಣವಾಗಿತ್ತು ಎಂಬುದನ್ನು ಈ ಮೂಲಕ ತಿಳಿದುಕೊಳ್ಳಬಹುದು.

ಕೊನೆಗೂ ರಾಮ ಮುಂಬಯಿಗೆ ವಲಸೆ ಹೋದ ನಂತರ ಸ್ವತಂತ್ರ್ಯ ಚಳುವಳಿಯ ಗಲಭೆಗಳಿಂದ ಅಸಮಾಧಾನಗೊಂಡು ತನ್ನ ಹಳ್ಳಿಗೆ ವಾಪಾಸು ಬರುತ್ತಾನೆ. ಕೊನೆಗೂ ತಾಯಿ, ಮಗ, ಹಳ್ಳಿಯಲ್ಲಿ ಸೇರಿ ಹಳ್ಳಿಯ ಶಾಲೆಯೊಂದರಲ್ಲಿಯೇ ಉಪನ್ಯಾಸಕನಾಗಿ ಸೇರಿ ಅತ್ತೆಯಾದ ಸುಬ್ಬಿಯ ಮಗಳನ್ನೇ ಮದುವೆಯಾಗಿ ನೆಮ್ಮದಿ ಜೀವನ ಕಾಣುತ್ತಾನೆ. ಇಲ್ಲಿಯ ಇಂಗ್ಲೀಷ್ ಶಿಕ್ಷಣ, ನಿರುದ್ಯೋಗ, ಬಡತನವೇ ಹಳ್ಳಿಯಿಂದ ನಗರಗಳಿಗೆ ವಲಸೆ ಹೋಗುವುದಕ್ಕೆ ಪ್ರೇರಣೆಯಾಗುತ್ತದೆ. ಕೊನೆಗೆ ಪಟ್ಟಣದ ಜೀವನ, ಸ್ವಾತಂತ್ರ್ಯ ಚಳುವಳಿಯ ಪ್ರಭಾವದಿಂದ ಉಂಟಾದ ಮಾನಸಿಕ ಅಶಾಂತಿಯೇ ರಾಮನನ್ನು ಮರಳಿ ಮಣ್ಣಿಗೆ ಎನ್ನುವಂತೆ ವಾಪಸ್ಸು ಹಳ್ಳಿಗೆ ಬರುವಂತೆ ಮಾಡುತ್ತದೆ. ವಲಸೆಯ ಹಿನ್ನೆಲೆ ಪರಿಣಾಮಗಳನ್ನು ವಿವರಣಾತ್ಮಕವಾಗಿ ಬದುಕಿನ ಮೌಲ್ಯಗಳೊಂದಿಗೆ ನಿರೂಪಿಸಿದ ಲೇಖಕರ ನಿರೂಪಣೆ ವ್ಯವಸ್ಥಿತವಾಗಿ ಕಂಡುಬರುತ್ತದೆ.

ನಾಗತಿಹಳ್ಳಿ ಚಂದ್ರಶೇಖರ ರವರ 'ವಲಸೆ ಹಕ್ಕಿಯ ಹಾಡು' ಕಾದಂಬರಿಯ ಶೀರ್ಷಿಕೆಯೇ ಸೂಚಿಸುವಂತೆ ಇಲ್ಲಿ ತನ್ನ ಹಳ್ಳಿಯಿಂದ ಲಾಹೋರಿಗೆ ವಲಸೆ ಹೋದ ಕೆಂಚೇಗೌಡರ ಮೂಲಕ ಲಾಹೋರನಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿ ಪರಿಣಾಮವನ್ನು ಕಟ್ಟಿಕೊಡುತ್ತದೆ. ಇಲ್ಲಿ ವಲಸೆ ಹೋದ ವ್ಯಕ್ತಿ ಒಬ್ಬನೇ ಆದರೂ ಆತ ಹೋದ ನಂತರ ನಡೆದ ಸ್ವಾತಂತ್ರ್ಯ ಚಳುವಳಿಯ ಪರಿಣಾಮದಿಂದ ಲಾಹೋರಿನ ಜನ ಪಾಕಿಸ್ತಾನ, ದೆಹಲಿ ಕಡೆ ವಲಸೆ ಬಂದ ಜನರ ಸ್ಥಿತಿಗತಿಗಳನ್ನು ಚಿತ್ರಿಸುತ್ತದೆ.

ಇಲ್ಲಿಯ ಕಥಾನಾಯಕ ಕೆಂಚೇಗೌಡ ಒಂದು ಹಳ್ಳಿಯ ಗೌಡ, ಗೌಡನಿಗೆ ಸಾಮಾನ್ಯವಾಗಿ ದರ್ಪ, ದೌರ್ಜನ್ಯ, ಅನ್ಯಾಯ ಎಂಬ ಯಾವ ಗುಣಗಳು ಒಳಗೊಳ್ಳದ ಹಳ್ಳಿಯ ಜನರಿಗೆ ನಿಸ್ವಾರ್ಥ ಸಹಾಯ ಮಾಡುವ ಮಾನವೀಯತೆಯುಳ್ಳ ವ್ಯಕ್ತಿ. ಕೆಂಚೇಗೌಡರು "ಅವ್ವನಿಗೆ ಹೇಳದೆ ಊರು ಬಿಟ್ಟರು ವಂಶದ ಗುಣವೋ ಕಾಲಿನ ಕಡಿತವೋ ತಾರುಣ್ಯದ ಸೊಕ್ಕೋ ಅಂತು ಅವರಿಗೆ ಊರು ಬಿಡಿಸಬೇಕಿನಿಸಿತು"(ನಾಗತಿಹಳ್ಳಿ ಚಂದ್ರಶೇಖರ, ೧೯೯೫, ಪು.೩೦) ಎಂದು ಕೆಂಚೇಗೌಡ ವಲಸೆಯ ಪ್ರೇರಣೆಯನ್ನು ಹೇಳುವ ಮೂಲಕ ಆರಂಭವಾದ ಕಥೆ ೧೯೪೭ ರಲ್ಲಿ ಸ್ವಾತಂತ್ರ್ಯ ಚಳುವಳಿಯ ಸಂಪೂರ್ಣ ಸಾಧಕ ಬಾಧಕಗಳನ್ನು ವಿವರಿಸುತ್ತಾ ಹೋಗುತ್ತದೆ.

"ಸುಮಾರು ನಲವತ್ತರಿಂದ ನಲವತ್ತೇಳರವರೆಗೂ ಆದ ದಂಗೆಗಳಿಂದ ಜನರನ್ನು ಊರು ಬಿಟ್ಟು ಹೊರಡುವಂತೆ ಮಾಡಿತ್ತು. ಲಾಹೋರ್, ಪಾಕಿಸ್ತಾನಕ್ಕೆ ಸೇರುವುದು ಖಚಿತವಾಗಿತ್ತು. ಆಗಲೇ ಜನ ಗಂಟುಮೂಟೆ ಸಮೇತ ಗುಳೆ ಹೊರಟಿದ್ದರು.

ಗಡಿ ದಾಟುವ ಜನರ ದುಮ್ಮಾನಗಳಿಗೆ ಶಬ್ದಗಳೇ ಇಲ್ಲ ಯಾರಿಗೂ ಬಿಟ್ಟು ಹೋಗುವ ಮನಸ್ಸಿಲ್ಲ. ಹೋಗದೇ ವಿಧಿ ಇಲ್ಲ. ಸ್ವಾತಂತ್ರೋತ್ಸವಕ್ಕೆ ಇನ್ನು ವರುಷವಿದ್ದಂತೆಯೇ ಜನ ತೆರವು ಮಾಡಲು ಆರಂಭಿಸಿದ್ದರು. ನಾಡೆಲ್ಲ ಹಿಂಸೆಯಿಂದ ತುಂಬಿ ಹೋಗಿತ್ತು. ಸಿಕ್ಕ ಬೆಲೆಗೆ ಸ್ವತ್ತುಗಳನ್ನು ಕೆಲವರು ಮಾರಿದರೆ, ಕೆಲವರು ಗುಳೆ ಬಂದವರ ದಾಹಕ್ಕೆ ಬಲಿಯಾಗಿ ದೌರ್ಜನ್ಯಕ್ಕೆ ಉಸಿರೆತ್ತಲಾಗದೆ ಎಲ್ಲವನ್ನು ಇದ್ದ ಸ್ಥಿತಿಯಲ್ಲಿಯೇ ಬಿಟ್ಟು ಹೊರಟರು. ಕಾಲ್ನಡಿಗೆಯಲ್ಲಿ, ಟ್ರಕ್ಕುಗಳಲ್ಲಿ, ರೈಲುಗಳಲ್ಲಿ ನೆಲೆ ಹುಡುಕಿ ಹೊರಟ ದೀನರ ದಂಡು ಎಲ್ಲೆಂದರಲ್ಲಿ ರಾಚುತ್ತಿತ್ತು. ತುಂಬ ಕಷ್ಟ ಅನುಭವಿಸಿದವರು ಎಂದರೆ ಹೆಂಗಸರು, ಮಕ್ಕಳು, ವೃದ್ಧರು."(ಅದೇ, ಪು.೪೦) ಹೀಗೆ ಅಸಹಾಯಕರು, ಜನಸಾಮಾನ್ಯರು ಚಳುವಳಿಯ ಪರಿಣಾಮದಿಂದಾಗಿ ತಮ್ಮ ನೆಲೆಗಳನ್ನು ಅನಿವಾರ್ಯವಾಗಿ ತೊರೆದು ತಮ್ಮ ವಸ್ತು ಸಾಮಾನುಗಳನ್ನು ಮಾರಿ ಅಥವಾ ಅಲ್ಲಿಯೇ ಬಿಟ್ಟು ಹೊರಡುವ ಸನ್ನಿವೇಶಗಳ ಸಂದರ್ಭ ಕತೆಯಲ್ಲಿ ಕರುಣಾಜನಕವಾಗಿ ಮೂಡಿ ಬರುತ್ತದೆ.

ಇಲ್ಲಿಯ ವಲಸೆಗೆ ಸ್ವಾತಂತ್ರ್ಯ ಚಳುವಳಿಯ ದಂಗೆಗಳು ಕಾರಣವಾಗಿರುವುದು ಜನರನ್ನು ಆತಂಕಕ್ಕಿಡು ಮಾಡಿತ್ತು. ಹಿಂದೂ-ಮುಸ್ಲಿಂರು ದೆಹಲಿ, ಪಾಕಿಸ್ತಾನ ದತ್ತ ಇರುವೆಗಳಂತೆ ಹರಿಯ ತೊಡಗಿದರು. ಹೀಗೆ ಬಂದವರಿಗೆ ತಾತ್ಕಾಲಿಕ ವಸತಿಗಳನ್ನು ಒದಗಿಸಲಾಗಿತ್ತು. ಮನೆಮಠ ಕಳೆದುಕೊಂಡು ಇನ್ನು ಹೊರಡಲಾಗದಿದ್ದವರಿಗೆ ಲಾಹೋರಿನಲ್ಲಿ, ಅಮೃತಸರದಲ್ಲಿ, ದೆಹಲಿಯಲ್ಲಿ ಕ್ಯಾಂಪುಗಳು ಸೃಷ್ಟಿಯಾದರೂ, ಅಸಂಖ್ಯಾತ ಜನ ಪ್ರವಾಹಕ್ಕೆ ಕ್ಯಾಂಪುಗಳಲ್ಲಿ ನಿಲ್ಲಲ್ಲೂ ಜಾಗವಿರುತ್ತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಹಿಂದೂ-ಮುಸ್ಲಿಂರಿಗೆ, ಮುಸ್ಲಿಂರು ಹಿಂದೂಗಳಿಗೆ ಸಹಾಯ ಮಾಡುತ್ತಿದ್ದ ಸನ್ನಿವೇಶಗಳು ಕೂಡ ಇದ್ದವು. ಈ ಎಲ್ಲದರ ನಡುವೆ ಏನೂ ಕಾರಣವಿಲ್ಲದೆ ಊರು ಬಿಟ್ಟು ಬಂದಿದ್ದ ಕೆಂಚೆಗೌಡನಿಗೆ ಇಲ್ಲಿಯ ಪರಿಸ್ಥಿತಿಯನ್ನು ನೋಡಿ ಲಾಹೋರಿನಿಂದ ಓಡಲ್ಪಟ್ಟ, ಭಾರತಕ್ಕೆ ಹೊರಟು ನಿಂತ ಅಸಂಖ್ಯಾ ನಿರ್ವಸತಿಗರೊಂದಿಗೆ ಗೌಡರು ಸೇರಿಕೊಂಡು ಪುನಃ ತಮ್ಮ ಊರಿಗೆ ವಾಪಸಾಗುತ್ತಾರೆ.

ಇಲ್ಲಿ ಧರ್ಮಗಳ ಸಮನ್ವಯ ಜೊತೆಗೆ ಸಂಘರ್ಷಗಳು ಸಹ ಇದ್ದವು. "ಜನರನ್ನು ಗಡಿಯಾಚೆ ಸಾಗಿಸುವ ಟ್ರಕ್ಕು, ಬಸ್ಸು, ರೈಲುಗಳು ಯಾವುದೇ ಕ್ಷಣ ಅಗ್ನಿಗೆ ಆಹುತಿಯಾಗಬಹುದಿತ್ತು. ಇತ್ತಲಿಂದ ಟ್ರಕ್ಕಿನಲ್ಲಿ ಕತ್ತರಿಸಿದ ಮುಸ್ಲಿಂ ತಲೆಗಳು ಇದ್ದರೆ, ಇದಕ್ಕೆ ಪ್ರತಿಯಾಗಿ ಅತ್ತಲಿಂದ ಹಿಂದೂಗಳ ಕತ್ತರಿಸಿದ ತಲೆಗಳು ಬರುತ್ತಿದ್ದವು. ಅವರ ಮಕ್ಕಳ ಅಳುವಂತು ಕರಳು ಕತ್ತರಿಸುವಂತೆ

ಇರುತ್ತಿತ್ತು. ಇನ್ನು ಗಡಿ ಸಮೀಪದ ಹಳ್ಳಿಗರ ಪಾಡು ಹೇಳ ತೀರದಾಗಿತ್ತು. ಮಸೀದಿ ದನಕರುಗಳು ದಿಕ್ಕು ತಪ್ಪಿ ಹೋಗಿ ಗಾಬರಿಗೊಂಡಿದ್ದವು."(ಅದೇ, ಪು.೫೦)

ಹೀಗೆ ವರ್ಗದ್ವೇಷಿಗಳು ಧರ್ಮ, ಧರ್ಮಗಳ ನಡುವಿನಲ್ಲಿ ಸಂಘರ್ಷಗಳಿಂದಾಗಿ ನಡೆಯುತ್ತಿದ್ದ ಸಾವುಗಳು ಅಂದಿನ ಸ್ವಾತಂತ್ರ್ಯ ಪಡೆಯುವ ಹಂತದಲ್ಲಿದ್ದ ಸಂದರ್ಭಗಳನ್ನು ನೆನಪಿಸಿಕೊಡುತ್ತವೆ. ಜೊತೆಗೆ ಕತೆಯ ನಾಯಕ ಕೆಂಚೇಗೌಡ ಒಂದು ನೆಪವಾಗಿ ಬಂದರೆ ಈತನ ಮೂಲಕ ಸ್ವಾತಂತ್ರ್ಯ ಚಳುವಳಿಯಿಂದ ಜನರಿಗೆ ಉಂಟಾದ ಪರಿಣಾಮಗಳನ್ನು ವಿವರಿಸುವ ಚಾರಿತ್ರಿಕ ಘಟನೆಯಾಗಿ ಮೂಡಿಬಂದಿದೆ.

ಈ ಕತೆಯಲ್ಲಿ ಮುಖ್ಯವಾಗಿ ಎರಡು ರೀತಿಯ ವಲಸೆಯನ್ನು ಕಾಣಬಹುದು. ಒಂದು ಕೆಂಚೇಗೌಡ ಏನೊಂದು ಕಾರಣ, ಉದ್ದೇಶವಿರದೆ ಮನೆಯಲ್ಲೂ ಹೇಳದೆ ಒಂದು ಸ್ವಾತಂತ್ರ್ಯ ಚಳುವಳಿ ಗಲಭೆಯಲ್ಲಿ ಸಿಕ್ಕಿ ಹಾಕಿಕೊಂಡು ಮತ್ತೆ ತನ್ನ ಊರಿಗೆ ವಾಪಸಾಗುತ್ತಾನೆ. ಇವನ ವಲಸೆಗೆ ಯಾವುದೇ ಕಾರಣವಿರದಿದ್ದರೂ ಇದರಿಂದ ಪರಿಣಾಮಗಳನ್ನು ಮಾತ್ರ ಅನುಭವಿಸುತ್ತಾನೆ.

ಹಾಗೆಯೆ ವಲಸೆ ಹೋಗುವ ಯಾವ ಉದ್ದೇಶವಿರದ ಲಾಹೋರಿನ ಜನಕ್ಕೆ, ಚಳುವಳಿಯ ಹೋರಾಟಗಳು ಅನೇಕ ಬಗೆಯ ಸಾವು ನೋವುಗಳನ್ನು ಅನುಭವಿಸಿ ಅನಿವಾರ್ಯವಾಗಿ ಜೀವಕ್ಕೆ ಹೆದರಿ ಕೆಲವರು ಪಾಕಿಸ್ತಾನಕ್ಕೆ ಇನ್ನು ಕೆಲವರು ದೆಹಲಿಗೆ ಬರುತ್ತಾರೆ. ಹೀಗೆ ಬಂದವರಿಗೆ ವಸತಿಯೂ ಸಹ ಸರಕಾರವೇ ತಾತ್ಕಾಲಿಕವಾಗಿ ಪೂರೈಸುತ್ತದೆ. ಒಟ್ಟಾರೆ ಕತೆಯು ಮುಖ್ಯ ಪಾತ್ರ ಕೆಂಚೆಗೌಡನಾದರೂ ಈತನ ಮೂಲಕ ಇಡೀ ಕತೆ ಸ್ವಾತಂತ್ರ್ಯ ಚಳುವಳಿಯ ಪರಿಣಾಮದ ಸ್ಥಿತಿಗತಿಗಳನ್ನು ವಿವರಿಸುತ್ತಾ ವಲಸೆ ಪ್ರೇರಣೆ, ಪ್ರಕ್ರಿಯೆ ಪರಿಣಾಮಗಳನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ.

ಶ್ರೀನಿವಾಸ ವೈದ್ಯರವರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಒಂದು ಚಾರಿತ್ರಿಕ ಕಾದಂಬರಿಯಾಗಿದ್ದು, ಐತಿಹಾಸಿಕ ಘಟನೆಗಳ ಜೊತೆ ಅಂದಿನ ಬ್ರಾಹ್ಮಣ ಸಮುದಾಯದ ಜೀವನ ಪದ್ಧತಿ, ಆಚಾರ-ವಿಚಾರ, ಸಂಪ್ರದಾಯಗಳನ್ನೊಳಗೊಂಡ ಸಾಮಾಜಿಕ ಕಾದಂಬರಿಯು ಸಹ ಆಗಿರುವುದು ಕೂಡ ಕಂಡುಬರುತ್ತದೆ. ಜೊತೆಗೆ ಇದೊಂದು ವ್ಯಕ್ತಿ ವಲಸೆಗೆ ಉದಾಹರಣೆಯಾಗಿ ಕೂಡ ಕಂಡುಬರುತ್ತದೆ. ಹತ್ತೊಂಬತ್ತರ ದಶಕದಲ್ಲಿ ಬ್ರಿಟಿಷರ ಭಾರತಕ್ಕೆ ಆಗಮನದಿಂದ ಉಂಟಾದ ಸ್ಥಳೀಯ ರಾಜರುಗಳಿಗೂ ಮತ್ತು ಬ್ರಿಟಿಷರಿಗೂ ಉಂಟಾದ ಸಂಘರ್ಷಗಳ ಪರಿಣಾಮವಾಗಿ ಉತ್ತರದಲ್ಲಿದ್ದ ನಾನಾ ಸಾಹೇಬನ ಆದೇಶದ ಮೇರೆಗೆ ದಕ್ಷಿಣ ರಾಜರ ಆಶ್ರಯವನ್ನು ಕೇಳಲು ಬಂದ ನಾನಾ ಸಾಹೇಬನ ಆಶ್ರಯದಲ್ಲಿದ್ದ ಪುರೋಹಿತನ ಮಕ್ಕಳಾದ ಕಮಲನಾಭ, ಪದ್ಮನಾಭ ಎಂಬ ಇಬ್ಬರ ಪ್ರಯಾಣದ ಸಂಕಷ್ಟದೊಂದಿಗೆ ಆರಂಭವಾಗುವ ಕಥೆ ಐತಿಹಾಸಿಕವಾಗಿ ರಾಜಕೀಯದಲ್ಲಿ ಉಂಟಾದಂತಹ ಏರುಪೇರುಗಳು ಸಂಘರ್ಷಗಳ ವಿವರಣೆಯನ್ನು ಕೊಡುತ್ತದೆ.

ಕುದುರೆಯ ಮೂಲಕ ಪ್ರಯಾಣ ಬೆಳೆಸಿದ ಈ ಇಬ್ಬರು ಯುವಕರು ಕಾಡಿನ ಮಾರ್ಗದ ಮೂಲಕ ಮಳೆ ಬಿಸಿಲು ಪ್ರಾಣಿಗಳ ಭಯದಿಂದ ಎಲ್ಲವನ್ನು ಸಹಿಸಿಕೊಂಡು ಅಲ್ಲಲ್ಲಿ ಧಣಿವರಿಸಿ ಕೊಳ್ಳುತ್ತಾ ಸತತ ಎರಡು ದಿನಗಳ ಕಾಲ ಆಹಾರ, ನಿದ್ರೆಯಲ್ಲದೆ ಅಲ್ಲಲ್ಲಿ ಸಿಕ್ಕ ಗೆಡ್ಡೆ ಗೆಣಸುಗಳನ್ನೆ ತಿಂದು ದಾರಿ ಸಾಗಿಸುತ್ತ ಬಂದವರು ನವಲಗುಂದದ ಧಣೀ ಅಪ್ಪಾಸಾಹೇಬ ದೇಸಾಯಿ ಸವಾರರ ಕೈಗೆ ಸೆರೆ ಸಿಕ್ಕಿಕೊಳ್ಳುತ್ತಾರೆ. ಹೀಗೆ ಸೆರೆ ಸಿಕ್ಕ ಈ ಇಬ್ಬರು ಅಚಾನಕ್ಕಾಗಿ ತಪ್ಪಿಸಿಕೊಳ್ಳಲು ಹೋದ ಪದ್ಮನಾಭ ಸಾವಿಗಿಡಾಗುತಾನೆ. ಆದರೆ ತಮ್ಮನಾದ ಕಮಲನಾಭ ಮಾತ್ರ ನವಲಗುಂದಲ್ಲಿ ಉಳಿಯುವ ಅನಿವಾರ್ಯತೆ ಉಂಟಾಗುತ್ತದೆ. ಮುಂದೆ ದಿನ ಕಳೆದಂತೆ ಇತ್ತ ನರಗುಂದಕ್ಕೂ ಹೋಗದೇ ಅತ್ತ ಕಾನಪುರಕ್ಕೂ ಹೋಗದೆ ನವಲುಗುಂದಲ್ಲೇ ನೆಲೆಯಾಗುತ್ತಾನೆ.

ಇವನ ಕಾನಪುರದ ಕೌಟುಂಬಿಕ ಹಿನ್ನೆಲೆ ಸಹ ಬಡತನ, ಉಪವಾಸ–ವನವಾಸಗಳಿಂದಲೇ ಕೂಡಿತ್ತು. ಪೇಶ್ವೆಯವರ ಹತ್ತೆಂಟು ಆಶ್ರಿತ ಪುರೋಹಿತ ಕುಟುಂಬಗಳಲ್ಲಿ ಇವರದೂ ಒಂದಾಗಿತ್ತು. ಇವರಿಗಿದ್ದ ಆರು ಜನ ಅಣ್ಣ ತಮ್ಮಂದಿರಲ್ಲಿ ಇವರು ಕೊನೆಯವರು. ತಾಯಿ ತೀರಿ ಹೋಗಿದ್ದಳು. ತಂದೆ ಯಜ್ಞ, ಯಾಗ, ಕಣಲೆ, ಸತ್ಯನಾರಾಯಣಪೂಜೆ ಮಾಡುತ್ತಾ ಕಾಲ ಕಳೆಯುತ್ತಿದ್ದರು. ಕಾಶಿಯಲ್ಲಿ ವೇ.ಬ್ರ.ಗಂಗಾಧರಶಾಸ್ತ್ರಿಗಳ ವೈದ್ಯವಿದ್ಯೆ ಕಲಿಯುವಾಗಲು ಅಂತು ಉಪವಾಸ, ವನವಾಸದ ದಿನಗಳೇ ಆಗಿದ್ದವು. ಹಾಗಾಗಿ ಅವನ ಹಿಂದಿನ ಜೀವನ ಕಷ್ಟಕರದ ಬದುಕಿಗಿಂತ ಇಲ್ಲಿಯ ಸ್ಥಿರವಾಸ್ತವ್ಯದ ನೆಲೆ ಅವನ ಬಾಳಿನ ದಿಕ್ಕನ್ನೇ ಬದಲಿಸಿತ್ತು. ಆದರೆ ತಾನು ಈ ಹಿಂದೆ ಕಲಿತ ವೈದ್ಯವಿದ್ಯೆಯೇ ಇಲ್ಲಿಯ ಜೀವನ ನಿರ್ವಹಣೆಗೆ ಸಹಾಯಕವಾಗಿತ್ತು. ಇಲ್ಲಿಯ ಇನ್ನೊಂದು ಅಂಶವನ್ನು ಗಮನಿಸಲೇಬೇಕು. ಜಾತಿಯಲ್ಲಿ ಮೇಲ್ವರ್ಗದವರಾಗಿದ್ದರು ಸಹ ಬಡತನ ದಾರಿದ್ರ್ಯ ಹಸಿವಿನಿಂದ ಬಳಲುತ್ತಿದ್ದ ಈ ಕುಟುಂಬಕ್ಕೆ ತಂದೆ ಮಾಡುವ ಪುರೋಹಿತ ಕೆಲಸವೇ ಜೀವನಕ್ಕೆ ದಾರಿಯಾಗಿತ್ತು. ಹಾಗಾಗಿ ರಾಷ್ಟ್ರ ವ್ಯಾಪಿಯಾದ ಆ ವಿಪ್ಲವದ ಕಾಲದಲ್ಲಿ ಅಂದು ಸಂಜೆ ಈ ಅಜ್ಞಾತ ಹಳ್ಳಿಯಲ್ಲಿ ಅವನ ಸೆರೆಸಿಕ್ಕಿದ್ದು ಬರೀ ಒಂದು ಆಕಸ್ಮಿಕವಾಗಿರದೇ ಅವನ ದೈವಗತಿ ತೋರಿದ ಒಂದು ಪೂರ್ವನಿಯೋಜಿತ ಯೋಗಯೋವೇನೋ ಎನ್ನುವ ಮಟ್ಟಿಗೆ ಆ ಕ್ಷಣ ಅವನ ಬಾಳಿನ ದಿಕ್ಕನೇ ಬದಲಿಸಿತ್ತು.

ಹೀಗೆ ಒಂದು ಕಡೆ ಅಣ್ಣನನ್ನು ಕಳೆದುಕೊಂಡ ನೋವು, ಇನ್ನೊಂದು ಕಡೆ ಅರಿಯದ ಜನ, ತಿಳಿಯದ ಭಾಷೆ, ತನ್ನವರಿಂದ ದೂರ ದೂರ ಕಂಡು ಕೇಳಿ ಅರಿಯದ ದೇಶಕ್ಕೆ ಬಂದಾಗಿದೆ ಮುಂದೇನು? ಎಂಬ ಭವಿಷ್ಯದ ಹೆದರಿಕೆ ಒಂದು ಕಡೆಯಾಗಿತ್ತು. ಇದೇ ಸಂದರ್ಭದಲ್ಲಿಯೇ ಊರಿನ ಯಂಕಣ್ಣಚಾರ್ಯ ತನ್ನ ಬಡತನದಿಂದ ಇನ್ನು ಮದುವೆಯಾಗದೆ ಮನೆಯಲ್ಲಿಯೇ ಇದ್ದ ಸಾಪಿತ್ರಿಯನ್ನು ಕಾನ್ಪೂರದ ಕಮಲನಾಭನಿಗೆ ಕೊಟ್ಟು ಮದುವೆ ಮಾಡಿದ ನಂತರ ಇವನ

ಆಚಾರ-ವಿಚಾರ ಸಂಪ್ರದಾಯಗಳಲ್ಲಿ ಸಾಕಷ್ಟು ಬದಲಾವಣೆಗಳು ಉಂಟಾಗುತ್ತವೆ. ಹಾಗೆಯೇ ಅಕ್ಷರ ಕೆ.ವಿ.ಅವರ ಮುನ್ನುಡಿಯಲ್ಲಿ ಬರೆದ ಅಭಿಪ್ರಾಯದಂತೆ "ಕಾನ್ಪುರ ಮೂಲದ ಒಬ್ಬ ಬ್ರಾಹ್ಮಣ ಅಚಾನಕ್ಕಾಗಿ ಬಂದು ಪರಿಸ್ಥಿತಿಯ ಒತ್ತಡದಿಂದ ಇಲ್ಲಿಯ ಸಂಪ್ರದಾಯದೊಳಕ್ಕೆ ಸೇರಿ ಹೋಗುತ್ತಾನೆ. ಅದು ಈ ಕಾದಂಬರಿಯ ಮುಂದಿನ ಎಲ್ಲ ಕಥಾನಕಕ್ಕೂ ಮೂಲವಾಗಿರುತ್ತದೆ." (ಶ್ರೀನಿವಾಸ ವೈದ್ಯ, ೨೦೦೭, ಮುನ್ನುಡಿ) ಎಂಬ ಮಾತು ಕಮಲನಾಭ ವಲಸೆ ಬಂದು ಹೀಗೆ ಬೇರೊಂದು ಸಂಸ್ಕೃತಿ ಸಂಪ್ರದಾಯದೊಂದಿಗೆ ಬೆರೆತು ಹೋದ ಎಂಬ ಅಂಶ. ಕಾದಂಬರಿಯಲ್ಲಿನ ಈ ಸಾಲುಗಳ ಮೂಲಕ ಉದಾಹರಿಸಬಹುದು, "ಸಾವಿತ್ರಿ ಬಾಯಿ ಮುಂದ ಕಾಶಿಗೂ ಹೋಗಲಿಲ್ಲ ಕಾನಪುರಕ್ಕೂ ಹೋಗಲಿಲ್ಲ. ಅಲ್ಲೇ ನವಲಗುಂದದೊಳಗ ತನ್ನ ತಂದೀ ಮನಿ ಒಳಗ ಸಂಸಾರ ಹೂಡಿದಳು. ಹೂಡಿ ತನ್ನ ಗಂಡನಿಗೆ ನವಲಗುಂದದ ಸಂಸ್ಕೃತಿಯ ಪರಿಚಯ ಮಾಡಿಕೊಡಲಿಕ್ಕೆ ಹತ್ತಿದಳು. ಮಡಿ, ಮೈಲಗಿ, ಹಬ್ಬ, ಹುಣ್ಣಿಮೇ, ಹೋಳಿಗಿ ಹಾಲು ತುಪ್ಪ, ಹುತ್ತಪ್ಪ, ಕರಿಗಡಬು, ಕಟ್ಟಾಂಬಲಿ ನುಚ್ಚು, ಭಕ್ತಿ ರಂಜಕದ ಚಟ್ನಿ, ಝುಣಕ, ಥಾಲಿಪೆಟ್ಟು, ಸಂಡಿಗೆ, ಗ್ಲೊಜ್ಜು, ಬಟಾಣಿ ಪಾಯಸ, ಕಾಯಿರಸಾ, ತೊಕ್ಕು, ಒಡ್ಡಮುರ್ಕ, ಕವಳಿಕಾಯಿ, ಉಪ್ಪಿನಕಾಯಿ ಅನ್ನುತ ಅವನ ನಾಲಿಗೆಗೆ ನೀರೆರೆಯುತ್ತ ಮನೆಯೊಳಗಿನ ಸಂಪ್ರದಾಯ ತೊರಿಸಿದಳು. ಅದೇ ರೀತಿ ಸಾಮಾಜಿಕವಾಗಿ ಊರಾಗಿನ ಭ್ರಾಂಭ್ರ ಶಿಷ್ಟಾಚಾರ, ತಿರಪ್ಪತನ, ಚಿಟಕ್ ಮುಳ್ಳಾಡಿಸೋದು, ಹೊಟ್ಟೆಕಿಚ್ಚು, ಹರಕತನ ಇತ್ಯಾದಿಗಳ ಪರಿಚಯ ಮಾಡಿ ಕೊಡಲಿಕ್ಕೆ ಹತ್ತಿದಳು. ಮತ್ತೆ ಸ್ವಂತ ತಾನೂ ಮುದಿ ಮುತ್ತೈದೆಯರ ಹಂಗಿನ ನುಡಿ ಸಹಿಸಿಕೊಳ್ಳುತ್ತ ಸೆರಗು ಕಟ್ಟಿ ಎಲ್ಲೆಂದ್ರಲ್ಲಿ ಆರತಿ ಅರಶಿನ ಕುಂಕುಮಕ್ಕೆ ಹೋಗಿ, ನಾನಿ ಮನಿಯೊಳಗ ಪಡಸಲ್ಯಾಗ ಹಾಸಿದ್ದ ಚಾಪೆ ಮ್ಯಾಲೆ ಕೂತಂತಹ ಸುಹಾಸಿನಿಯರ ಮಧ್ಯೆ ಕಚ್ಚೆ ಸಾವರಿಸಿಕೊಳ್ಳುತ್ತ ಎದ್ದು ನಿಂತು, ಮೂಗಿನಲ್ಲಿ ನೆತ್ತಿನ ಫಿರಕಿ ಕೈಯಿಂದ ತಿರುವಿ ಸಮಮಾಡಿ ಕೊಂಡು ಸಮಸ್ತ ಜಗದೋದ್ಧಾರಕ್ಕೆ ಹುಟ್ಟಿ ಬಂದವರು ಉಡುಪಿಯ ಮಧ್ವಾಚಾರ್ಯರು. ಮುನವಳ್ಳಿ ಯಂಕಣ್ಣಾಚಾರ ಮಗಳು ಸಾವಿತ್ರಿಬಾಯಿಯ ಉದ್ಧಾರಕ್ಕೆ ಹುಟ್ಟಿ ಬಂದವರು ನವಲಗುಂದದ ಕಮಲಾಚಾರ್ಯರು"(ಅದೇ, ಪು.೨೬) ಎಂದು ಒಗಟಾ ಹಾಕಿ ಗಂಡನ ಹೆಸರು ಹೇಳಿಲಿಕ್ಕೆ ಹತ್ತಿದಳು. ಈ ರೀತಿ ಒಗಟು ಹಾಕಿ ಹಾಕಿ ಕಾಣ್ವನೋ ಮಧ್ಯಾನಿಕನೋ, ಕನೋಜಿಯೋ, ಕಾರೆವಾಡಿಯೋ ಎಂಬ ಸಂಶಯಕ್ಕೆ ಎಡೆಮಾಡಿಕೊಟ್ಟಂತಹ ಕಮಲಯ್ಯನನ್ನು ಶುದ್ದ ಮಧ್ವ ಸಂಪ್ರದಾಯದ ವೈಷ್ಣವನನ್ನಾಗಿ ಮಾಡಿಬಿಟ್ಟಳು.

"ಮದುವೆಯ ಮುಂಚೆಯಂತು ಕಮಲನಾಬನಿಗೆ ನವಲಗುಂದದ ಜೀವನ, ಜೀವನಕ್ರಮ, ಸಮಾಜ, ಆಚಾರ-ವಿಚಾರ ನಡೆ-ನುಡಿಯಲ್ಲಾ ಅವಗ ಹೊಸದೇ. ವಿಚಿತ್ರ ಅನಿಸೋದೇ. ಹತ್ತೋ ಹನ್ನೆರಡು ಕುಟುಂಬಗಳ ಆ ಸಣ್ಣ ಬ್ರಾಹ್ಮಣ ಸಮಾಜದಾಗ ಸಹಿತ ಅಂವಗ ಹಿಡಮೂ ಬಿಟ್ಟಹಂಗ

ಅನಿಸುತ್ತಿತ್ತು. ಹಲಕೆಲವು ಮಂತ್ರೋಚ್ಚಾರಣೆಗಳು, ಒಂದೆರಡು ಧಾರ್ಮಿಕ ರೀತಿ ನೀತಿಗಳು, ವಿಧಿ, ವಿಧಾನ, ಕಟ್ಟು ನಿಟ್ಟುಗಳು, ಆಹಾರದ ಒಂದೆರಡು ರುಚಿಗಳು ಇಷ್ಟು ಬಿಟ್ಟರೆ ಕಮಲಯ್ಯನನ್ನು ಇಲ್ಲಿಯ ಸಮಾಜಕ್ಕೆ ಬೆಸೆಯುವ ಯಾವ ಬಂಧನವೂ ಇರಲಿಲ್ಲ."(ಅದೇ, ಪು.೨೫)

ಆದರೂ ಇವನನ್ನು ಬ್ರಾಹ್ಮಣನೆಂದು ಒಪ್ಪಿಕೊಳ್ಳುವುದಕ್ಕೂ ಅಲ್ಲಿಯ ಜನ ಸಂಶಯ ಪಡುತ್ತಿದ್ದರು. "ಎಲ್ಲಿಯವರೇ ಇವ? ಬ್ರಾಹ್ಮಣರ ಹೌದೋ ಅಲ್ಲೋ? ಭ್ರಾಂಭ್ರೊಳಗ ಕಮಲಯ್ಯ ಅನ್ನೋ ಹೆಸರೇ ಕೇಳಿಲ್ಲರೀ ನಾವು...ಮಾಧ್ವರಂತೂ ಅಲ್ಲೇ ಅಲ್ಲ. ಕಾಣ್ವರೋ ಮಾಧ್ಯಾನ್ಹಿಕರೋ ಇರಬೇಕು ಅಥವಾ ಅತ್ತಲಾಗಿನ ಕನೋಜ...ಕಾರೆವಾಡಿ ಬ್ರಾಹ್ಮಣ ಇದ್ದರೂ ಇರಬಹುದು. ಅಲ್ಲರೆಪ ಗೋವಿಂದಾಚಾರು ಗೋಪಾಲಾಚಾರು ಹನುಂತಚಾರು ಅಂಬೋ ಹೆಸರು ಕೇಶವ ರೆಪ... ಕಮಲಯ್ಯ...ಕಮಲಾಚಾರ ಅಂಬೋ ಹೆಸರು ಕೇಳಿರೇನು? ಇವ ಬ್ರಾಹ್ಮಣ ಅಲ್ಲೇ ಅಲ್ಲ ತೆಗೀರಿ...ಬಹುತೇಕ ಅಕಾರಾಬಾರಿ ಶಿವಬಸಯ್ಯನೇ ತಮ್ಮಪೈಕೀ ಯಾರನ್ನೋ ತಂದು ಜನಿವಾರ ಹಾಕ್ಯಾನೋ ಏನೋ? ಈ ದುರ್ವಾಸ ಯಂಕಣ್ಣಾಚಾರಿಗೂ ಹ್ಯಾಂಗಾರ ಮಾಡಿ ಆ ಕತ್ತಿಹಂಗ ಬೆಳೆದು ನಿಂತಿದ್ದ ಮಗಳನ ಸಾಗಹಾಕಿದ ಸಾಕಾಗಿತ್ತು."(ಅದೇ, ಪು.೨೫-೨೬) ಎನ್ನುವ ಅನುಮಾನಸ್ಪದ ಮಾತುಗಳಿಂದ ಕಮಲನಾಭನಿಗೆ ಮಾತಿನಿಂದಲ್ಲೆ ಚುಚ್ಚುತ್ತಿದ್ದರು. ಅಂತು ಕಾನಪುರದ ಕಮಲನಾಭಪಂತ, ಹೋಗಿ ಕಮಲಾಚಾರ್ಯಪಂತ್ ಎಂಬ ಹೆಸರಿನೊಂದಿಗೆ ತನ್ನ ಸಂಪ್ರದಾಯ ಆಚಾರ-ವಿಚಾರಗಳೊಂದಿಗೆ ನವಲಗುಂದದ ಸಮಾಜದ ಜೊತೆಗೆ ಸೇರಿಕೊಳ್ಳುತ್ತಾನೆ.

ಮುಂದೆ ಕಮಲಾಚಾರ್ಯ ಪಂತ್‌ನ ಕುಟುಂಬದ ಸಾಂಪ್ರದಾಯಿಕ ಬದುಕು, ಜೀವನ ನಿರ್ವಹಣೆ, ಕೌಟುಂಬಿಕ ಕಲಹಗಳು ಸಮಸ್ಯೆಗಳ ವಿವರಣೆಯೊಂದಿಗೆ ಕತೆ ಸಾಗುತ್ತದೆ. ಇದಷ್ಟೆ ಅಲ್ಲದೇ ಬ್ರಿಟಿಷರಿಗೂ ಮತ್ತು ರಾಜರುಗಳಿಗೂ ನಡೆಯುತ್ತಿದ್ದ ಸಂಘರ್ಷಗಳಿಂದ ಊರಿನ ಜನರಿಗೆ ನಾನಾ ರೀತಿಯ ತೊಂದರೆಗಳು ಉಂಟಾಗುತ್ತಿದ್ದವು. ಊರಿನ ಮಠ, ದೇವಸ್ಥಾನಗಳ ಮೇಲಿನ ದಾಳಿಯಿಂದ ಹತ್ತಿ ಬಿಡಿಸುವ ಕೂಲಿ ಮಂದಿ ಹೆದರಿ ಗುಳೇ ಕಟ್ಟಿಕೊಂಡು ಎಲ್ಲೆಲ್ಲೋ ದಾರಿ ಸಿಕ್ಕಲ್ಲಿ ಓಡಿಬಿಟ್ಟಿದದ್ದರಂತೆ. ಹಾಗಾಗಿ ಹೊಲದಲ್ಲಿ ಹುಲುಸಾಗಿ ಬೆಳೆದು ನಿಂತ ಶುಭ್ರ ಹತ್ತಿ, ಬಿಡಿಸುವವರಿಲ್ಲದೇ ಹಾಳಾಗಿ ಹೋಗದೆಯಂತೆ. ಹೀಗೆ ದಿನಕ್ಕೊಂದು ಸುದ್ಧಿ ಘಟನಾವಳಿಗಳು ನಡೆಯುತ್ತಲೆ ಇದ್ದವು. ಎಂಬ ಸಂಧರ್ಭದಿಂದ ಅಂದಿನ ಸಂಘರ್ಷ,ಆಕ್ರಮಣಗಳಿಂದಾಗಿ ಊರಿನ ಜನ ವಲಸೆ ಹೋಗುತ್ತಿದ್ದಂತಹ ಪ್ರೇರಣೆಯನ್ನು ಈ ಕಥೆ ಸೂಚಿಸುತ್ತದೆ.

ಹೀಗೆ ರಾಜಕೀಯ ಸ್ಥಿತ್ಯಂತರಗಳಿಂದ, ಆಕ್ರಮಣಗಳಿಂದ, ಅನಿವಾರ್ಯ ಕಾರಣಗಳಿಂದ ಬಂದವರ ಬದುಕಿನ ಪಲ್ಲಟಗಳು ಮತ್ತು ಪರಿಣಾಮಗಳನ್ನು ಇಲ್ಲಿ ನೋಡಬಹುದಾಗಿದೆ. ವಲಸೆ ಅಣ್ಣನೊಂದಿಗೆ ಅನಿವಾರ್ಯ ಕಾರಣದಿಂದ ಬಂದ ಕಮಲನಾಭನ ಒಂಟಿ ಜೀವನ, ನವಲಗುಂದಕ್ಕೆ

ಬಂದ ನಂತರದಲ್ಲಿ ಸಂಸಾರ ಕಟ್ಟಿಕೊಂಡು ಜೀವಿತದ ಕೊನೆಯವರೆಗೂ ಬದುಕುತ್ತಾನೆ. ಒಂದು ರೀತಿ ತನ್ನ ಹುಟ್ಟೂರಿನಲ್ಲಿನ ಬಡತನದ ಜೀವನಕ್ಕಿಂತ ಪರ ಊರಿನ ಜೀವನ ಹಳ್ಳಿಯ ನೆನಪುಗಳೊಂದಿಗೆ ನೆಮ್ಮದಿ ಜೀವನವನ್ನೇ ನಡೆಸುತ್ತಾನೆ.

ಸಾಮಾನ್ಯವಾಗಿ ವಲಸೆಯನ್ನು ವಿರೋಧದ ನೆಲೆಯಲ್ಲಿಯೇ ಬಹುತೇಕ ಲೇಖಕರು ದಾಖಲಿಸುತ್ತಾರೆ. ಆದರೆ ಇಲ್ಲಿ ಲೇಖಕರು ಅದೊಂದು ಒಳ್ಳೆಯ ಘಟನೆ ಎಂಬುದಾಗಿ ಚಿತ್ರಿಸಿದ್ದಾರೆ. ನಾಯಕನ ಮನಸ್ಸಿನಲ್ಲಿ ವಲಸೆಯ ಕುರಿತು ತೊಳಲಾಟ ಕಂಡುಬಂದರೂ ಒಟ್ಟಾರೆ ಪರಿಣಾಮ ನಾಯಕನಿಗೆ ಅನುಕೂಲಕರವೇ ಆಗಿದೆ. ಇದೊಂದು ವಿಭಿನ್ನ ಕಥಾ ಹಂದರವಿರುವ ಚಾರಿತ್ರಿಕ, ಸಾಮಾಜಿಕ, ಕೃತಿಯಾಗಿದೆ.

ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಅಭಿಪ್ರಾಯದಂತೆ "ಈ ಕಾದಂಬರಿ ಕಮಲಾಚಾರ್ಯರ ಕುಟುಂಬ ಕತೆಯ ಜೊತೆಗೆ ದೇಶದ ಕತೆಯಲ್ಲಿ ಸೇರಿಕೊಳ್ಳುತ್ತದೆ. ಇದು ಸಾಮಾಜಿಕ ಪಲ್ಲಟದ ಸಂಕಲನವೂ ಆಗುವುದರ ಮೂಲಕ ಕಾದಂಬರಿ ಬಹುಮುಖಿ ಆಯಾಮವನ್ನು ಪಡೆದುಕೊಳ್ಳುತ್ತದೆ." (ಅದೇ, ಬೆನ್ನುಡಿ) ಕತೆಯ ವಸ್ತು ಐತಿಹಾಸಿಕವಾಗಿದ್ದರೂ ಕೃತಿಯ ರಚನೆ ಪ್ರಸ್ತುತದಲ್ಲಿ ಧಾರವಾಡ ಭಾಷೆಯೊಂದಿಗೆ ಕಲಾತ್ಮಕವಾಗಿ ಮೂಡಿಬಂದಿದೆ. ಕತೆಯ ಆರಂಭದ ಪ್ರಯಾಣವೇ ಮುಂದಿನ ಕತೆಯ ವಿವರಣೆಗೆ ಮೂಲವಾಗಿ ಪರಿಣಮಿಸುತ್ತದೆ ಮತ್ತು ಇಲ್ಲಿ ಕಮಲನಾಭನ ವಲಸೆಯ ಪರಿಣಾಮವನ್ನು ಸ್ಪಷ್ಟವಾಗಿ ಕಟ್ಟಿಕೊಡುತ್ತದೆ.

ಯು.ಆರ್.ಅನಂತಮೂರ್ತಿಯವರ 'ಕ್ಲಿಪ್ ಜಾಯಿಂಟ್'ನ ಕಥಾ ನಾಯಕ ಕೇಶವನ ಜಿಗುಪ್ಸೆ, ಕೌಟುಂಬಿಕ ಕಲಹದಿಂದ ಮನಸ್ಸಿಗೆ ನೆಮ್ಮದಿ ಹುಡುಕಿ ಲಂಡನ್ನಿಗೆ ಬರುವ ಕೇಶವನ ಮನಸ್ಸಿನ ತಳಮಳಗಳನ್ನು ಚಿತ್ರಿಸಲಾಗಿದೆ. ತಂದೆ ತೀರಿದ ನಂತರ ಮನೆಯಲ್ಲಿನ ತಾಯಿ, ತಮ್ಮ, ತಂಗಿಯರ ಜವಾಬ್ದಾರಿ ಹೊತ್ತು ಟ್ಯೂಶನ್ ಹೇಳಿ ಬದುಕುತ್ತಿದ್ದ. ಕೇಶವ ತಮ್ಮನ ಅಸಡ್ಯತನ ಬೇಜಾವಬ್ದಾರಿತನ ಎಲ್ಲವೂ ಸೇರಿ ಬದುಕಿನಲ್ಲಿ ಜಿಗುಪ್ಸೆ ಪಡುತ್ತಾನೆ. ಜೊತೆಗೆ ಅಕ್ಕನ ಮಗಳು ಭಾಗೀರತಿಯನ್ನೆ ಮದುವೆ ಮಾಡಿಕೊಳ್ಳಬೇಕೆಂಬ ತಾಯಿಯ ಒತ್ತಾಯ ನಾಲ್ಕು ಜನ ಮದುವೆಯಾಗಬೇಕಾದ ತಂಗಿಯರು, ಇಬ್ಬರು ನಿರುಪಯೋಗಿ ದಾಂಡಿಗ ತಮ್ಮಂದಿರು ಇರೋ ಮನೆಗೆ ಬೇರೆಯವರ ಮನೆ ಹುಡುಗಿ, ಕಲಿತವಳು ಬಂದು ಸೇರಿದರೆ ಖಂಡಿತ ಜಗಳವೆಬ್ಬಿಸುತ್ತಾಳೆ ಎನ್ನುವ ಕಾರಣಕ್ಕಾಗಿಯಾದರೂ ಭಾಗಿರತೀಯನ್ನು ಮದುವೆ ಯಾಗಬೇಕೆಂಬ ಅನಿವಾರ್ಯತೆ. ಕೇಶವನನ್ನು ಇಂಗ್ಲೆಂಡ್‌ಗೆ ವಲಸೆ ಹೋಗುವಂತೆ ಮಾಡುತ್ತದೆ. ಇಂಗ್ಲೆಂಡಿಗೆ ಬಂದ ಮೇಲೆ ತಿಂಗಳಿಗೆ ಹತ್ತು ಪೌಂಡಿನಂತೆ ಉಳಿಸಿ ಒಬ್ಬ ಕಾಳಸಂತೆಯ ಪಂಜಾಬಿಯೊಬ್ಬನನ್ನು ಹಿಡಿದು ಮನೆಗೆ ಇನ್ನೂರು ರೂಪಾಯಿಗಳಂತೆ ಕಳಿಸುತ್ತ ಬಂದು ಇಲ್ಲಿಗೆ ತನ್ನ ಜವಾಬ್ದಾರಿ ಮುಗಿಯಿತು

ಎಂದು ಇಂಗ್ಲೆಂಡಿನ ನಗರಗಳಲ್ಲಿ ಅಲೆಯುವ ಕೇಶವನಿಗೆ ಮತ್ತೆ ಇಲ್ಲಿಯು ನೆಮ್ಮದಿ ಸಿಗದೆ ಮತ್ತೇ ಅದೇ ಚಿಂತೆ ಕುಟುಂಬದ ಬಡತನ ತಾಯಿಯ ಕಷ್ಟ ತಮ್ಮ, ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು ಬರೆದ ಪತ್ರ ಯಾವುದನ್ನು ಮರೆಯಲಾಗದ ಸ್ಥಿತಿ. ಅಸಹ್ಯವಾದ ಒಂಟಿ ಜೀವನ ಕೆಲವೊಂದು ದಿನ ಲ್ಯಾಂಡ್ ಲೇಡಿಯ ಜೊತೆ ಗುಡ್‌ಮಾರ್ನಿಂಗ್, ಗುಡ್ ಈವೆನಿಂಗ್‌ಗಳ ಹೊರತು ಬೇರೆ ಒಂದು ಮಾತಾಡದೆ ತನ್ನೊಳಗಿನ ನರಕದಲ್ಲೆ ಬಾಳಬೇಕಾದ ಅನಿವಾರ್ಯತೆ ಕೇಶವನನ್ನು ಮತಷ್ಟು ಕುಗ್ಗಿಸುತ್ತದೆ.

ಏನೊಂದು ಹೊಸ ಬಾಳನ್ನು ಹೊಸ ಮೌಲ್ಯಗಳನ್ನು ಆಶಿಸಿ ಇಂಗ್ಲೆಂಡಿಗೆ ವಲಸೆ ಬಂದಿದ್ದನೂ ಅದು ಅವನಿಗೆ ದೊರೆಯಲಾರದೆಂಬುದು ಮನದಟ್ಟಾಗುತ್ತದೆ. ಮೂಲತಃ ಯುರೋಪಿಯನ್ನರ ಪಾಶ್ಚಾತ್ಯ ಸಂಸ್ಕೃತಿಯ ಪ್ರತೀಕವಾಗಿ ಸಿಗುವ ಸ್ಟೂಅರ್ಟ್‌ನ ಜೊತೆ ಸೇರಿ ಲಂಡನ್ನಿನ ಬೀದಿಗಳಲ್ಲಿ ಅಲೆಯುವ ಹಂತದಲ್ಲಿ ಕೇಶವನಿಗೆ ಜ್ಞಾನೋದಾಯವಾಗುತ್ತದೆ. ತನ್ನ ಎಡಬಿಡಂಗಿತನದ ಅರಿವಾಗುತ್ತದೆ. "ನಾನು ಜೀವನದಲ್ಲಿ ಯಾವ ಕೌಶಲ್ಯವೂ ಇರದ ಸಂಪೂರ್ಣ ಸ್ವಭಾವಗತನಾದ ಸಭ್ಯನೂ ಆಗಲಾರದ, ಸಂತನೂ ಆಗಲಾರದ ತಪ್ತ."(ಅನಂತಮೂರ್ತಿ ಯು.ಆರ್, ೨೦೦೧, ಪು.೧೭೬) ಎಂದು ಯೋಚಿಸುತ್ತಾನೆ.

ಹಾಗೆಯೆ ಪಾಶ್ಚಾತ್ಯ ಸ್ಟೂಅರ್ಟ್‌ನ ಮನಸ್ಥಿತಿಯೇ ಬೇರೆ ಭಾರತದಂತಹ ದೇಶದ ಬದುಕಿನಲ್ಲಿ ಜೀವನಕ್ಕೊಂದು ಉದ್ದೇಶವಿದೆ. ತಂಗಿಯರ ಮದುವೆ ಮಾಡಬೇಕು. ತಂದೆ ತಾಯಿಯನ್ನು ನೋಡಿಕೊಳ್ಳಬೇಕು, ಹೀಗೆ ಇತರೆ ನಾನಾ ಬಗೆಯ ಚಿಂತೆಗಳು ಸುಖ-ದುಃಖಗಳು ಕೊನೆವರೆಗೂ ಇರುತ್ತವೆ. ಹಾಗಾಗಿಯೇ ಸಮಾಜದ ಕುಟುಂಬಗಳಲ್ಲಿ ಇನ್ನು ರಕ್ತಸಂಬಂಧ ಜೀವಂತವಾಗಿರುವುದು. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಸ್ವಾರ್ಥದಂತೆ ಬದುಕುವ ಕುಟುಂಬಗಳಲ್ಲಿ ಬದುಕು ಭಿನ್ನವಾಗಿದೆ. "ಹದಿನಾರನೇ ವರ್ಷಕ್ಕೆ ಒಬ್ಬ ಹುಡುಗ ದುಡಿದು ಹದಿನೆಂಟಕ್ಕೆ ಮದುವೆಯಾಗಿ ಉದ್ಯೋಗ ಸಿಗದಿದ್ದರೆ ನಿರುದ್ಯೋಗ ವೇತನವೂ ದೊರಕುತ್ತದೆ. ಇನ್ನು ವಯಸ್ಸಾದ ಅಪ್ಪ ಅಮ್ಮನಂತು Old peoples Home ಎಂಬಲ್ಲಿ ಬಿಟ್ಟು ಜೀವನವನ್ನು ಸುಖವಾಗಿ ಕಳೆಯುವವರಲ್ಲಿ ಯಾವ ಉದ್ದೇಶವೂ ಇಲ್ಲದಿರ ಬಗ್ಗೆ ಯಾವ ವಿಶೇಷವೂ ಇಲ್ಲ."(ಅದೇ, ಪು.೧೫೦) ಎಂದು ಆಲೋಚಿಸುವ ಸ್ಟೂಅರ್ಟ್ ತನ್ನ ದೇಶದ ಸಂಸ್ಕೃತಿಯ ಬಗ್ಗೆಯೂ ಸಹ ಒಂದು ರೀತಿಯ ಅಸಮಾಧಾನವನ್ನೆ ತೋರಿಸುತ್ತಾನೆ.

ಹೀಗೆ ಕೇಶವ್ ಮತ್ತು ಸ್ಟೂಅರ್ಟ್ ಮನಸ್ಸಿನಲ್ಲಿ ಎರಡು ಭಿನ್ನ ಸಂಸ್ಕೃತಿ, ಭಿನ್ನ ದೇಶ, ಭಿನ್ನ ಆಲೋಚನೆಗಳು ತರ್ಕವನ್ನು ಉಂಟು ಮಾಡುತ್ತವೆ. ಕೊನೆಯಲ್ಲಿ ಹೆಣ್ಣಿನೊಂದಿಗೆ ಸಂಭೋಗಿಸಲು ಹೋಗಿ ಹದಿನಾರು ಪೌಂಡ್ ಖರ್ಚಾಗಿದ್ದಕ್ಕೆ ಪೇಚಾಡಿ ಇದೇ ಹಣವನ್ನು ಅಮ್ಮನಿಗೆ ಕಳುಹಿಸಿದ್ದರೆ ಎರಡು ತಿಂಗಳ ಸಂಸಾರ ನಿರ್ವಹಣೆಯಾಗುತ್ತಿತ್ತು ಎನ್ನುತ್ತ ಕ್ಲಿಪ್ ಜಾಯಿಂಟಿನಿಂದ ಹೊರಬರುತ್ತಾನೆ.

ಹೀಗೆ ಭಾರತೀಯ ಜೀವನ ಪದ್ಧತಿ, ಜವಾಬ್ದಾರಿ, ಬಡತನಕ್ಕೆ ಬೇಸತ್ತು ಮಾನಸಿಕ ತಳಮಳಗಳ ವಿಮೋಚನೆಗೆ ಭಾರತದಿಂದ ಇಂಗ್ಲೆಂಡ್‌ಗೆ ವಲಸೆ ಬಂದ ಕೇಶವನ ಜೀವನ ಇಂಗ್ಲೆಂಡಿನ ಸ್ವಾರ್ಥ ಬದುಕು ಒಂಟಿತನದ ಬಾಳು, ವೈಯಕ್ತಿಕ ಸ್ವಾರ್ಥದ ಜೀವನದಲ್ಲಿ ಜಿಗುಪ್ಸೆಗೊಂಡು ಮತ್ತೇ ಅದೇ ಕೌಟುಂಬಿಕ ಚಿಂತೆಯೊಳಗೆ ಮುಳುಗುವ ಕೇಶವನ ಬದುಕಿನ ಜಂಜಾಟವೇ ಈ ಕತೆಯ ವಸ್ತುವಾಗಿದೆ.

ಇಂದಿನ ಆಧುನಿಕ ಸಮಾಜದಲ್ಲಿ ಅದರಲ್ಲೂ ಭಾರತೀಯ ಸಂಸ್ಕೃತಿ ಸಂಪ್ರದಾಯಗಳೊಂದಿಗೆ ಯುವಕರ ಸಂಘರ್ಷ, ಹೊಂದಾಣಿಕೆಯಿಲ್ಲದ ಬದುಕು ಸ್ವತಂತ್ರವಾಗಿ ಬದುಕಬೇಕೆಂಬ ಹಂಬಲದಿಂದ ಹೊರ ಬರುವವರು ತಮ್ಮ ಆಸೆಯನ್ನು ಪೂರೈಸಿಕೊಳ್ಳಲು ಹೋಗಿ ಮತ್ತಷ್ಟು ಗೊಂದಲಕ್ಕಿಡಾಗುವವರ ವಲಸೆಯ ಹಿನ್ನೆಲೆ ಪರಿಣಾಮಗಳನ್ನು ಲೇಖಕರು ಸಮರ್ಥವಾಗಿ ಚಿತ್ರಿಸಿದ್ದಾರೆ. ಜಿ.ಎಸ್.ಅಮೂರ ಅವರ ಅಭಿಪ್ರಾಯದಂತೆ ಕೊನೆಗೂ "ಕೇಶವನ ಜೀವನದ ಹೊಸ ಬಾಳಿನ ಶೋಧ ಪಲಾಯನದಲ್ಲಿ ಕೊನೆಗೊಳ್ಳುತ್ತದೆ."(ಅಮೂರ ಜಿ.ಎಸ್. ೨೦೦೬, ಪು.೧೯೪)

ಶಾಂತಿನಾಥ ದೇಸಾಯಿ ಅವರ 'ಕ್ಷಿತಿಜ' ಕತೆಯಲ್ಲಿ ಬರುವ ಕಥಾ ನಾಯಕಿ ಮಂದಾಕಿನಿ ಮುಂಬೈನಿಂದ ಇಂಗ್ಲೆಂಡ್‌ಗೆ ವಲಸೆ ಹೋಗಬೇಕಾದಂತಹ ವಲಸೆ ಪ್ರಕ್ರಿಯೆಯಲ್ಲಿ ನಡೆಯುವ ಹಲವು ಅನುಭವಗಳನ್ನು ಚಿತ್ರಿಸುತ್ತದೆ. ಮುಂಬೈನಲ್ಲಿ ಮಿಶನರಿ ಸ್ಕೂಲ್‌ನಲ್ಲಿ ಕೆಲಸ ಮಾಡುತ್ತಿದ್ದ ಈಕೆ ಸ್ಕೂಲಿನವರು ಕೊಟ್ಟ ಸ್ಕಾಲರಶಿಪ್‌ನಲ್ಲಿ ಇಂಗ್ಲೆಂಡ್‌ನ ಬೆಜಲ್‌ಹರ್ಸ್ಟ್‌ನಲ್ಲಿ ಟಿ.ಡಿ (ಡಿಪ್ಲೊಮಾ ಇನ್ ಟೀಚಿಂಗ್) ಮಾಡಲು ಹಡಗಿನಲ್ಲಿ ಪ್ರಯಾಣ ಬೆಳೆಸುತ್ತಾಳೆ ಹಾಗೂ ಇಡೀ ಕತೆ ಹಡಗಿನಲ್ಲಿ ಹೊರಡುವ ವಲಸೆಯ ಪ್ರಯಾಣದಲ್ಲಿ ಚಿತ್ರಿಸಲಾಗಿದೆ.

ಭಾರತೀಯ ಸಂಸ್ಕೃತಿಯ ಸಂಕೇತವಾಗಿರುವ ಮಂದಾಕಿನಿಗೆ ಹಡಗಿನಲ್ಲಿ ಎದುರಾಗುವ ವಿವಿಧ ದೇಶದ ಜನರ ಸಂಸ್ಕೃತಿಯೊಂದಿಗೆ ಸಂಘರ್ಷಕ್ಕೆ ಉಂಟುಮಾಡುತ್ತದೆ. ಈ ಕೃತಿಯ ಕುರಿತು ಹೇಳುವ ಜಿ.ಎಸ್.ಅಮೂರವರು "ಭಾರತೀಯ ಸಂಸ್ಕೃತಿಯ ತ್ಯಾಗದ ಆದರ್ಶವನ್ನು ಮೈಗೂಡಿಸಿಕೊಂಡು ಮಂದಾಕಿನಿ ಮೊದಲ ಸಲ ಪಾಶ್ಚಾತ್ಯ ಸಂಸ್ಕೃತಿಯ ಆಘಾತಕ್ಕೆ ಒಳಗಾಗುತ್ತಾಳೆ. ಇದರಿಂದ ಅವಳಲ್ಲಿ ಉಂಟಾಗುವ ಸೂಕ್ಷ್ಮ ಪರಿವರ್ತನೆಗಳು ಮನಸ್ಸು ತಳಮಳಕ್ಕೆ ಗುರಿ ಮಾಡುತ್ತದೆ."(ಅದೇ, ಪು.೧೯೪) ಎಂದು ಈ ಕಥೆಯ ಕುರಿತು ಅಭಿಪ್ರಾಯ ಪಡುತ್ತಾರೆ.

ಉನ್ನತ ಶಿಕ್ಷಣಕ್ಕಾಗಿ ಹೊರಡುವ ಮಂದಾಕಿನಿಯ ವಲಸೆ ಚಲನೆಯಿಂದಲೇ ಆರಂಭವಾಗಿ ಚಲನೆಯಲ್ಲಿ ಮುಕ್ತಾಯವಾಗುತ್ತದೆ. ಜೊತೆಗೆ ಪ್ರಕ್ರಿಯೆಯಲ್ಲಿ ಪರಿಣಾಮವನ್ನು ಸಹ ಅನುಭವಿಸುತ್ತಾಳೆ. ಹಡಗಿನಲ್ಲಿ ಪ್ರಯಾಣಿಸುವ ವಿವಿಧ ಪ್ರಯಾಣಿಕರೂ ಸಹ ವಿವಿಧ ಉದ್ದೇಶಗಳಿಗೆ ವಲಸೆ ಹೋಗುತ್ತಿರುವವರು. ಉದಾಹರಣೆಗೆ ಇಲ್ಲಿ ಬರುವ ಪಾತ್ರಗಳಾದ ಸರೋಜ ಕಲ್ಕತ್ತೆಯಲ್ಲಿ ಡಾಕ್ಟರ್‌ಗಿದ್ದು,

ಈಗ ಅಭ್ಯಾಸಕ್ಕೆಂದು ಲಂಡನ್‌ಗೆ ವಲಸೆ ಹೋಗುತ್ತಿದ್ದಾಳೆ ಹಾಗೆಯೇ ಎಸ್.ಆರ್.ಸಿ. ಎಸ್. ಮಾಡಲು ಎಡಿನ್ ಬರೋಗೆ ಹೊರಡುತ್ತಿರುವ ಜೋಸೆಫ್ ಮತ್ತು ಲಂಡನ್‌ನಿಂದ ಲಿಮೋಬೆನಿಗೆ ಬಿಜಿನೆಸ್‌ಗಾಗಿ ವಲಸೆ ಹೋಗಿದ್ದ ಪಾಲ್‌ಲೆಗ್ವೆಯಂತಹ ಹಲವು ಪಾತ್ರಗಳು ಇಲ್ಲ ಕಾಣಿಸಿಕೊಳ್ಳುತ್ತವೆ. ಇವರೆಲ್ಲ ಸಂಸ್ಕೃತಿ ಹೆಚ್ಚು ಕಡಿಮೆ ಪಾಶ್ಚಾತ್ಯ ಸಂಸ್ಕೃತಿಯಾದರೆ ಮಂದಾಕಿನಿದೂ ಮಾತ್ರ ಭಾರತೀಯ ಸಂಸ್ಕೃತಿಯವಳಾಗುತ್ತಾಳೆ, ಹಾಗಾಗಿ ವಲಸೆ ಹೋಗುತ್ತಿರುವ ಈ ಪಾತ್ರಗಳ ವರ್ತನೆ ಕುಡಿಯುವುದು, ಡ್ಯಾನ್ಸ್, ಅಪ್ಪುಗೆ, ಲೈಂಗಿಕತೆ ಎಲ್ಲವೂ ಸಾಮಾನ್ಯವಾದುದು, ಆದರೆ ಮಂದಾಕಿನಿಗೆ ಮಾತ್ರ ಇವರ ಸ್ವಭಾವ ವಿಚಿತ್ರವೆನಿಸುತ್ತದೆ.

ಇಲ್ಲಿಯ ಒಂದು ಉದಾಹರಣೆ ಪಾಶ್ಚಾತ್ಯರ ಭಾರತೀಯ ಸಂಸ್ಕೃತಿ ಸಂಘರ್ಷಗಳನ್ನು ಪ್ರತಿನಿಧಿಸುತ್ತದೆ. ಮಿಸ್ ಜೋಸೆಫ್ ಹಾಗೂ ಮುಖರ್ಜಿಯವರ ವರ್ತನೆ ಹ್ಯಾರಿ ಮೆಕಾರ್ಥಿಯವರ ಭಾರತೀಯರ ಬಗೆಗಿನ ಟೀಕೆ ಮಂದಾಕಿನಿಯನ್ನು ಕದಡದುತ್ತದೆ. "ಇಂಡಿಯನ್ನರಲ್ಲಿ ಬಹಳ ಜನರಿಗೆ ಜೀವನ ಉಪಯೋಗಿಸುವುದೇ ಗೊತ್ತಿಲ್ಲವೆಂದು ಕಾಣುತ್ತದೆ. ಸಂಕೋಚ, ನಾಚಿಕೆ, ಅಧೈರ್ಯ, ಮೈ ಚಳಿ ಬಿಟ್ಟು ಆಡುವುದು, ನಗುವುದು, ನಲಿಯುವುದು ಗೊತ್ತೇ ಇಲ್ಲವೇನೋ ಇವರಿಗೆ".(ಶಾಂತಿನಾಥ ದೇಸಾಯಿ, ೨೦೦೬, ಪು.೩೨) ಎಂದು ಟೀಕಿಸುತ್ತಾನೆ. ಜೊತೆಗೆ ಮಂದಾಕಿನಿಗೂ ಸಮಾಧಾನ ಹೇಳುತ್ತಾನೆ. ಜಿ.ಎಸ್.ಅಮೂರ ಹೇಳುವಾಗೆ ಹ್ಯಾರಿ ಮೆಕಾರ್ಥಿಯ ಪಾತ್ರ "ಎರಡು ಸಂಸ್ಕೃತಿಗಳ ನಡುವಿನ ಮಧ್ಯಸ್ಥನಾಗುತ್ತಾನೆ."(ಅಮೂರ ಜಿ.ಎಸ್. ೨೦೦೬, ಪು.೧೯೫) ಮಂದಾಕಿನಿಯೂ ಸಹ ಭಾರತೀಯ ಸಂಸ್ಕೃತಿಯನ್ನು ಬಿಟ್ಟು ಬಾರದ ಮನಸ್ಸಿನವಳು. ಆಳವಾಗಿ ಬೇರು ಊರಿದ ಸ್ಥಿತಿಯವಳಂತೆ ಕಾಣಿಸುತ್ತಾಳೆ. "ನೋಡಿ ನಾನು ಇಂಡಿಯನ್ ಹೆಣ್ಣು, ಹಿಂದೂ ಹೆಂಗಸು, ನಾವು ಈಗ ತಾನೇ ಅಡಿಗೆ ಮನೆಯಿಂದ ಸ್ವಲ್ಪ ಹೊರಗೆ ಬಂದಿದ್ದೇವೆ. ಇದೆಲ್ಲ ನಮಗೆ ಒಂದು ಹೊಸ ವಿಶ್ವ, ಬರಿ ಪುಸ್ತಕ, ಪಿಚರ್ಸ್‌ಗಳಲ್ಲಿಯ ಕಲ್ಪನೆಯ ವಿಶ್ವ. ಓಹ್ ಹಾಗಾದರೆ ಇಂಗ್ಲೆಂಡಿಗೆ ಹೋದ ಮೇಲೆ ಹೀಗೆ ಮಾಡುವಿರಿ? ರೋಮದಲ್ಲಿ ರೋಮನ್ನರಂತೆ ಇರಬೇಕು ಗೊತ್ತೆ? ಯಾಕೆ? ಎಲ್ಲಿದರೇನು ಇಂಡಿಯನ್ನರು ಇಂಡಿಯನ್ನರೇ ಅಲ್ಲವೇ ರೋಮದಲ್ಲಿ ಇಂಡಿಯನ್ನರಂತೆ ಇರಲಿಕ್ಕಾಗದೆ?"(ಶಾಂತಿನಾಥ ದೇಸಾಯಿ, ೨೦೦೬, ಪು.೩೩) ಎಂದು ವಾದಿಸುತ್ತಾಳೆ. ಇವಳ ಈ ಮಾತುಗಳಿಂದಿರುವ ಭಾರತೀಯ ಸಂಸ್ಕೃತಿ ಆಳವಾದ ಬೇರು ಅದರ ಬದಲಾಯಿಸಲಾಗದಿದ್ದ ಮನೋಭಾವ ಗಟ್ಟಿತನವನ್ನು ತೋರಿಸುತ್ತದೆ.

ಕೊನೆಗೆ ಪರಿಚಯವಾಗುವ ಮತ್ತು ಆತ್ಮೀಯನಾಗುವ ಪಾಃಲ್‌ಲೆಗ್ವೆ ಮೂಲತಃ ಪ್ಯಾರೀಸ್‌ನವಾದ ಇವನು ಲಂಡನ್‌ನಲ್ಲಿದ್ದು ಲಿಮೋಬೇನಿಗೆ ಬಿಜಿನೆಸ್ಸಿಗೆ ಹೋಗಿದ್ದ. ಇವನ ಸೌಜನ್ಯ ಭಾರತೀಯ ದೇಶದ ಮೇಲೆ ಇರುವ ಗೌರವವೇ ಮಂದಾಕಿನಿಯನ್ನು ಸೆಳೆಯುವಂತೆ

ಮಾಡುತ್ತಾನೆ. "ನೀವು ಇಂಡಿಯನ್ಸ್ ಅಲ್ಲವೇ? ನನಗೆ ಇಂಡಿಯಾ ಬಹಳ ಸೇರುವುದು. ವಂಡರ್ ಫುಲ್ ದೇಶ ನೆಹರೂ ಬಹಳ ದೊಡ್ಡ ಮನುಷ್ಯ. ವಂಡರ್‌ಫುಲ್ ಮ್ಯಾನ್? ನಿಮ್ಮ ಹೆಸರು ಗೊತ್ತು ಮಾಡಿಕೊಳ್ಳುವ ಸಂತೋಷ ಲಭಿಸಬಹುದೇ ನನಗೆ?"(ಅದೇ, ಪು.೪೦) ಎನ್ನುವ ಸೌಜನ್ಯದ ಮಾತುಗಳೇ ಮಂದಾಕಿನಿಯ ಮನೋಭಾವ ಬದಲಾಯಿಸುವಂತೆ ಮಾಡುತ್ತದೆ. "ಮುಖರ್ಜಿಯ ಅನಾಗರಿಕ ವರ್ತನೆಗೆ ತೀರಾ ವಿರುದ್ಧವಾದ ಲೆಗ್ವಿಯ ಸುಸಂಸ್ಕೃತ ನಡತೆ, ಭಾರತದ ಬಗ್ಗೆ ಅವನಲ್ಲಿರುವ ಪ್ರೇಮ ಅವನ ಅರಾಧನಾ ಭಾವವೇ ಮಂದಾಕಿನಿಯ ಮನಸ್ಸನ್ನು ಗೆಲ್ಲುವಂತೆ ಮಾಡುತ್ತದೆ.

ಆದರೂ ಕತೆಯ ಕೊನೆಗೆ ಲೆಗ್ವಿಯ ಜೊತೆ ಮುಕ್ತವಾಗಿ ತೆರೆದುಕೊಳ್ಳುವುದು ಸಹ ಸಾಧ್ಯವಾಗದೇ ತಲೆಸುತ್ತಿ ಬೀಳುವಂತಾಗಿ ವಾಂತಿ ಮಾಡಿಕೊಳ್ಳುತ್ತಾಳೆ. ಇಂಗ್ಲೆಂಡ್ ಸಮೀಸುತ್ತಿದ್ದಂತೆ ಇಂಗ್ಲೆಂಡಿಗೆ ಹೋಗಿ ಅಲ್ಲಿರಲು ನಾನು ಆಯೋಗ್ಯಳೆಂಬ ಭಾವನೆ ಅವಳನ್ನು ಮುತ್ತಿಕೊಳ್ಳುತ್ತದೆ, " ಏನು ಮಾಡುವುದು ಅಲ್ಲಿಗೆ ಹೋಗಿ? ಬರಿಯ ಟೀ ಡೀ? ಜೀವನದ ರಸವನ್ನು ಆಸ್ವಾದಿಸುವ ನಾಲಿಗೆಯಿಲ್ಲ, ತುಟಿಗಳಿಲ್ಲ, ಕೈಗಳಿಲ್ಲ, ಬರಿ ಕಣ್ಣಿನಿಂದೇನು ತಿನ್ನುವುದಿದೆ?"(ಅದೇ, ಪು.೪೫) ರಾತ್ರಿಯ ಅವಳಿಗೆ ವ್ಯಕ್ತಿತ್ವದ ನಗ್ನ ಸತ್ಯವನ್ನು ತೋರಿಸುತ್ತದೆ.

ಒಟ್ಟಾರೆಯಾಗಿ ಈ ಕತೆ ವಲಸೆ ಪ್ರಕ್ರಿಯೆಯಲ್ಲಿ ಹಡಗಿನ ಪ್ರಮಾಣದಲ್ಲಿ ನಡೆಯುವ ಪಾಶ್ಚಾತ್ಯ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಯೊಳಗೆ ಭಿನ್ನ ರೀತಿಗಳನ್ನು ಶೋಧಿಸುತ್ತದೆ. ಇಡೀ ಕತೆ ಒಂದು ರೀತಿಯ ಚಲನೆಯ ರೂಪದಲ್ಲೇ ಸಾಗುತ್ತದೆ. ವಲಸೆಯ ಹಿನ್ನೆಲೆ ಉನ್ನತ ಶಿಕ್ಷಣವಾಗಿದ್ದರೂ ಆರಂಭದಲ್ಲಿ ಉತ್ಸಾಹದಿಂದಲೇ ಹೊರಡುವ ಮಂದಾಕಿನಿ ಕತೆಯ ಮುಕ್ತಾಯದ ವೇಳೆಗೆ ಭಿನ್ನ ಸಂಸ್ಕೃತಿ ಪ್ರಭಾವ ಅವಳಲ್ಲಿ ಬೇಸರ ನಿರುತ್ಸಾಹ ತಂದಿರುತ್ತದೆ. ಪಾಶ್ಚಾತ್ಯ ಸಂಸ್ಕೃತಿಯೊಂದು ಏನೇ ಪ್ರಭಾವ ಬೀರಿದರೂ ಭಾರತೀಯ ಸ್ತ್ರೀಯೊಬ್ಬಳ ಭಾರತೀಯ ಸಂಸ್ಕೃತಿಯ ಬೇರು ಕಳಚಿಕೊಳ್ಳದೇ ಕೊನೆಗೆ ಭಾರತೀಯಾಳಾಗಿಯೇ ಉಳಿಯುವ ಭಾರತೀಯ ಸಂಸ್ಕೃತಿಯ ಗಟ್ಟಿತನ ಈ ಕತೆಯ ಮುಖ್ಯ ವಸ್ತುವಾಗುತ್ತದೆ.

ಸುಮತೀಂದ್ರ ನಾಡಿಗರ 'ವಿಫಲತೆ' ಎಂಬ ಈ ಕತೆಯಲ್ಲಿ ಮನುಷ್ಯನ ಮಾನಸಿಕ ತಳಮಳಗಳು ದ್ವಂದ್ವಾತ್ಮಕ ಮನಸ್ಥಿತಿಯನ್ನು ಬಿಚ್ಚಿಡುತ್ತದೆ. ಹಳ್ಳಿಯಲ್ಲಿನ ಸಂಪ್ರದಾಯ, ಆಚರಣೆ, ಮೂಢನಂಬಿಕೆಗಳಿಗೆ ಬೆಸತ್ತು ಬೆಳ್ಳೂರಿನಿಂದ ಬಾಂಬೆಗೆ ವಲಸೆ ಬಂದ ಕಥಾ ನಾಯಕನ ಮನಸ್ಸಿನ ಗೊಂದಲಗಳನ್ನು ಇಲ್ಲಿ ಕಾಣಬಹುದು.

ಬೆಳ್ಳೂರಿನಲ್ಲಿ ಹುಟ್ಟಿ ತಂದೆ ಹೈಸ್ಕೂಲ್ ಮೇಷ್ಟ್ರರಾಗಿದ್ದರಿಂದ ಬೆಳ್ಳೂರು, ಸೊರಬ, ಶಿರಾಳಕೊಪ್ಪ, ಚನ್ನಗಿರಿ, ಶಿವಮೊಗ್ಗದಂತಹ ನಾನಾ ಊರುಗಳಿಗೆ ವರ್ಗಾವಣೆಯಾದಾಗ ಕುಟುಂಬದೊಡನೆ

ತಾನು ಕೂಡ ಅಲೆಯುವ ಬೇಸರ ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಹೋಗುವಂತೆ ಮಾಡುತ್ತದೆ. ಇದಷ್ಟೇ ಅಲ್ಲದೆ ತಾಯಿಯ ಕಟ್ಟುನಿಟ್ಟು ಜಾತಿ ಸಂಪ್ರದಾಯಗಳು ಸಹ ಊರು ಬಿಡುವಂತೆ ಮಾಡುತ್ತದೆ.

ಸ್ವತಂತ್ರ್ಯವಾಗಿ ಬದುಕಬೇಕೆಂಬ ಆಸೆಯಿಂದ ಬಾಂಬೆಗೆ ವಲಸೆ ಹೋಗುತ್ತಾನೆ, ನೆರವಾಗುತ್ತದೆಂದು ಧಾರವಾಡ, ಬೆಂಗಳೂರು, ಬೆಳಗಾಂ ಅಂತಹ ಊರುಗಳಿಂದ ಬೇರೆಯಾದ ಪರಿಸರ ಬಾಂಬೆಯಲ್ಲದೆ ವೈಯಕ್ತಿಕ ಸ್ವಾತಂತ್ರ್ಯಕ್ಕೆ ಅಲ್ಲಿ ಬೆಲೆ ಇದೆ. ಅವರಿವರ ಬಗ್ಗೆ ಹ್ವಾಕಿ ಬಡಿಯುವ ಜನ ಅಲಿಲ್ಲವೆಂದು ಏನೇನೂ ಕನಸು ಕಂಡು ವಲಸೆ ಹೋದವನು ನಿರಾಸೆಯಾಗುತ್ತಾನೆ. ಹಳ್ಳಿಯಲ್ಲಿದ್ದಾಗ ಪಟ್ಟಣದ ಕನಸು ಕಂಡವನಿಗೆ ಪಟ್ಟಣಕ್ಕೆ ಬಂದಾಗ ಹಳ್ಳಿಯ ನೆನಪು ಕಾಡುತ್ತದೆ. ಹೀಗೆ ಹಳ್ಳಿಯ ಸಂಸ್ಕೃತಿ, ಬೇಸರದ ಜೊತೆಗೆ ಇದೇ ಸಮಯಕ್ಕೆ ಸಿಕ್ಕ ಬಾಂಬೆಯಲ್ಲಿನ ಉದ್ಯೋಗ ಕಥಾನಾಯಕನಿಗೆ ಹಳ್ಳಿಬಿಟ್ಟು ನಗರಕ್ಕೆ ಬರಲು ಒಂದು ಅವಕಾಶ ದೊರೆತಂತಾಗುತ್ತದೆ.

ನಗರೀಕರಣ, ಜಾಗತೀಕರಣದಂತಹ ಸಂದರ್ಭಗಳು ಇಂದಿನ ಯುವಕರನ್ನು ಹೇಗೆ ಮಾನಸಿಕ ತಳಮಳಗಳಿಗೆ ನೂಕಿದೆ ಎಂಬುದನ್ನು ಲೇಖಕರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಸಂಪ್ರದಾಯಿಕ ನೆಲೆಗಳಿಂದ ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ಹಳ್ಳಿಗಳಲ್ಲಿ ಹುಟ್ಟಿ ಹಳ್ಳಿಯ ಅನಾನುಕೂಲಗಳಿಗಾಗಿಯೇ ಅಥವಾ ನಗರದ ಆಕರ್ಷಣೆಗಳು ಹೆಚ್ಚಾಗಿ ಹಳ್ಳೀಯಲ್ಲಿನ ತಂದೆ, ತಾಯಿ, ಬಂಧು-ಬಳಗವನ್ನು ಬಿಟ್ಟು ನಗರಗಳಿಗೆ ವಲಸೆ ಬರುತ್ತಿರುವವರ ಸಂಖ್ಯೆ ಹೆಚ್ಚುತ್ತಿರುವ ಹಿನ್ನೆಲೆ, ಕಾರಣ, ಸಮಸ್ಯೆಗಳನ್ನು ಚಿತ್ರಿಸುತ್ತದೆ.

ಕತೆಯಲ್ಲಿ ಬರುವ ಈ ಸಂದರ್ಭ ಮೇಲಿನ ಮಾತುಗಳನ್ನು ಸ್ಪಷ್ಟಪಡಿಸುತ್ತದೆ. ಬಾಂಬೆಗೆ ಬಂದು ಅಲ್ಲಿ ಉದ್ಯೋಗದಲ್ಲಿ ತೊಡಗಿದಾಗ ಹಳ್ಳಿಯ ಸಾಧಕ-ಬಾಧಕಗಳ ಕುರಿತು ಅಲೋಚಿಸುವ ಮನದಾಳದ ಮಾತುಗಳನ್ನು ಇಲ್ಲಿ ನೋಡಬಹುದು. "ನನಗೆ ಊರಿಗೆ ಹೋಗುವುದಕ್ಕೆ ಬೇಸರ ಮನೆಗೆ ಹೋದಾಗ ಜನಿವಾರ ಹಾಕಿಕೊಳ್ಳದಿದ್ದರೆ ಕುಲಗೆಟ್ಟು ಹೋದ ಎಂದು ತಾಯಿ ಗೊಣಗುವುದು ಹಾಕಿಕೋ ಎಂದು ಕಿರಿಕಿರಿ ಮಾಡುತ್ತಾಳೆ. ಈ ಜನಿವಾರವೋ ಬಗಲಿನಲ್ಲಿ ಸಿಕ್ಕಿ ಹಾಕಿಕೊಳ್ಳುತ್ತದೆ. ಕಾಲೇಜಿನಲ್ಲಿ ಪಾಠ ಹೇಳುತ್ತಿದ್ದಾಗ ತೋಳಿನಿಂದ ಕೆಳಗಿಳಿಯುತ್ತದೆ. ಕೊಳೆ ಅಂಟಿಕೊಂಡು ಅಸಹ್ಯ ಬರಿಸುತ್ತದೆ."(ಸುಮತೀಂದ್ರ ನಾಡಿಗ, ೨೦೦೯, ಪು.೭೧) ಎಂದು ಗೊಣಗುತ್ತಾನೆ.

ಇಂದಿನ ವಿದ್ಯಾವಂತರ ಅಭಿರುಚಿ, ಸಂಪ್ರದಾಯ, ಸಂಸ್ಕೃತಿಯಲ್ಲಿನ ಬದಲಾವಣೆಗಳನ್ನು ಇಲ್ಲಿ ಗುರುತಿಸಬಹುದು. ಹಾಗೆಯೆ ಹಳ್ಳಿಯನ್ನು ತೊರೆದು ಬಾಂಬೆಗೆ ವಲಸೆ ಬಂದ ನಂತರದಲ್ಲಿ ಉಂಟಾದ ಬಾಂಬೆ ಸಂಸ್ಕೃತಿಗೂ ಸಹ ಹೊಂದಿಕೊಳ್ಳದೇ ಜೀವನ ಅತಂತ್ರಗೊಳ್ಳುವ ಸನ್ನಿವೇಶ

ಉಂಟಾಗುತ್ತದೆ. ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕೆನ್ನುವ ಹಂಬಲದಿಂದ ಬಂದ ನಾಯಕನಿಗೆ ಬಾಂಬೆ ಸಂಸ್ಕೃತಿ, ಬದುಕಿನ ರೀತಿ, ಆತ್ಮೀಯತೆ ಇಲ್ಲದ ಬದುಕು, ಶೂನ್ಯವೆನಿಸುತ್ತದೆ.

ಜೀವನವನ್ನು ರೂಪಿಸಿಕೊಳ್ಳುವುದಕ್ಕೆ ಬಂದವನಿಗೆ ಇಲ್ಲಿಯೂ ಸಮಾಧಾನವಿಲ್ಲದಂತಾಗುತ್ತದೆ. "ಹತ್ತು ಹನ್ನೆರಡು ಜನ ಒಂದು ಕಡೆ ಸೇರಿ ಒಬ್ಬರ ಕೃತಿ ಒಬ್ಬರಿಗೆ ತೋರಿಸುವುದಕ್ಕೆ ಯಾರಿಗೂ ಬಿಡುವಿರುವುದಿಲ್ಲ. ಸರಿಯಾದ ಪತ್ರಿಕೆ ಇಲ್ಲ. ಸಾಹಿತ್ಯ ಬೆಳೆಯುವುದಕ್ಕೆ ಬೇಕಾದ ಜನರ ಸಾಂಸ್ಕೃತಿಕ ಸಹಕಾರವೂ ಸಾಲದು. ಮನಸ್ಸಿಗೆ ನೆಮ್ಮದಿ ಬೇಕಾದರೆ ಪ್ರಾಣಿಗಳ ಹಾಗಿರಬೇಕೋ ಏನೋ ರೆಸ್ಟೋರೆಂಟುಗಳಿಗೆ ನನ್ನ ಸಹೋದ್ಯೋಗಿಗಳ ಜೊತೆ ಹೋಗಿ ಬ್ಯಾಂಡ್ ಕೇಳುತ್ತಾ ಅರೆನಗ್ನ ಸ್ತ್ರೀಯರ ಕುಣಿತಗಳನ್ನು ನೋಡುತ್ತ, ಸಿಗರೇಟು ಸುಡುವುದು ಅನ್ನಿಸುವುದಿಲ್ಲ. ಬಾಂಬೆ ಜನಕ್ಕೆ Sensation ಬೇಕೇ ಹೊರತು ಆತ್ಮೀಯತೆ ಬೇಕಿಲ್ಲ."(ಅದೇ, ಪು.೭೩) ಎನ್ನುವ ನಿರ್ಧಾರಕ್ಕೆ ಬರುತ್ತಾನೆ.

ಹೀಗೆ ಎರಡು ಸಂಸ್ಕೃತಿಗಳೊಳಗಿನ ಭಿನ್ನತೆಗಳನ್ನು ಕಥಾನಾಯಕ ಅನುಭವಿಸಿದಾಗ ಗೊಂದಲಕ್ಕಿಡಾಗುತ್ತಾನೆ. ಮತ್ತೆ ಮತ್ತೆ ತನ್ನ ಊರು ನೆನಪಾಗುತ್ತದೆ. "ಏಕೆ ಹುಟ್ಟಿದೆನೋ ಏನೋ, ಹುಟ್ಟಿದ್ದು ಬೆಳ್ಳೂರಿನಲ್ಲಿ ಅಲ್ಲಿ ಹುಟ್ಟಿದ ಮೇಲೆ ಅಲ್ಲೇ ಇದ್ದಿದ್ದರೆ ಎಷ್ಟೋ ಚೆನ್ನಾಗಿತ್ತು."(ಅದೇ, ಪು.೭೦) ಎನ್ನುವ ಮಟ್ಟಿಗೆ ತನ್ನ ಮನಸ್ಸು ಚಂಚಲಗೊಳ್ಳುತ್ತದೆ.

ಈಗ ಹೋಗಬೇಕೆಂದರೆ ಅಲ್ಲಿ ಯಾರು ಇಲ್ಲ ಅಜ್ಜ-ಅಜ್ಜಿಯೂ ಇಲ್ಲ. ಇದ್ದ ಚೂರುಪಾರು ಆಸ್ತಿಯೂ ಇಲ್ಲದೆ ಬರೀ ಬೋಳು ಅಂಗಳ ಮಾತ್ರ ಉಳಿದಿದೆ. "ನೆಲದ ಋಣಾನುಬಂಧ ಬಸಿರಿನ ಋಣಾನುಬಂಧ ಎರಡು ಒಂದೆ. ನನ್ನದು ಅನಿಸುವವರೆಗೂ ಅಲ್ಲಿರುವುದು ಕಡೆಗೆ ಬೆಚ್ಚಗಿದ್ದ ಗೂಡಿನಿಂದ ಹೊರದೂಡಿ ಹೊಕ್ಕಳು ಬೇರನ್ನು ಕತ್ತರಿಸಿದಾಗ ವಿಲಿವಿಲಿ ಒದ್ದಾಡುವುದು. ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ನನ್ನದು ಅನ್ನಬಹುದಾದದ್ದನ್ನು ಹುಡುಕಿಕೊಂಡು ಅಲೆಯುವುದು."(ಅದೇ, ಪು.೭೭) ಎನ್ನುವ ಈ ಮಾತುಗಳಿಂದಲೇ ನಾಯಕನ ಇಡೀ ವ್ಯಕ್ತಿತ್ವ ಕಾಣಿಸಿಕೊಳ್ಳುತ್ತದೆ. ಹಳ್ಳಿ ಮತ್ತು ಪಟ್ಟಣಗಳ ಎರಡು ಸಂಸ್ಕೃತಿಗಳ ನಡುವೆ ವಿಲಿವಿಲಿ ಒದ್ದಾಡುವ ಮನೋಭಾವ ಈತನದಾಗುತ್ತದೆ.

ಒಟ್ಟಾರೆ ಇವತ್ತಿನ ದಿನಗಳಲ್ಲಿನ ವ್ಯಕ್ತಿಗಳಿಗೆ ಮನಸ್ಸಿನ ಚಂಚಲತೆ ಅಸಮಾಧಾನವೇ ವಲಸೆಗೆ ಕಾರಣವಾಗಿ ಕೊನೆಗೆ ಅಲ್ಲಿಯೂ ನೆಲೆ ಕಾಣದೇ ಇಲ್ಲಿಯೂ ನೆಲೆ ಕಾಣದೆ ತ್ರಿಶಂಕು ಪರಿಸ್ಥಿತಿಯಲ್ಲಿ ತೊಳಲಾಡುವ ಪರಿಸ್ಥಿತಿಯನ್ನು ಸೂಚಿಸುತ್ತದೆ. "ಹಳ್ಳಿಯಿಂದ ವಲಸೆ ಬಂದು ನೆಲೆಸಿದ ಜಾಗದಲ್ಲಿ ಅಂದರೆ ಪಟ್ಟಣದಲ್ಲಿ ಬೇರು ಬಿಡಲು, ಉಳಿದುಕೊಳ್ಳಲು ಪ್ರಯತ್ನಿಸುವ ಪರಿ"(ಅದೇ, ಮುನ್ನುಡಿ) ಎಂಬ ಮಾತನ್ನು ಟಿ.ಜಿ.ರಾಘವ ಅವರು ಅಭಿಪ್ರಾಯ ಪಡುವ ಮಾತು ಈ ಕತೆಗೆ ಸೂಕ್ತವಾಗಿದೆ.

ಸುಮತೀಂದ್ರ ನಾಡಿಗರವರ 'ಬೇರು ಬಿಟ್ಟವನು' ಈ ಕತೆಯಲ್ಲಿ ಬರುವ ಕಥಾನಾಯಕ ತನ್ನ ಜೀವನದಲ್ಲಿ ಅಲೆಮಾರಿಯಂತೆ ಅಲೆಯುವುದಕ್ಕಿಂತ ನೆಲೆಯಾಗಬೇಕೆಂದು ತವಕಿಸುವ ಚಿತ್ರಣ ಈ ಕಥೆಯ ಪ್ರಮುಖ ಅಂಶವಾಗಿದೆ. ತನ್ನ ಉದ್ಯೋಗದ ಕಾರಣಕ್ಕಾಗಿ ಅಮೆರಿಕಗೆ ಹೋಗಿ ತನ್ನ ಸಂಸಾರದ ನಂಟಿಗಾಗಿ ಆಗಾಗ್ಗೆ ಬಂದು ಹೋಗುವ ಪ್ರಕ್ರಿಯೆಯಿಂದ ಬೇಸತ್ತು ಮರಗಳು ಬೇರುಬಿಟ್ಟಂತೆ ಒಂದೇ ಕಡೆ ಬೇರು ಬಿಡಬೇಕುಅದೇ ಮನುಷ್ಯನಿಗೆ ನೆಮ್ಮದಿ ಎಂದು ತಿಳಿದು ಲಾಲಾಬಾಗಿನ ಮರದ ಜೋತೆ ಮಾತಾನಾಡಿ ತಾನು ಮರದಂತೆ ಬೇರು ಬಿಡಬೇಕೆಂದು ಆಶಿಸುತ್ತಾನೆ ತನ್ನ ಆಸೆಯಂತೆ ಕಾಲು ಆಲಕ್ಕೆ ಇಳಿಯಲ್ಪಟ್ಟಾಗ ಸಾಕಪ್ಪ ಈ ಬೇರಿನ ಸಹವಾಸವೇ ಬೇಡ ಎಂದು ಕಾಲನ್ನು ಕತ್ತರಿಸಿಕೊಳ್ಳುವ ಮೂಲಕ ತನ್ನ ಬೇರನ್ನು ಬೆಂಗಳೂರಿನಲ್ಲಿ ನೆಲೆಯೂರುತ್ತಾನೆ.

"ಮರಗಳನ್ನು ನೋಡಿದರೆ ನನಗೆ ಹೊಟ್ಟೆಕಿಚ್ಚಾಗುತ್ತದೆ. ಏಕೆಂದರೆ ಅವು ಬೇರು ಬಿಟ್ಟಿವೆ. ಊರಿಂದ ಊರಿಗೆ ತಿರುಗುತ್ತಿರುವ ನಾನು ಯಾವೊಂದು ಕಡೆಯಲ್ಲೂ ಬೇರು ಬಿಟ್ಟಿಲ್ಲ,"(ಸುಮತೀಂದ್ರ ನಾಡಿಗ, ೨೦೦೯, ಪು.೨೪೬)ಎಂದು ಲಾಲ್‌ಬಾಗ್ ಹೊಂದರ ಉದ್ಯಾನವನದಲ್ಲಿ ಪೇಚಾಡುತ್ತಾನೆ. ಈ ಮಾತುಗಳನ್ನು ಕೇಳಿಸಿಕೊಂಡ ಮರ ನನ್ನಂತೆ ನೀನು ಮರವಾಗು ಎಂದು ಹೇಳಿದ ತಕ್ಷಣ ನಾಯಕ ಚಂದ್ರಶೇಖರನ ಕಾಲುಗಳು ಭೂಮಿಯಲ್ಲಿ ಇಳಿಯಲ್ಪಡುತ್ತವೆ, ಈ ಆನಂದ ಸ್ವಲ್ಪ ಹೊತ್ತಿನ ನಂತರ ತನ್ನ ಸಂತಾನ ಮಕ್ಕಳ ಸ್ಥಿತಿಗತಿ ನೆನಪಾಗಿ ಕಾಲು ಕೀಳಲೂ ಬಾರದೆ ಹೋದಾಗ "ಅಣ್ಣ ಗೋಣಿಮರ ನಾನು ಮನೆಗೆ ಹೋಗದಿದ್ದರೆ ನನ್ನ ಮಕ್ಕಳಿಗೆ ತುಂಬ ತೊಂದರೆಯಾಗುತ್ತದೆ. ದಯವಿಟ್ಟು ನನ್ನನ್ನು ಹೋಗಲು ಬಿಡು."(ಅದೇ, ಪು.೨೪೭) ಎಂದು ಅಂಗಲಾಚುತ್ತಾನೆ ಆದರೂ ಕೊನೆಗೂ ತನ್ನ ಕಾಲನ್ನು ಕತ್ತರಿಸಿಕೊಳ್ಳುವ ಮೂಲಕ ಹೋತ್ತು ಹೋದ ಕಾಲು ಆಚೆ ಬರುತ್ತದೆ.

ಅಂದರೆ ಮನುಷ್ಯರಿಗೆ ಅನಿವಾರ್ಯವಾಗಿ ವಲಸೆ ಹೋಗಬೇಕಾದ ಸಂದರ್ಭ ಉಂಟಾಗುತ್ತದೆ, ಆ ಮನುಷ್ಯರು ತನ್ನ ಬೇರು ತನ್ನ ನೆಲವೆಂದು ಒಂದೇ ಕಡೆ ನೆಲೆಬೀಳಬೇಕೆಂದು ಹಂಬಲಿಸಿದರೂ ಇಂದಿನ ಬದುಕಿನ ಜಂಜಾಟದಿಂದ ಅದು ಸಾದ್ಯಾವಾಗದೇ ಹೋಗುತ್ತದೆ, ಕಾರಣ ಇಲ್ಲಿಯ ಕಥಾನಾಯಕ ಚಂದ್ರು ತನ್ನ ಅನಿವಾರ್ಯ ಕಾರಣದಿಂದ ಅಮೆರಿಕಗೆ ಉದ್ಯೋಗಕ್ಕಾಗಿ ವಲಸೆ ಹೋಗುತ್ತಾನೆ, ಆದರೆ ತನ್ನ ಮೂಲ ನೆಲೆಯಲ್ಲಿ ಬದುಕಬೇಕೆಂದಾಗ ತನಗೆ ಉದ್ಯೋಗ ಸಿಗದಂತಾಗುತ್ತದೆ. ಹಾಗಾಗಿ ಇವತ್ತಿನ ದಿನಗಳಲ್ಲಿ ಸಂಸಾರ ನಿರ್ವಹಣೆಗಾಗಿ ಉದ್ಯೋಗ ಅನಿವಾರ್ಯವಾಗುತ್ತದೆ, ಈ ಅನಿವಾರ್ಯತೆಯಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೋಗಲೇ ಬೇಕಾಗುತ್ತದೆ. ಎಂಬ ಅಂಶವನ್ನು ಲೇಖಕರು ಅಭಿವ್ಯಕ್ತಿಸುತ್ತಾರೆ.

ಆದರೂ ಅನಿವಾರ್ಯತೆಗಳು ಇದ್ದಾಗಲೂ ಒಂದೇ ಕಡೆ ನೆಲೆಯಾಗಬೇಕೆಂಬ ಹಂಬಲ, ಆಸೆ, ಮನುಷ್ಯನಲ್ಲಿ ಅದ್ಯಮ್ಯವಾಗಿರುತ್ತವೆ. ಇದಕ್ಕೆ ಉದಾಹರಣೆಯಾಗಿ ಚಂದ್ರು ಕತೆಯ ಕೊನೆಯಲ್ಲಿ ತನ್ನ ಕಾಲು ಕಳೆದುಕೊಂಡು ಮನೆಯಲ್ಲಿ ಕುಳಿತಾಗ ತನ್ನ ಸ್ನೇಹಿತ ಬಷೀರ್ "ಏನೋ ಚಂದ್ರು ಅಮೆರಿಕಗೆ ಹೋಗಲ್ವ ಬೆಂಗಳೂರಿನಲ್ಲಿಯೇ ಬೇರು ಬಿಟ್ಟೆಯೆ ಎಂದು ಚುಡಾಯಿಸಿದಾಗ ಚಂದ್ರು ಬೇರಿ ಸಹವಾಸವೇ ಬೇಡ ಬೇರು ಬಿಡಲಿಕ್ಕೆ ಹೋಗಿ ಕಾಲು ಕತ್ತರಿಸಿಕೊಂಡೆ ಆದರೂ ಬೇರು ಬಿಟ್ಟಿದ್ದೇನೆ ಅನಿಸುತ್ತೆ ಕಾಣದ ಬೇರುಗಳಿಂದ ಬಿಡಿಸಿಕೊಳ್ಳುವುದು ಕಷ್ಟ ಮರದ ಬೇರುಗಳನ್ನು ಕತ್ತರಿಸಬಹುದು ಭಾವನೆಯ ಬೇರುಗಳನ್ನು ಕತ್ತರಿಸುವುದು ಸಾಧ್ಯವಿಲ್ಲ"(ಅದೇ, ಪು.೨೪೭) ಎನ್ನುವ ಮಾತುಗಳು ಚಂದ್ರುವಿಗೆ ಇರುವ ಒಂದೇ ಕಡೆ ನೆಲೆಯಾಗಬೇಕೆಂಬ ಹರಿವನ್ನು ಸ್ಪಷ್ಟಪಡಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಇದೊಂದು ಕಾಲ್ಪನಿಕವಾದ ತಮಾಷೆಯಾದ ಕತೆ ಅನ್ನಿಸಿದರೂ ಇದರೊಳಗೆ ಮನುಷ್ಯನ ಒಂಟಿತನದ ಬೇಸರ ಭಾವನಾತ್ಮಕ ಸಂಬಂಧ, ಅಲೆಯುವ ಭಾವನೆಗಳು, ಚಂಚಲತೆ, ಆಸೆ, ದುಃಖ ಎಲ್ಲವೂ ಕಾಣಿಸಿಕೊಳ್ಳುತ್ತವೆ. ಬೆಂಗಳೂರಿನಿಂದ ಅಮೆರಿಕಾಗೆ ಹೋಗಿ ಬಂದ ಚಂದ್ರುವಿನ ಒಂಟಿತನ ಬೆಂಗಳೂರಿನಲ್ಲಿಯೇ ತನ್ನ ಕುಟುಂಬದೊಂದಿಗೆ ಶಾಶ್ವತವಾಗಿ ಇರಬೇಕೆಂಬ ಹಂಬಲ ಸೂಕ್ಷ್ಮವಾಗಿ ಕಾಣಿಸಿಕೊಳ್ಳುತ್ತದೆ. ಈ ಕತೆಯ ವ್ಯಕ್ತಿ ವಲಸೆಗೆ ಒಂದು ಉದಾಹರಣೆಯಾಗಿ ವಲಸೆಗಿರುವ ಹಿನ್ನೆಲೆ ಪ್ರಕ್ರಿಯೆ ಎಲ್ಲೂ ಕಾಣದೆ ಕೇವಲ ಪರಿಣಾಮಗಳನ್ನು ಮಾತ್ರ ಸಂವೇದನಾತ್ಮಕವಾಗಿ ಚಿತ್ರಿಸಿದ್ದಾರೆ

ಡಾ.ಗುರುಪ್ರಸಾದ್ ಕಾಗಿನೆಲೆರವರ 'ಬಿಳಿಯ ಚಾದರ' ಕಾದಂಬರಿಯೊಂದು ವೈಚಾರಿಕ ಕೃತಿಯಾಗಿದೆ. ಇದು ಅಮೆರಿಕಾ ಮತ್ತು ಭಾರತ ಎಂಬ ಎರಡು ದೇಶಗಳಲ್ಲಿರುವ ವೈದ್ಯಕೀಯ ವ್ಯವಸ್ಥೆಯನ್ನು ಪ್ರಮುಖವಾಗಿ ದಾಖಲಿಸುತ್ತದೆ. ಇದರ ಜೊತೆ ಜೊತೆಗೆ ಇಂದಿನ ಯುವ ಪೀಳಿಗೆಯವರ ಆಸಕ್ತಿ ಕ್ಷೇತ್ರವಾದ ಸಾಫ್ಟ್‌ವೇರ(ಮೃದುಯಂತ್ರಿ) ಮತ್ತು ವೈದ್ಯಕೀಯ(ಧನ್ವಂತ್ರಿ) ಕ್ಷೇತ್ರದಲ್ಲಾಗುವ ಒಳವ್ಯವಸ್ಥೆಯನ್ನು ಲೇಖಕರು ಚಿತ್ರಿಸುತ್ತಾರೆ.

ಹಾಗೆಯೆ ವೈದ್ಯಕೀಯ ಕ್ಷೇತ್ರದಲ್ಲಿ ದುಡಿದ ಕಾಗಿನೆಲೆರವರ ಅನುಭವಗಳೇ ಈ ಕತೆಗೆ ಪ್ರೇರಣೆಯಾಗಿದೆ. ಲೇಖಕರೇ ಈ ಕಾದಂಬರಿಯ ಕುರಿತು ಹೇಳುವ ಮಾತುಗಳನ್ನು ಗಮನಿಸುವುದಾದರೆ "ಈ ಕತೆ ನಮ್ಮ ಪೀಳಿಗೆಯದು ಹೊಸದೆಲ್ಲವೂ ಬದಲಾವಣೆಯ ಮೆಟ್ಟಿಲುಗಳೂ ಎಂದು ತಿಳಿದು ಈ ಮೆಟ್ಟಿಲುಗಳನ್ನು ಏರುವ ಸಾವಧಾನವೂ ಇಲ್ಲದೆ ಹಾರುತ್ತಿರುವ, ಬಿಡುಗಡೆಗೂ ಪಲಾಯನಕ್ಕೂ ನಡುವೆ ಇರುವ ವ್ಯತ್ಯಾಸವನ್ನು ಹೆಣಗುತ್ತಿರುವ ಅಂಚಿನ ಪೀಳಿಗೆಯದು. ಕೇವಲ ಹದಿನೈದು ವರ್ಷಗಳಲ್ಲಿ ಜಗತ್ತಿನಲ್ಲಿ ಮತ್ತು ಕರ್ನಾಟಕದಲ್ಲಿ ಎಷ್ಟು ಬದಲಾವಣೆಗಳಾಗಿವೆ ಎಂದರೆ

ಒಂದು ಪೀಳಿಗೆಯ ಕನಸಾಗಿದ್ದ ಅಮೆರಿಕಾ, ಒಂದು ರೂಪಕದ ಬೆರಗಾಗಿಯೂ ತನ್ನ ತಾಜಾತನವನ್ನು ಅತ್ಯಂತ ಸಿನಿಕವಾಗಿಯೇ ಈಗ ಉಳಿಸಿಕೊಂಡಿಲ್ಲ ಎಂದು ನನಗೆ ಬಹಳ ಸಾರಿ ಅನ್ನಿಸಿದೆ. ಆದರೆ ನನ್ನ ಅನುಭವಕ್ಕೆ ಬಂದ ತೀರ ಹತ್ತಿರದ ಪ್ರಪಂಚದ ಪ್ರಾಮಾಣಿಕ ದಾಖಲಾತಿ ಮಾತ್ರ ನನ್ನ ಉದ್ದೇಶ ಅಷ್ಟನ್ನು ಮಾತ್ರ ನಿಮ್ಮ ಮುಂದೆ ಇಟ್ಟಿದ್ದೇನೆ"(ಡಾ.ಗುರುಪ್ರಸಾದ್ ಕಾಗಿನೆಲೆ, ಮುನ್ನುಡಿ) ಎಂದು ಹೇಳಿಕೊಳ್ಳುತ್ತಾರೆ.

ಒಟ್ಟಾರೆ ಈ ಕಾದಂಬರಿಯು ಅಮೆರಿಕದಂತಹ ಹೊರದೇಶದ ವೈದ್ಯಕೀಯ ವ್ಯವಸ್ಥೆ, ಭಾರತ ದೇಶದಲ್ಲಿನ ಇಂದಿನ ಯುವ ಪೀಳಿಗೆಯ ಮನಸ್ಸುಗಳ ಹಾಗೂ ಸಂಪ್ರದಾಯ ವ್ಯವಸ್ಥೆಯಿಂದ ಆಧುನಿಕತೆಗೆ ಜಾರುತ್ತಿರುವ ಸೂಕ್ಷ್ಮ ವಿವರಗಳನ್ನು ಇಲ್ಲಿ ಕಾಣಬಹುದು. ಈ ಕತೆಯ ಪ್ರಮುಖ ಪಾತ್ರ ಶ್ರೀಧರ ಮತ್ತು ರಶ್ಮಿ. ಅಪ್ಪಟ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದ ಮಾಧವರಾಯರ ಮಕ್ಕಳಾದ ಇವರು ತಮ್ಮ ಆಯ್ಕೆಯಂತೆ ಮೃದುಯಂತ್ರಿ(ಸಾಫ್ಟ್‌ವೇರ್) ಮತ್ತು ಧನ್ವಂತ್ರಿ (ವೈದ್ಯಕೀಯ) ಕ್ಷೇತ್ರಗಳನ್ನು ಆರಿಸಿಕೊಂಡು ಅಮೆರಿಕಾಗೆ ಪಲಾಯನ ಮಾಡುತ್ತಾರೆ. ಇವರ ತಂದೆ ಮಾಧವರಾಯರು ಸಹ ಸರಕಾರಿ ನೌಕರಿಗಾಗಿ ತಮ್ಮ ಸ್ವಂತ ಊರು ರಾಣಿಬೆನ್ನೂರನ್ನು ಬಿಟ್ಟು ನಾಗಮಂಗಲಕ್ಕೆ ಬಂದು ಸೇರಿದ್ದರೂ ಆಚರಣೆ, ಮಡಿ, ಮೈಲಿಗೆಯನ್ನು ಹೆಚ್ಚು ನಂಬಿದವರಾಗಿದ್ದರೂ ಸಹ ಕಾಲದ ಬದಲಾವಣೆಯಂತೆ ತಾವೂ ಸಹ ತಮ್ಮ ನಂಬಿಕೆಗಳನ್ನು ಬಿಟ್ಟು ತಮ್ಮ ಮಕ್ಕಳನ್ನು ಅಮೆರಿಕಾಗೆ ಕಳುಹಿಸಲು ಅಸಕ್ತಿ ಹೊಂದಿದ್ದವರು.

ಇಂದಿನ ಯುವ ಪೀಳಿಗೆಯವರಿಗೆ ಎಷ್ಟೊಂದು ವಿದೇಶಿ ವಲಸೆಯ ಕುರಿತು ವ್ಯಾಮೋಹ ವಿದೆಯೋ ಅಷ್ಟೇ ವ್ಯಾಮೋಹ ಇಂದಿನ ತಂದೆ-ತಾಯಿಗರಿಗೆ ಇದೆ ಎಂಬುದನ್ನು ಮಾಧವರಾಯರ ಪಾತ್ರದ ಮೂಲಕ ನೋಡಬಹುದು. ಹೇಗಾದರೂ ಮಾಡಿ ಹಣ ಸಂಪಾದಿಸಬೇಕೆಂಬ ವ್ಯಾಮೋಹ ಬದಲಾಗುತ್ತಿರುವ ಸಮಾಜವನ್ನು ಚಿತ್ರಿಸುತ್ತದೆ. ಅದರಲ್ಲೂ ಜಾಗತೀಕರಣದ ಪ್ರಭಾವ ಇಂದಿನ ಜನತೆಯ ಮೇಲೆ ಬೀರುವ ಪರಿಣಾಮವನ್ನು ಈ ಕತೆ ಸ್ಪಷ್ಟವಾಗಿ ತೆರೆದಿಡುತ್ತದೆ. ಉದಾ: "ರಶ್ಮಿ ಶ್ರೀಧರ ಹದಿನಾರು ವರ್ಷವಿದ್ದಾಗಲೇ ಇಂಡಿಯಾ ದೇಶದ ಮನಮೋಹಕ ಉದಾರೀಕರಣ ಮತ್ತು ಪಶ್ಚಿಮದ ಸಾಮಂತರಗಳನ್ನು ಆಕರ್ಷಿಸುವ ವ್ಯಾಪಾರ ನೀತಿಯಿಂದ ತಪ್ಪಿಸಿಕೊಳ್ಳಲಾಗದ ರಶ್ಮಿ ತಾನು ಏನಾದರೂ ಆದರೆ ಮೃದುಯಂತ್ರಿಯೇ ಆಗುವುದು ಎಂದು ನಿರ್ಧರಿಸುತ್ತಾಳೆ." (ಗುರುರಾಜ ಕಾಗಿನೆಲೆ, ೨೦೦೭, ಪು.೨೧) ಅದೇ ರೀತಿ ಶ್ರೀಧರ ಧನ್ವಂತ್ರಿಯೆ ಆಗಬೇಕೆಂದು ನಿರ್ಧರಿಸುತ್ತಾನೆ.

ಈ ಎರಡು ಉದ್ಯೋಗಗಳು ಇಂದಿನ ಪೀಳಿಗೆಯವರಿಗೆ ಆಸಕ್ತಿ ಕ್ಷೇತ್ರಗಳು. ಹಾಗಾಗಿ ಯು.ಆರ್.ಅನಂತಮೂರ್ತಿಯವರು ಮುನ್ನುಡಿಯಲ್ಲಿ ಹೇಳುವಂತೆ ಶ್ರೀಧರ ಮತ್ತು ರಶ್ಮಿ

ಆಧುನಿಕರಾಗುವ ಎರಡು ಭಿನ್ನ ದಾರಿಗಳನ್ನು ಭಿನ್ನರಾಗಿರಬೇಕೆಂಬ ದೃಷ್ಟಿಯಿಂದಲೇ ಆಯ್ದು ಕೊಳ್ಳುತ್ತಾರೆ. ಹೀಗೆ ಆಯ್ದುಕೊಂಡ ಕೆಲವೇ ಪುಟಗಳಲ್ಲಿ ರಶ್ಮಿ ಅಮೆರಿಕಾದಲ್ಲಿರುತ್ತಾಳೆ. ಶ್ರೀಧರ ಗುರುಕುಲದಲ್ಲಿ ಅಭ್ಯಾಸ ಮುಗಿಸಿ ತಾನು ಸಹ ತಂದೆಯ ಮಾತಿನಂತೆ ಅಮೆರಿಕಾಗೆ ಹೋಗಿ ಇಂಟರ್‌ಷಿಪ್‌ನಲ್ಲಿ ಕೆಲಸ ಮಾಡುತ್ತಾನೆ. ಹೀಗೆ ವಲಸೆಯ ಪ್ರೇರಣೆ, ಪ್ರಕ್ರಿಯೆಯ ಬಗ್ಗೆ ವಿವರಿಸಿದ ಲೇಖಕರು ಅಮೆರಿಕಾದಲ್ಲಿ ನಡೆಯುವ ವಲಸೆಯ ಪರಿಣಾಮಗಳನ್ನು ಹೆಚ್ಚಾಗಿ ವಿವರಿಸುತ್ತಾ ಹೋಗುತ್ತಾರೆ. ಶ್ರೀಧರ ಧನ್ವಂತ್ರಿಯಾಗಿ ಅಮೆರಿಕಾಗೆ ಹೋದಾಗ ಅಲ್ಲಿಯ ಸರ್ಕಾರಿ ಆಸ್ಪತ್ರೆಗಳಲ್ಲಿ ನಡೆಯುವ ಸಿಬ್ಬಂದಿಗಳ ವರ್ತನೆ, ರೋಗಿಗಳ ಸ್ಥಿತಿಗತಿ ಮತ್ತು ಅಲ್ಲಿಯ ಸ್ತ್ರೀ ಸಿಬ್ಬಂದಿಗಳು ಲೈಂಗಿಕ ವಿಷಯದಲ್ಲಿ ತನ್ನೊಂದಿಗೆ ನಡೆದುಕೊಳ್ಳುವ ವರ್ತನೆ, ಹೀಗೆ ಎಲ್ಲಾ ತರಹದ ಅನುಭವಗಳು ಶ್ರೀಧರನಿಗೆ ಅಚ್ಚರಿಸಿಸುತ್ತದೆ. ಹಾಗೆಯೆ ಅಮೆರಿಕಾದ ಪೌರನಾಗಬೇಕೆಂದು ಗ್ರೀನ್‌ಕಾರ್ಡ್‌ಗಾಗಿ ಪರದಾಡುವ ಜನರು ಮತ್ತು ಭಾರತದಿಂದ ಅಮೆರಿಕಾಗೆ ಹೋಗಬೇಕೆಂದಾಗ ವೀಸಾಗಾಗಿ ತೊಳಲಾಡುವ ಸಂದರ್ಭಗಳು ವಲಸೆಯನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ.

ಇದರ ಜೊತೆಗೆ ಅಲ್ಲಿಯ ಆಸ್ಪತ್ರೆಗೆ ಟ್ರೀಟ್‌ಮೆಂಟ್‌ಗೆಂದು ಬರುವ ಇಲ್ಲಿನ ಪಾತ್ರಗಳನ್ನು ಗಮನಿಸುವುದಾದರೆ ಡೆತ್ ಟು ಅಮೆರಿಕ ಎಂದು ಕೂಗಿಕೊಳ್ಳುವ ಅರೆಹುಚ್ಚ ಲಕ್ಕಿ ಅಲಿ ಕೊಕೇನ್, ಔಷಧದ ಪ್ಲಾಸ್ಟಿಕ್ ಕವರ್ ಸಮೇತ ನುಂಗಿದಾಗ ಹೊರತೆಗೆಯಲು ಪರದಾಡುವ ಅಲ್ಲಿನ ಧನ್ವಂತ್ರಿಗಳ ಪರದಾಟ ಒಂದು ರೀತಿ ವ್ಯಂಗ್ಯವಾಗಿ ತಮಾಷೆಯಾಗಿ ಮೂಡಿಬರುತ್ತದೆ. ಅದರಲ್ಲೂ ನುಂಗಿದ ಆರು ಪಾಕೇಟ್‌ಗಳಲ್ಲಿ ಶೌಚಾಲಯದಲ್ಲಿ ಬಿದ್ದ ಒಂದು ಪಾಕೇಟನ್ನು ಅಲ್ಲಿಯ ವೈದ್ಯಕೀಯ ಸಿಬ್ಬಂದಿ ರಾಘವೇಂದ್ರ ಘೂಗೆ ಕಳ್ಳತನ ಮಾಡುವುದು ಒಂದು ರೀತಿಯಲ್ಲಿ ಅಲ್ಲಿಯ ವೈದ್ಯಕೀಯ ವ್ಯವಸ್ಥೆಯಲ್ಲಿ ನಡೆಯುವ ದುರಾಡಳಿತವನ್ನು ತೋರಿಸುತ್ತದೆ.

ಹಾಗೆಯೆ ಪಾಕಿಸ್ತಾನದಿಂದ ಬಂದ ಅಬ್ತರ್ ಎಂಬ ಧನ್ವಂತ್ರಿ ಅಮೇರಿಕಾದ ಪೌರನಾಗಿದ್ದರೂ ತನ್ನ ದೇಶದ ತನ್ನ ಧರ್ಮದ ಆಚರಣೆಯನ್ನು ಬಿಡದೆ ದಿನಕ್ಕೆ ಮೂರು ಬಾರಿ ನಮಾಜು ಮಾಡಿ ಶುಕ್ರವಾರ ಕಣ್ಣಿಗೆ ಕಾಡಿಗೆಯಿಟ್ಟು, ತನ್ನ ಸಂಪ್ರದಾಯವನ್ನು ನಡೆಸುತ್ತಾನೆ. ಅಂದರೆ ವಲಸೆ ಹೋಗಿ ಅಲ್ಲಿಯ ಪೌರನಾಗಿದ್ದರೂ ತನ್ನ ಬೇರಿನ ಸಂಪ್ರದಾಯವನ್ನು ಸಂಪೂರ್ಣವಾಗಿ ಕಳಚಲು ಸಾಧ್ಯವಾಗುವುದಿಲ್ಲ ಎಂಬುದನ್ನು ಈ ಪಾತ್ರ ಸ್ಪಷ್ಟಪಡಿಸುತ್ತದೆ. ಹಾಗೆಯೇ ಅಮೆರಿಕದಲ್ಲಿ ರೋಗಿಗಳಿಗೆ ಮನೆಯಲ್ಲಿ ನೋಡಿಕೊಳ್ಳುವ ಯಾವ ಸಂಬಂಧಗಳು ಇಲ್ಲದೇ ಇರುವ ಕಾರಣ ತಮ್ಮ ರೋಗ ಗುಣವಾಗುವವರೆಗೂ, ಆಸ್ಪತ್ರೆಯಲ್ಲಿ ವಾಸ ಮಾಡುವ ಪಾತ್ರಗಳು ಸಹ ಇಲ್ಲಿ ಕಾಣಿಸಿಕೊಳ್ಳುತ್ತವೆ.

ಇದೆಲ್ಲವೂ ಶ್ರೀಧರನ ವೈದ್ಯಕೀಯ ಲೋಕದಲ್ಲಿ ನಡೆಯುವ ಆಡಳಿತವನ್ನು ಸೂಚಿಸಿದರೆ ರಶ್ಮಿಯ ಮೃದುಯಂತ್ರಿ ಕ್ಷೇತ್ರದಲ್ಲಿ ಔಷಧ ತಯಾರಿಕೆಯಲ್ಲಿ ನಡೆಯುವ ಭ್ರಷ್ಟಚಾರವನ್ನು ಲೇಖಕರು

ಬಿಚ್ಚಿಡುತ್ತಾರೆ. "ಅಮೆರಿಕಾದಲ್ಲಿರುವ ಒಂದು ಅತಿದೊಡ್ಡ ನಂಬಿಕೆಯೆಂದರೆ ಪ್ರತಿ ಖಾಯಿಲೆಗೊಂದು ಗುಳಿಗೆಯಿದೆ ಅನ್ನುವುದು. ಇದು ಒಂದು ಅತಿದೊಡ್ಡ ಮಿಥ್"(ಡಾ.ಗುರುಪ್ರಸಾದ್ ಕಾಗಿನೆಲೆ, ೨೦೦೭, ಪು.೧೩೫) ಒಂದು ಚಿಕ್ಕ ತಲೆನೋವಿಗೆ ಆಸ್ಪತ್ರೆಗೆ ಹೋಗುವ ಅಲ್ಲಿಯ ರೋಗಿಗಳಿಗೆ ಭಾರತದಲ್ಲಿ ಅನೇಕ ರೋಗಗಳಿದ್ದು ನಮಗೆ ರೋಗವೇ ಇಲ್ಲವೆಂದು ಬದುಕುವ ಭಾರತೀಯರಿಗೆ ಇರುವ ಭಿನ್ನ ಸಂಸ್ಕೃತಿ ಶೈಲಿಯನ್ನು ರಶ್ಮಿ ಬರೆಯುವ ಲೇಖನ ಚಿತ್ರಿಸುತ್ತದೆ. ಯಾವುದೋ ಒಂದು ಔಷಧಿ ಕಂಪನಿ ಬಿದ್ದು ಹೋದಾಗ ಅದೇ ಔಷಧಿಯನ್ನು ಮತ್ತೊಂದು ರೂಪದಲ್ಲಿ ಮಾರಿ ಬದುಕುವ ಔಷಧ ಕಂಪನಿಗಳ ಸ್ಪರ್ಧಾತ್ಮಕ ಜಗತ್ತನ್ನು ಲೇಖಕರು ಚಿತ್ರಿಸುತ್ತಾರೆ. ಹೇಗೆ ರಶ್ಮಿ ಎಂಬ ಪಾತ್ರದ ಮೂಲಕ ರಶ್ಮಿ ಪತ್ತೆ ಹಚ್ಚುವ ಔಷಧ ಲೋಕದ ರಾಜಕಾರಣ ಕಾದಂಬರಿಯ ಅತ್ಯಂತ ಸೂಕ್ಷ್ಮವಾದ ವೈಚಾರಿಕತೆಯನ್ನು ಪತ್ತೆ ಹಚ್ಚುತ್ತದೆ.

ಒಟ್ಟಾರೆ ಶ್ರೀಧರ ರಶ್ಮಿಯ ಅಮೆರಿಕ ವಲಸೆಯಿಂದ ಅಮೆರಿಕ ದೇಶದಲ್ಲಿನ ವೈದ್ಯಕೀಯ ಲೋಕ ಮತ್ತು ಸಾಫ್ಟ್‌ವೇರ್ ಜಗತ್ತಿನ ಚಿತ್ರಣ ಇಲ್ಲಿ ಮೂಡಿಬಂದಿದೆ ಮತ್ತು ಇದರ ಜೊತೆಗೆ ಇಂದಿನ ಆಧುನಿಕ ಬದುಕಿನಲ್ಲಿನ ಯುವಕ ಯುವತಿಯರ ಸ್ವಾತಂತ್ರ್ಯ ಬದುಕು ಸಂಪ್ರದಾಯ ಆಚರಣೆಗಳಲ್ಲಿನ ಬದಲಾವಣೆಗಳ ಸೂಕ್ಷ್ಮ ವಿವರಗಳನ್ನು ಕಥೆ ಅನಾವರಣಗೊಳಿಸುತ್ತದೆ.

ಲೇಖಕರ ಈ ಎಲ್ಲಾ ಕತೆ, ಕಾದಂಬರಿಗಳಲ್ಲಿನ ವ್ಯಕ್ತಿ ವಲಸೆಯಲ್ಲಿ ಒಂಟಿತನ, ಬೇಸರ, ಜಿಗುಪ್ಸೆ, ಆತಂಕ, ತಳಮಳಗಳೇ ಹೆಚ್ಚು ವ್ಯಕ್ತವಾಗುತ್ತಿವೆ. ಜೊತೆಗೆ ದೇಶಾಭಿಮಾನ, ಊರಿನ ಅಭಿಮಾನ, ಬಿಟ್ಟುಬಂದ ಸಂಬಂಧಗಳ ತುಡಿತಗಳು, ಪ್ರೀತಿ, ವಿಶ್ವಾಸಗಳು ಹೆಚ್ಚು ಕಾಡುತ್ತವೆ. ಪುರುಷೋತ್ತಮ ಬಿಳಿಮಲೆಯವರು ಹೇಳುವ ಹಾಗೆ "ಒಂದೆಡೆಯಿಂದ ಇನ್ನೊಂದೆಡೆ ಹೋಗಿ ನೆಲೆಸುವ ಗುಂಪುಗಳು ಆರಂಭಿಕ ಹಂತದಲ್ಲಿ ಒಂದು ಬಗೆಯ ಸಂಘರ್ಷಗಳನ್ನು ಹೆದರಿಸಲೇ ಬೇಕಾಗುತ್ತದೆ. ಕಾಲನಂತರ ಆ ಪರಿಸರಕ್ಕೆ ಹೊಂದಿಕೊಳ್ಳುತ್ತಾ ಹೊಸದೊಂದು ಸಂಸ್ಕೃತಿ ಹುಟ್ಟಿ ಹಾಕಲು ವಲಸೆ ಕಾರಣವಾಗುತ್ತದೆ. ಭಾರತೀಯ ಸಂಸ್ಕೃತಿ ಎಂದು ಇಂದು ನಾವು ಏನನ್ನು ಗುರುತಿಸುತ್ತೇವೆ ಅದು ಶತಮಾನಗಳ ವಲಸೆ."(ಪುರುಷೋತ್ತಮ ಬಿಳಿಮಲೆ, ಪು.೧೬೭) ಎಂಬ ಮಾತಿಗೆ ಪೂರಕವಾಗಿದೆ, ಶ್ರೀನಿವಾಸ ವೈದ್ಯರವರ ಹಳ್ಳ ಬಂತು ಹಳ್ಳದ ಕಮಲನಾಭನ ವ್ಯಕ್ತಿ ವಲಸೆ ಸೂಕ್ತವಾಗುತ್ತದೆ. ಭಿನ್ನ ಪರಿಸರವಷ್ಟೇ ಅಲ್ಲದೇ ಹೊಸದೊಂದು ದೇಶಕ್ಕೆ ಹೋಗುವ ಕ್ಲೀಪ್ ಜಾಯಿಂಟನ ಕೇಶವ, ತ್ರಿಶಂಕುವಿನ ಶ್ರೇಯಸ್, ಕ್ಷಿತಜದ ಮಂದಾಕಿನಿ ಪಾತ್ರಗಳಲ್ಲಿ ಹೊಸ ಸಂಸ್ಕೃತಿಯ ನಡುವಿನ ಸಂಘರ್ಷಗಳು ವ್ಯಕ್ತಿ ಸ್ವಾತಂತ್ರ್ಯ ಎದ್ದು ಕಾಣುತ್ತದೆ. ಹೀಗೆ ಹಲವು ಕತೆ ಕಾದಂಬರಿಗಳು ವಲಸೆಯ ಭಿನ್ನ ಅಯಾಮಗಳನ್ನು ಚರ್ಚಿಸುವುದರ ಜೋತೆಗೆ ಲೇಖಕರು ಅಭಿವ್ಯಕ್ತಿಸುವ ಜಾಗತೀಕರಣ, ಶಿಕ್ಷಣ, ನಗರೀಕರಣ, ಸ್ವಾತಂತ್ರ್ಯ ಚಳುವಳಿಗಳಂತಹ ಹಲವು

ಅಂಶಗಳಿಂದ ವಲಸೆ ಪ್ರಕ್ರಿಯೆ ಹೇಗೆ ಸಂಬಂಧಿಸುತ್ತದೆ ಎಂಬುದನ್ನು ಇಲ್ಲಿ ಬರುವ ಕತೆಗಳಾದ, ಬೀಜ ಮತ್ತು ಚಿಗುರಿದ ಕನಸು ಕಾದಂಬರಿಯಲ್ಲಿ ಶಂಕರ ಮತ್ತು ಶ್ರೇಯಾಂಸನ ನಗರ ಬದುಕಿನ ತೋಳಲಾಟಗಳು ಜಂಜಾಟಗಳನ್ನು ಗಮನಿಸಿದರೆ ಕ್ಲಿಪ್ ಜಾಯೆಂಟ, ಕ್ಷಿತಿಜ, ತ್ರಿಶಂಕು ಕಾದಂಬರಿಯಲ್ಲಿ ಭಾರತೀಯ ಮತ್ತು ವಿದೇಶಿ ಸಂಸ್ಕೃತಿಗಳ ಭಿನ್ನತೆಯನ್ನು ಚಿತ್ರಿಸುತ್ತದೆ. ಜೋತೆಗೆ ವಲಸೆ ಹಕ್ಕಿಯ ಹಾಡು ಮತ್ತು ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಸ್ವಾತಂತ್ರ್ಯ ಚಳುವಳಿಯಿಂದ ಉಂಟಾಗುವ ಜನರ ಸಾವು ನೋವುಗಳು ಸಾಮಾನ್ಯ ಜನರ ಬದುಕಿನ ಸ್ಥಿತಿಗತಿಗಳು ಮತ್ತು ಅಂದಿನ ರಾಜಕೀಯ ಪರಿಸ್ಥಿತಿಗಳನ್ನು ವಿವರಿಸುತ್ತದೆ.

### ೫.೨. ಕುಟುಂಬ ವಲಸೆ

ಪರಿಸ್ಥಿತಿಗಳನ್ನು ಎದುರಿಸುವುದಕ್ಕಾಗಿ ಕುಟುಂಬಗಳು ವಲಸೆ ಹೋಗುವುದು ಸರ್ವೆ ಸಾಮಾನ್ಯ ಅಥವಾ ಊರಿನಿಂದ ಕುಟುಂಬಕ್ಕೆ ವಿಪತ್ತು ಬರಬಾರದು ಎನ್ನುವುದಕ್ಕಾಗಿ ವಲಸೆ ಅನಿವಾರ್ಯವಾಗು ವುದು ಸರ್ವೆ ಸಾಮಾನ್ಯವಾಗಿದೆ. ಹಾಗೂ ಇವಷ್ಟೆ ಅಲ್ಲದೇ ಕೆಲವು ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಸೆಗಳಿಂದಾಗಿ ಕುಟುಂಬಗಳ ವಲಸೆ ಮನುಷ್ಯನ ಬದುಕಿನಲ್ಲಿ ಸಂಭವಿಸುತ್ತವೆ ಉದಾಹರಣೆಗೆ ಕೊಳಗ, ಭೂಮಿ ಮತ್ತು ಬೀಜ, ಡಾಲರ್ ಸೋಸೆ, ಆಳುಮಗದಂತಹ ಹಲವು ಕತೆ ಕಾದಂಬರಿಗಳು ಹಲವು ಸಮಸ್ಯೆ, ಅನಿವಾರ್ಯತೆಗಳಿಂದ ಕುಟುಂಬ ಸಮೇತ ವಲಸೆ ಹೋಗಿ ಬದುಕು ಕಂಡುಕೊಳ್ಳುವ ಅಥವಾ ಬದುಕನ್ನು ಇನ್ನಷ್ಟು ದುರ್ಬಲಗೊಳಿಸಿಕೊಳ್ಳುವ ಸಂಗತಿಗಳನ್ನು ಈ ಕತೆ ಕಾದಂಬರಿಗಳ ಮೂಲಕ ನೋಡಬಹುದಾಗಿದೆ. ಈ ಹಿನ್ನಲೆಯಲ್ಲಿ ನಾ.ಡಿಸೋಜರವರ ಕೊಳಗ ಕಾದಂಬರಿಯನ್ನು ನೋಡುವುದಾದರೆ

ಇದೊಂದು ಐತಿಹಾಸಿಕ ಕಾಗೋಡು ಭೂ ಚಳುವಳಿ ಕುರಿತ ಸಾಮಾಜಿಕ ಕಾದಂಬರಿಯಾಗಿದೆ. ಹಿಂದೆ ಜಮೀನ್ದಾರರ ಹೊಲಗಳಲ್ಲಿ ಗೇಣಿಗೆ ದುಡಿಯುತ್ತಿದ್ದ ರೈತರು ಗೌಡರ ಶೋಷಣೆಗಳನ್ನು ತಪ್ಪಿಸಿಕೊಂಡು ಜೀವನಕ್ಕೆ ಆಧಾರವಾಗಿದ್ದ ಗೇಣಿ ಹೊಲಗಳನ್ನು ಬಿಟ್ಟು ಬೇರೊಂದು ಹಳ್ಳಿಯ ಗೌಡನ ಹೊಲಗಳನ್ನು ಹುಡುಕಿಕೊಂಡು ಗುಳೆ ಬರುವ ರೈತರ ಸಂಕಷ್ಟಗಳು ಈ ಕತೆಯ ಪ್ರಮುಖ ಅಂಶಗಳಾಗಿರುತ್ತವೆ.

ಕೊಳಗ ಅಂದರೆ ಭತ್ತವನ್ನು ಅಳೆಯುವ ಒಂದು ಸಾಧನ. ಈ ಆಳೆಯುವ ಸಾಧನದಿಂದಲೇ ಅನ್ಯಾಯ ಮಾಡುವ ಗೌಡನ ವಿರುದ್ಧ ನಡೆಯುವ ಚಳುವಳಿಯೇ ಈ ಕತೆಗೆ ವಸ್ತುವಾಗುತ್ತದೆ. ೧೯೫೧ ರಲ್ಲಿ ಕಾಗೋಡಿನಲ್ಲಿ ನಡೆದ ಉಳುವವನೇ ಹೊಲದೊಡೆಯ ಎಂಬ ಘೋಷಣೆಯೊಂದಿಗೆ ಆರಂಭವಾದ ಕಾಗೋಡು ಚಳುವಳಿ ಮತ್ತು ಇದಕ್ಕೂ ಎರಡು ದಿನದ ಮುಂಚೆಯೇ ಕಾಗೋಡಿಗೆ ಹತ್ತಿರದ ತಡಗಳಲೆಯಲ್ಲಿನ ಭೂ ಮಾಲೀಕರು ಮತ್ತು ಭೂಮಿಯನ್ನು ಉಳಲು ಬಂದ ಗೇಣಿದಾರ

ರನ್ನು ತಡೆದು ಅವರ ನೊಗ, ನೇಗಿಲುಗಳನ್ನು ಕಡಿದು ಕೊಚ್ಚಿ ಹಾಕಿದರು. ಇದರ ಮಾರನೆಯ ದಿನವೇ ಭೂ ಮಾಲೀಕರು ತುಂಡರಿಸಿ ಹಾಕಿದ ನೊಗ, ನೇಗಿಲುಗಳನ್ನು ಹಿಡಿದು ರೈತರು ಸಾಗರದ ಪೇಟೆಯಲ್ಲಿ ಬೃಹತ್ ಮೆರವಣಿಗೆಯನ್ನು ಮಾಡಿದರು. ಅನಂತರವೇ ಕಾಗೋಡು ಚಳುವಳಿಗೆ ತೀವ್ರತೆ ಬಂದಿತು ಎಂದು ಲೇಖಕರು ತಮ್ಮ ಮುನ್ನುಡಿಯಲ್ಲಿ ನಡೆದ ಕಥೆಯನ್ನು ವಿವರಿಸುತ್ತಾರೆ. ಇವರ ಈ ಕತೆಗೆ ವಸ್ತುವನ್ನಾಗಿ ಬಳಸಿಕೊಂಡು ರೈತರ ಬಡತನ, ಹಸಿವು, ದಾರಿದ್ರ್ಯ ಜೊತೆಗೆ ಗೌಡನ ಶೋಷಣೆಯ ವಿವಿಧ ರೂಪಗಳನ್ನು ಚಿತ್ರಿಸುವ ಆಶಯ ಇವರದ್ದಾಗಿದೆ.

ಇನ್ನು ಈ ಕಾದಂಬರಿಯ ಮುಖ್ಯ ಪಾತ್ರಗಳಾಗಿ ಬರುವ ಕಥಾನಾಯಕನಾದ ದ್ಯಾವನ ಹೆಂಡತಿ ಕರಿಯಮ್ಮ ಮತ್ತು ಮಕ್ಕಳಾದ ಹುಚ್ಚ, ನಾಗ, ಮೈಲಿಯ ಸುತ್ತ ಈ ಕತೆಯನ್ನು ಹೆಣೆಯಲಾಗುತ್ತದೆ. ದ್ಯಾವ ಊರಿನ ಲಿಂಗೇಗೌಡನ ಹೊಲವನ್ನು ಗೇಣಿಗೆ ತೆಗೆದುಕೊಂಡು ವ್ಯವಸಾಯ ಮಾಡುತ್ತ ಜೀವನ ಸಾಗಿಸುತ್ತಿದ್ದ. ದ್ಯಾವ ಮಾಡಿದ ಸಾಲಕ್ಕೆ ದ್ಯಾವನ ಮಕ್ಕಳನ್ನು ಗೌಡ ಶಾಲೆಯನ್ನು ಬಿಡಿಸಿ ಜೀತದ ಆಳಾಗಿ ದುಡಿಯಲು ಇಟ್ಟುಕೊಳ್ಳುವುದು ಗೌಡನ ಮೊದಲನೆಯ ಶೋಷಣೆಯಾಗಿ ಪರಿಣಿಮಿಸುತ್ತದೆ. ಜೊತೆಗೆ ಜಮೀನ್ದಾರರ ಹೊಲಗಳಲ್ಲಿ ಗೇಣಿಗೆ ತೆಗೆದುಕೊಕೊಂಡ ಕಾರಣಕ್ಕಾಗಿ ಗೌಡನ ಮನೆಯಲ್ಲಿ ಒಬ್ಬರೋ ಅಥವಾ ಇಬ್ಬರೂ ಜೀತದಾಳುಗಳಾಗಿ ದುಡಿಯುವುದು ವಾಡಿಕೆ. ಇದಷ್ಟೇ ಅಲ್ಲದೆ ದ್ಯಾವ ಹೆಂಡತಿ ಕರಿಯಮ್ಮನ ಮೇಲೆ ಗೌಡನ ಕಣ್ಣು ಬಿದ್ದಾಗ ದ್ಯಾವ ಅನಿವಾರ್ಯದಿಂದ 'ಮರಸ' ಹಳ್ಳಿಯನ್ನು ಬಿಟ್ಟು ವಲಸೆ ಬರುತ್ತಾರೆ.

ಬಿಡುವ ಮುಂಚೆ ಮುಂದಿನ ದಾರಿಯನ್ನು ಕಂಡುಕೊಳ್ಳಲು ದ್ಯಾವ ಪರದಾಡುತ್ತಾನೆ. ಕೊನೆಗೆ ತಡಗಳಲೆಯ ಸ್ವಾಮಿಗೌಡರ ಹತ್ತಿರ ಗೇಣಿಗೆ ಹೊಲ ಸಿಕ್ಕಾ ತನ್ನ ಕುಟುಂಬದ ಜೊತೆ ಗೌಡನಿಗೂ ಹೇಳದೆ ಊರು ಬಿಟ್ಟು ತಡಗಳಲೆಗೆ ವಲಸೆ ಬರುತ್ತಾನೆ. ಗೌಡನಿಗೂ ತಿಳಿಯಬಾರದೆಂದು ಹೊರಡುವ ಪ್ರಯಣವಾದ್ದರಿಂದ ರಾತ್ರೋ ರಾತ್ರಿ ಪಾತ್ರೆ ಪಗಡ ವಸ್ತುಗಳೆನ್ನೆಲ್ಲ ಗಾಡಿ ತುಂಬಿ ಗಂಟುಕಟ್ಟುವ ಕೆಲಸ ಆರಂಭವಾಗುತ್ತದೆ. ಗೌಡನ ಶೋಷಣೆಯಿಂದ ತಪ್ಪಿಸಿಕೊಳ್ಳಲು ಇದೊಂದು ಭಿನ್ನ ಮಾರ್ಗವಾದರೆ ಇನ್ನೊಂದು ತರದರಲ್ಲಿ ಹುಟ್ಟಿ ಬೆಳೆದ ಊರನ್ನು ಬಿಡಬೇಕಾದಾಗ ಕರಳು ಕಿವುಚಿ ಬಂದಂತಾಗುತ್ತದೆ. ಇಲ್ಲಿಯ ಮರಗಿಡಬಳ್ಳಿಗಳು, ಕೆರೆ, ಹಳ್ಳಗಳು, ಒಡೆಯ ಮನೆ, ಗದ್ದೆಗಳು, ಕೇರಿಯ ತನ್ನವರ ಬಿಡಾರಗಳು, ಕಣ್ಣು ಮುಚ್ಚಿಕೊಂಡು ಬೇಕಾದರೂ ತಿರುಗಾಡುವಷ್ಟು ಪರಿಚಿತವಾಗಿದ್ದ ಪರಿಸರವನ್ನು ಬಿಟ್ಟು ಹೋಗಬೇಕೆಂದಾಗ ಸಂಕಟವಾಗುತ್ತದೆ. ಆದರೆ ಅನಿವಾರ್ಯ ಎಲ್ಲವನ್ನು ಸಹಿಸಿಕೊಳ್ಳಬೇಕಾಗುತ್ತದೆ.

ಹಳೆಯ ಪರಿಸರವನ್ನು ಬಿಟ್ಟು ಬರುವ ನೋವು ಒಂದು ಕಡೆ ಇದ್ದರೆ ಹೊಸ ಪರಿಸರವನ್ನು ಹೊಂದಿಕೊಳ್ಳುವಲ್ಲಿನ ಆತಂಕ ದ್ಯಾವನ ಕುಟುಂಬಕ್ಕೆ ಒಂದು ರೀತಿಯ ಭೀತಿಯಾದಾಗಿತ್ತು.

ಅಲ್ಲಿಯ ಜನ ಗೌಡನ ನಡವಳಿಕೆ, ಎಲ್ಲವೂ ಹೊಸದು ಎಲ್ಲರೂ ಅಪರಿಚಿತರು. ಆದರೆ "ಇಲ್ಲಿ ಯಾರು ಹೇಗೆ ಎಂಬುದು ಗೊತ್ತಿತ್ತು. ಕೆಲವರೊಡನೆ ಸಲಿಗೆ, ಕೆಲವರ ಜತೆ ಸ್ನೇಹ, ಕೆಲವರನ್ನು ತುಸು ದೂರ ಇರಿಸಿಕೊಂಡೇ ವ್ಯವಹರಿಸುವ ಜಾಣ್ಮೆ ಕರಗತವಾಗಿತ್ತು. ಇಲ್ಲಿಯ ಹಾಗೆ ಅಲ್ಲಿ ವ್ಯವಹಾರದಲ್ಲಿ ಪಳಗಲು ದಿನ ಬೇಕಾಯಿತು. ತಡಗಳಲೆಯ ಗೌಡರು ಹೇಗೋ"(ಡಿಸೋಜ ನಾ, ೨೦೦೧, ಪು.೫೦) ಎಂದು ದ್ಯಾವ ಚಿಂತಿಸುತ್ತಾನೆ.

ದ್ಯಾವನ ಈ ದೀರ್ಘ ಆಲೋಚನೆಯಲ್ಲಿ ನೋವಿತ್ತು, ಆತಂಕವಿತ್ತು ಮುಂದೆ ಹೇಗೂ ಎಂಬ ಭಯವಿತ್ತು. ಜೊತೆಗೆ ತನ್ನೂರಿನ ಜನ, ಪರಿಸರದ ಬಗ್ಗೆ ಅಭಿಮಾನವಿತ್ತು. ಹೀಗೆ ಒಬ್ಬ ರೈತ ತನ್ನ ಕುಟುಂಬದೊಂದಿಗೆ ಕೆಲವು ಅನಿವಾರ್ಯ ಕಾರಣದಿಂದ ಗೌಡನ ಶೋಷಣೆಯಿಂದ ಮತ್ತೊಂದು ಊರಿನ ಗೌಡನ ಹತ್ತಿರ ಗಣಿಗೆ ಹೊಲ ಮಾಡಲು ಬರುವಾಗಿನ ನೋವು. ದ್ಯಾವನಿಗಷ್ಟೇ ಅಲ್ಲದೆ ದ್ಯಾವನ ಹೆಂಡತಿ ಕರಿಯಮ್ಮನಿಗೆ ಇತ್ತು. "ಕರಿಯಮ್ಮ ಕೂಡ ಸೋರ್ ಎಂದು ಮೂಗಿನಿಂದ ಸದ್ದು ಹೊರಡಿಸಿ ಕಣ್ಣೊರೆಸಿಕೊಂಡಳು. ಅವಳು ಕೂಡ ಇನ್ನು ಎಲ್ಲವನ್ನು ಹೊಸದಾಗಿ ಆರಂಭಿಸಬೇಕಿತ್ತು. ಅಲ್ಲಿ ಮೊಟ್ಟೆಗೆ, ತರಕಾರಿಗೆ, ಹಾಲಿಗೆ ನಿತ್ಯದ ಗಿರಾಕಿಗಳಿದ್ದರು. ಸಾಲ ಕೊಡಲು ಶೆಟ್ಟಿಯಿದ್ದ. ಇನ್ನು ತಡಗಳಲೆಗೆ ಹತ್ತಿರದ ಊರೆಂದರೆ ಕಾಗೋಡು. ಅಲ್ಲಿ ಹಾಲಿಗೆ, ಮೊಟ್ಟೆಗೆ ಜನ ಹುಡುಕಬೇಕು. ಸಾಲ ಕೊಡುವಂತಹ ಅಂಗಡಿ ಹುಡುಕಿಕೊಳ್ಳಬೇಕು. ಮುಖ್ಯವಾಗಿ ಮರಸದಲ್ಲಿದ್ದ ಸಾವಿತ್ರಿ, ಬೈರನ ಹೆಂಡತಿ ಲಕ್ಕಿ ಕಷ್ಟ ಕಾಲದಲ್ಲಿ ನೆರವಿಗೆ ಬರುತ್ತಿದ್ದರು. ನಾಗಿ, ಮೈಲಿಯನ್ನು ಇವರ ಮನೆಗಳಲ್ಲಿ ಬಿಟ್ಟು ಎಷ್ಟೋ ಬಾರಿ ಒಡೆಯರ ಮನೆಗೆ ಹೋಗುತ್ತಿದ್ದ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಇಂತಹ ಆತ್ಮೀಯರನ್ನು ಕೂಡ ಇನ್ನು ತಡಗಳಲೆಯಲ್ಲಿ ಹುಡುಕಿಕೊಳ್ಳಬೇಕು. ಹೊಸ ಊರು, ಹೊಸ ಜನ ಎಲ್ಲವನ್ನು ಹೊಸದಾಗಿ ಆರಂಭಿಸಬೇಕು"(ಅದೇ, ಪು.೫೧) ಎಂದು ಚಿಂತೆ ಮಾಡುತ್ತಾಳೆ.

ಇವಳ ಈ ವೇದನೆಯಿಂದ ಒಂದು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಬಂದಾಗ ಚಿಕ್ಕ ಚಿಕ್ಕ ಕೆಲಸಗಳಿಗೂ ಉಂಟಾಗುವ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಲೇಖಕರು ಗ್ರಹಿಸುತ್ತಾರೆ. ಗಂಡನಿಗೆ ಒಂದು ತರದಲ್ಲಿ ಗೌಡನಿಂದ ತಪ್ಪಿಸಿಕೊಳ್ಳುವ ಈ ಕುಟುಂಬಕ್ಕೆ ವಲಸೆ ಪರ್ಯಾಯ ಮಾರ್ಗವಾದರೆ ಇನ್ನೊಂದು ರೀತಿಯಾಗಿ ಹುಟ್ಟಿ ಬೆಳೆದ ಪರಿಸರವನ್ನು ಬಿಟ್ಟು ಹೋಗಬೇಕಲ್ಲ ಎಂಬ ಚಿಂತೆ ಈ ಕುಟುಂಬಕ್ಕೆ ಕಾಡುತ್ತದೆ. ಹೀಗೆ ನಾನಾ ಆಲೋಚನೆ ಆತಂಕ ಭಯದಿಂದಲೇ ವಲಸೆ ಬಂದ ದ್ಯಾವನ ಕುಟುಂಬ ತಡಗಳಲೆಯ ಸ್ವಾಮಿಗೌಡರ ಹತ್ತಿರ ಗೇಣಿದಾರನಾಗಿ ಬಂದು ನೆಲೆಯಾಗುತ್ತಾನೆ. ಇಲ್ಲಿಯೂ ಸಹ ದ್ಯಾವನಿಗೆ ಹಸಿವು, ಬಡತನ, ಸಾಲ ತಪ್ಪದೇ ಒಂದು ದಿನ ಅದೇ ಚಿಂತೆಯಲ್ಲಿ ತೀರಿಕೊಳ್ಳುತ್ತಾನೆ. ಇವನ ನಂತರ ಬಂದ ದ್ಯಾವನ ಮಗ ಹುಚ್ಚ ಮನೆಯ ಜವಾಬ್ದಾರಿಯನ್ನು

ಹೊತ್ತುಕೊಳ್ಳುತ್ತಾನೆ. ಚಿಕ್ಕವನಿದ್ದಾಗ ಶಾಲೆಗೆ ಹೋಗಿ ಓದು ಕಲಿತ ಅಲ್ಪಸ್ವಲ್ಪ ಜ್ಞಾನ ಹುಚ್ಚನನ್ನು ವಿಚಾರವಂತನನ್ನಾಗಿ ಮಾಡುತ್ತದೆ. ಹೀಗಾಗಿ ರೈತರ ಮೇಲೆ ನಡೆಯುತ್ತಿದ್ದ ಗೌಡನ ಶೋಷಣೆಯನ್ನು ಬಯಲಿಗೆಳೆಯುವ ಸಮಯಕ್ಕೆ ಕಾಯುತ್ತಾನೆ.

ಹಾಗೆಯೇ ಹುಚ್ಚನಿಗೆ ಪ್ರೇರಣೆಯಾಗಿ ಬಂದವನು ಗಣಪತಿ. ಜಮೀನ್ದಾರರ ವಿರುದ್ಧ ಚಳುವಳಿ ನಡೆಯಲು ರೈತರ ಮೇಲೆ ನಡೆಯುತ್ತಿದ್ದ ಅನ್ಯಾಯ ಶೋಷಣೆಗಳನ್ನು ತಪ್ಪಿಸಿಕೊಳ್ಳಲು ಹೋರಾಟಕ್ಕಿಳಿಯುತ್ತಾನೆ. ಜೊತೆಗೆ ರೈತರಲ್ಲಿ ಹಳ್ಳಿ ಹಳ್ಳಿಗೆ ಹೋಗಿ ಗೌಡನ ಶೋಷಣೆಯ ವಿರುದ್ಧ ಜಾಗೃತಿ ಮೂಡಿಸುತ್ತಾನೆ ಹಾಗೂ ಹಳ್ಳಿಯ ಮಕ್ಕಳಿಗೆ ಪಾಠ ಹೇಳಿಕೊಡುವ ಕೆಲಸ ಮಾಡುತ್ತಾನೆ.

ಇವನ ಪರಿಚಯದಿಂದಾಗಿ ಗೌಡನಿಗೆ ಕೊಡುತ್ತಿದ್ದ ಒಂದು ಎಕರೆಗೆ ೧೦ ಚೀಲ ಗೇಣಿ ಅಂದರೆ ೨೦ ಕೊಳಗದ ಅಳತೆಯಲ್ಲಿ ಮಾಡುತ್ತಿದ್ದ ಮೋಸವನ್ನು ಹುಚ್ಚ ಬಯಲಿಗೆಳೆಯುತ್ತಾನೆ. ಇದರಿಂದಾಗಿ ರೈತರೆಲ್ಲಾ ಒಗ್ಗಟ್ಟಾಗಿ ಭತ್ತವನ್ನು ಗೌಡನ ಮನೆ ಮುಂದೆ ಸುರಿದು ಹೋರಾಟ ನಡೆಸುತ್ತಾರೆ. ಇದರ ಪರಿಣಾಮವಾಗಿ ಗೌಡ ರೈತರ ನೇಗಿಲುಗಳನ್ನು ಮುರಿದು ಹಾಕುತ್ತಾನೆ. ಇದರಿಂದ ರೊಚ್ಚಿಗೆದ್ದ ರೈತ ಗಣಪತಿ, ಹುಚ್ಚನ ಮುಖಂಡತ್ವದಲ್ಲಿ ಮತ್ತು ಅದೇ ಸಮಯಕ್ಕೆ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿ ಪ್ರೇರಣೆಯಿಂದ ಬಹುದೊಡ್ಡ ಹೋರಾಟವನ್ನು ಮಾಡಿ 'ಹೂಳುವವನೇ ಹೊಲದೊಡೆಯ' ಎಂಬ ಘೋಷಣೆ ಜಾರಿಗೆ ಬಂದು ಹೋರಾಟ ಯಶಸ್ವಿಯಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಕತೆ ವಲಸೆಯ ಪ್ರಕ್ರಿಯೆಯನ್ನು ಮುಖ್ಯ ವಸ್ತುವಾಗಿರಿಸಿ ಕೊಳ್ಳದಿದ್ದರೂ ರೈತರ ಗೇಣಿ ಸಮಸ್ಯೆಯಲ್ಲಿ ಬಂದು ಹೋಗುವ ದ್ಯಾವ ಕುಟುಂಬ ವಲಸೆ ಒಂದು ಭಾಗವಾಗಿ ಮೂಡಿಬರುತ್ತದೆ. ಜೊತೆಗೆ ಈ ವಲಸೆಯ ಹಿಂದೆ ಮೊದಲು ನೋವು ಆಂತಕಗಳಿದ್ದರೂ ನಂತರದಲ್ಲಿ ರೈತರ ತಿಳುವಳಿಕೆ ಗೌಡನ ವಿರುದ್ಧ ನಡೆದ ಹೋರಾಟ ವೆಲ್ಲವೂ ವಲಸೆ ಬಂದ ಹುಚ್ಚ ಕುಟುಂಬವೂ ಗೌಡನ ಶೋಷಣೆಯಿಂದ ಮುಕ್ತವಾಗುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿನ ರೈತರ ಸಮಸ್ಯೆಗಳು ಜೀವನ ಪದ್ಧತಿಗಳು, ಗೌಡನ ಶೋಷಣೆಗಳು ಪ್ರಮುಖ ಅಂಶವಾಗಿ ಮೂಡಿಬರುತ್ತದೆ. ಒಬ್ಬ ಗೌಡನಿಂದ ಹೆಂಡತಿ ಮಾರ್ಯದೆಯನ್ನು ಉಳಿಸಿಕೊಳ್ಳಲು ವಲಸೆ ಬಂದ ದ್ಯಾವನ ಕುಟುಂಬ ಇನ್ನೊಬ್ಬ ಗೌಡನ ಹತ್ತಿರ ಭತ್ತದ ಸಮಸ್ಯೆಗೆ ಸಿಕ್ಕಿ ಬಡತನದಲ್ಲಿ ಉಳಿಯಬೇಕಾಗುವ ಶೋಷಣೆಯ ಭಿನ್ನ ಸ್ವರೂಪವನ್ನು ಕಾಣಬಹುದು ಹೀಗೆ ರೈತ ಕುಟುಂಬದ ವಲಸೆಯ ಪ್ರಕ್ರಿಯೆ ಪರಿಣಾಮವನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ.

ಗೀತಾ ನಾಗಭೂಷಣರವರ 'ನಿತ್ಯ ನರಳುವ ಮಂದಿ' ಕತೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿನ ಕೆಳವರ್ಗದವರ ಬದುಕು, ಬಡತನ, ಶೋಷಣೆಯನ್ನೊಳಗೊಂಡ ಕಥನವನ್ನು ಚಿತ್ರಿಸುತ್ತದೆ. ಪ್ರಾಕೃತಿಕ ವೈಪರಿತ್ಯದಿಂದಾಗಿ ವಲಸೆ ಹೋಗಲು ಪ್ರೇರಣೆಯಿಂದ ಆರಂಭವಾದ ಕತೆ ಹಲವಾರು ಸಮಸ್ಯೆ ಸಂಘರ್ಷಗಳಿಗೆ ಗುರಿಯಾಗಿ ಬದುಕು ಇನ್ನಷ್ಟು ದುಸ್ತರವಾಗುವ ಪರಿಯನ್ನು ಇಲ್ಲಿ ಕತೆಯ ಲೇಖಕಿ ಚಿತ್ರಿಸಿದ್ದಾರೆ.

"ಕೆಳವರ್ಗ ಮತ್ತು ದಲಿತರನ್ನೊಳಗೊಂಡ ಇಡೀ ಸಮುದಾಯಗಳ ಬದುಕಿನ ಅಸಲಿ ತುಣಕುಗಳು ಇಲ್ಲಿಯ ಕತೆಯಾಗಿದೆ"(ಗೀತಾನಾಗಭೂಷಣ, ೨೦೦೬, ಮುನ್ನಡಿ) ಕತೆಯ ಆಶಯವನ್ನು ಬಿಚ್ಚಿಡುತ್ತಾರೆ. ಈ ಕತೆಯ ನಾಯಕ ತಿಪ್ಪಣ್ಣ, ಹೆಂಡತಿ ರತನಿ ಕುಟುಂಬದ ಸುತ್ತ ಹೆಣೆದಿರುವ ಸಂವೇದನಾತ್ಮಕ ಕತೆಯಾಗಿದೆ. ಪ್ರಾಕೃತಿಕ ವೈಪರಿತ್ಯದಿಂದಾಗಿ ಭೂಕಂಪ ಸಂಭವಿಸುವ ಕಾರಣ ಅಲ್ಲಿಯ ಹಳ್ಳಿಯ ಜನರೆಲ್ಲರು ನಿರಾಶ್ರಿತರಾಗಿ ವಲಸೆ ಬಂದವರಲ್ಲಿ ತಿಪ್ಪಣ್ಣನ ಕುಟುಂಬವು ಒಂದಾಗಿತ್ತು.

ತಿಪ್ಪಣ್ಣ ಹಾಗೂ ಹೆಂಡತಿಯಾದ ರತನಿ ಕರ್ನಾಟಕ ಮತ್ತು ಮರಾಠವಾಡದ ಗಡಿನಾಡಿನ ಹತ್ತಿರ ಇರುವ ಕಿಲಾರೆಯೆಂಬ ಹಳ್ಳಿಯಲ್ಲಿ ಮನೆ. ಎರಡು ಎತ್ತು, ಎತ್ತಿನಗಾಡಿ ದುಡಿಯಲು ಹೊಲ ಹೀಗೆ ಎಲ್ಲಾ ರೀತಿಯಿಂದಲೂ ಅನುಕೂಲದಿಂದ ಇದ್ದ ಈ ಸಂಸಾರಕ್ಕೆ ದಿಡೀರನೆ ಎದುರಾಗುವ ಭೂಕಂಪ ಜನರ ಬದುಕನ್ನು ಕಿತ್ತುಕೊಳ್ಳುತ್ತದೆ. ಇರಲು ನೆಲೆಯಿಲ್ಲದೆ ದುಡಿಯಲು ಬದುಕು ಇಲ್ಲದೇ ಅತಂತ್ರ ಸ್ಥಿತಿಗೆ ತಲುಪುತ್ತದೆ. ಇದೇ ಸಮಯಕ್ಕೆ ಸೀಮಂತ ಕಾರ್ಯಕ್ಕೆ ಬೇರೆ ಊರಿಗೆ ಹೋಗಿದ್ದರಿಂದ ಈ ಕುಟುಂಬ ಸಾವಿನಿಂದ ಪಾರಾಗುತ್ತದೆ. ಆದರೆ ತಿಪ್ಪಣ್ಣನ ಕುಟುಂಬ ಇರಲು ನೆಲೆ ಹುಡುಕಿಕೊಂಡು ಬದುಕಲು ದಾರಿ ಹುಡುಕುತ್ತ ಕಲಬುರ್ಗಿಗೆ ವಲಸೆ ಬಂದು ನೆಲೆಯಾಗುತ್ತಾರೆ.

ಹೀಗೆ ವಲಸೆ ಬಂದ ತಿಪ್ಪಣ್ಣನ ಕುಟುಂಬಕ್ಕೆ ಮೊದಲು ಕಾಡುವುದು ಭಾಷೆಯ ಸಮಸ್ಯೆ. ಮೊದಲೇ ಕರ್ನಾಟಕ ಮತ್ತು ಮರಾಠವಾಡ ಗಡಿನಾಡಿನ ಮಧ್ಯದಲ್ಲಿ ಬದುಕಿದವರಿಗೆ ಕನ್ನಡ ಬಾರದೆ ತತ್ತರಿಸುವಂತಾಗುತ್ತದೆ. ಜೊತೆಗೆ ಕೈಯಲ್ಲಿ ಹಣ ಇಲ್ಲ, ಬಂದು ಬಳಗದವರನ್ನು ಕಳೆದುಕೊಂಡು ಅತಂತ್ರ ಸ್ಥಿತಿಯಲ್ಲಿ ಕರ್ನಾಟಕದ ಕಲಬುರ್ಗಿಗೆ ಬಂದು ಇಳಿಯುತ್ತಾರೆ. ಇಂಥ ಸ್ಥಿತಿಯಲ್ಲಿ ಯಾರಾದರೂ ಸಹಾಯ ಮಾಡಿದರೆ ಸಾಕು ಎಂದು ಅಲೋಚಿಸುತ್ತಿರುವಾಗ ಝೋಪಡಿ ಪಟ್ಟಿಯ ಮಾಲಿಕನಾದ ಮಂಗಲದಾವನ ಪರಿಚಯದಿಂದ ಇರಲು ಬಾಡಿಗೆ ಮನೆ ಮತ್ತು ದುಡಿಯಲು ಕೆಲಸ ಸಿಕ್ಕು ಮತ್ತೇ ಸಂಸಾರ ಆರಂಭವಾಗುತ್ತದೆ.

ಭೂಕಂಪದ ಸಂದರ್ಭವಂತೂ ಈ ಕುಟುಂಬವನ್ನು ಆಘಾತಕ್ಕೀಡು ಮಾಡಿತ್ತು. "ಕುಬಸದ ಕಾರಣ ಮುಗಿಸಿಕೊಂಡು ಬಂದವರಿಗೆ ಕಂಡಿದ್ದು ಊರು ಹೋಗಿ ಸ್ಮಶಾನವಾಗಿತ್ತು. ಮನಿಮಾರ್‍ಯಲ್ಲಾ ಭೂಮಿ ಹೊಟ್ಟೆ ಸೇರಿ ಮಾಯವಾಗಿತ್ತು. ಸತ್ತವರಂತ ಸತ್ತು ಶಿವನ ಪಾದಾ ಸೇರಿದ್ದರೇನೋ ಖರೆ ಆದರ ಅರ್ದ ಮದ್ದಾ ಸತ್ತು ಸಾಯಲಾರ್ದೆ ಬದುಕುಲಾರ್ದೆ ಒದ್ದ್ಯಾಡಾ ಮಂದಿ ಅದ್ದಾ ಹೆಣ ಆಗಿ ದಂಡಾಭೂಮ್ಯಾಗ ಕೈಯೋ ಕಾಲೋ ಭೂಮಿ ಹೊರಗಿದ್ದು ಗೋಳ್ಯಾಡೋ ದನಿಗೋಳು ಸಣ್ಣಗ್ಯ ಭೂಮಿಯೆದಿ ಸೀಳ್ಕೋಂಡು ಹೊರಗ ಬರಾ ಪರೆಯತ್ನಾ ಮಾಡ್ಲಕತ್ತಿದ್ದವು. ಒಬ್ಬರ ಕೈ ಹೊರಗ ಬರಾ ಪರೆಯತ್ನಾ ಮಾಡ್ಲಕತ್ತಿದ್ದುವು. ರತನಿ ತಿಪ್ಪಾರು ಆಳ್ಕೋತ ಕರ್‍ಕೋತ ಹಳ್ಳಿ ಬಿಟ್ಟು ಬಂದಿದ್ದ"(ಅದೇ, ಪು.೩೨೨) ಸನ್ನಿವೇಶಗಳನ್ನು ಲೇಖಕರು ಭೂಕಂಪ ತೀವ್ರ ಘಟನೆಗಳನ್ನು ಅದರಿಂದ ಜನರಿಗಾದ ಸಮಸ್ಯೆಗಳನ್ನು ಚಿತ್ರಿಸುತ್ತಾರೆ.

ಇಷ್ಟೆಲ್ಲ ಕಷ್ಟ, ನೋವಿನಿಂದ ವಲಸೆ ಬಂದವರಿಗೆ ಬದುಕುವ ದಾರಿಯೇನು ಸಿಕ್ಕಿತು. ಆದರೆ ಶ್ರೀಮಂತರ ಶೋಷಣೆ ಲೈಂಗಿಕ ಹಿಂಸೆ ಇನ್ನೊಂದು ತರಹದ ಸಮಸ್ಯೆಗೆ ಗುರಿ ಮಾಡಿತು. ಅದು ಇವರಿಗೆ ಇರಲು ಮನೆ, ಕೆಲಸ ಕೊಟ್ಟ ದಾದಾ ಸಾಹೇಬನೇ ರತನಿಯ ಜೊತೆ ಇಟ್ಟುಕೊಳ್ಳುವ ಅನೈತಿಕ ಸಂಬಂಧದಿಂದ ಕುಟುಂಬದ ನೆಮ್ಮದಿ ಹೊಡೆದು ಹೋಗುತ್ತದೆ. ಈ ವಿಷಯ ತಿಳಿದ ತಿಪ್ಪಣ್ಣ ಈ ಕೊರಿಗಿನಲ್ಲಿ ಕುಡಿದು ರಾತ್ರಿ ಬೈಯ್ದು ಹೊಡೆಯುವುದು ಮಾಡುತ್ತಾನೆಯೇ ಹೊರತು ದಾದಾ ಸಾಹೇಬನನ್ನು ಎದುರುಹಾಕಿಕೊಳ್ಳಲು ಸಾಧ್ಯವಾಗುವುದಿಲ್ಲ. ಕಾರಣ ಅವನ ಮಾಡಿದ ಸಹಾಯ ಅವನ ಕಣ್ಮುಂದೆ ಕಾಣುತ್ತದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕ ಈ ಕುಟುಂಬ ನಿತ್ಯ ಒಂದಿಲ್ಲಾ ಒಂದು ಸಮಸ್ಯೆಗೆ ಸಿಲುಕಿ ನರಳುತ್ತಲೇ ಸಾಯುತ್ತಿರುತ್ತಾರೆ. ಭೂಕಂಪದಿಂದ ಇಡೀ ಊರಿಗೆ ಊರೇ ನಾಶವಾಗಿ ಅಲ್ಲಿಯ ಎಷ್ಟೋ ಜನರು ಸಾವಿಗಿಡಾಗಿದ್ದರೆ ತಿಪ್ಪಣ್ಣ ಕುಟುಂಬ ಮಾತ್ರ ಅನಿವಾರ್ಯ ಕಾರಣಗಳಿಂದ ಆಕಸ್ಮಿಕವಾಗಿ ಈ ದುರಂತದಿಂದ ತಪ್ಪಿಸಿಕೊಂಡು ಬಂದಿದ್ದರೂ ಇಲ್ಲಿಯೂ ನೆಮ್ಮದಿ ಸಿಗದಂತಾಗುತ್ತದೆ. ಈ ಕತೆಯ ಮುನ್ನುಡಿಯಲ್ಲಿ ಲೇಖಕಿಯೇ ಹೇಳುವಂತೆ "ಈ ಕತೆಯಲ್ಲಿ ನೋವುವಿದೆ, ಸಂಘರ್ಷವಿದೆ, ಕೆಲವೆಡೆ ರಾಜಿಯೂ ಇದೆ. ಉಳಿಯುವಿಕೆಗಾಗಿ ಬಡಿದಾಟವು ಇದೆ"(ಅದೇ, ಮುನ್ನುಡಿ) ಎನ್ನುವ ಮಾತು ಈ ಮೂರು ಕಾದಂಬರಿಗಳಿಗೂ ಅನ್ವಯಿಸಿಕೊಳ್ಳಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಗೀತಾನಾಗಭೂಷಣರವರ ಈ ಕತೆಯು ಪ್ರಕೃತಿ ವೈಪರಿತ್ಯದಂತಹ ಕಾರಣಗಳಿಂದಾಗಿ ಎಲ್ಲವನ್ನು ಕಳೆದುಕೊಂಡು ಬದುಕನ್ನು ಅರಸಿ ಭಾಷೆ ಗೊತ್ತಿರದ ಮತ್ತೊಂದು ಗಡಿನಾಡಿಗೆ ವಲಸೆ ಬಂದು ಹಲವು ರೀತಿಯ ಶೋಷಣೆಗೆ ಒಳಗಾಗುವ ದಲಿತರ ಬದುಕಿನ ಚಿತ್ರಣ ಮತ್ತು ಹೊಂದಾಣಿಕೆ ಮಾಡಿಕೊಳ್ಳುವ ಅನಿವಾರ್ಯತೆ ಹಿಂದಿರುವ

ಉದ್ದೇಶಗಳನ್ನು ಈ ಕತೆ ಸ್ಪಷ್ಟಪಡಿಸುತ್ತದೆ ಮತ್ತು ವಲಸೆಯ ಪ್ರೇರಣೆ ಪರಿಣಾಮಗಳನ್ನು ಸಂವೇದನಾತ್ಮಕವಾಗಿ ಚಿತ್ರಿಸುತ್ತದೆ. ವಲಸೆ ಪ್ರೇರಣೆಯಲ್ಲಿ ಪ್ರಾಕೃತಿಕ ಹಿಂಸೆ ಒಂದು ಕಡೆಯಾದರೆ ವಲಸೆ ಬಂದ ನಂತರದ ಪರಿಣಾಮದಲ್ಲಿ ಮೇಲ್ವರ್ಗದವರ ಶೋಷಣೆ ಮತ್ತೊಂದು ಕಡೆ ಇವರ ಬದುಕನ್ನು ತುಳಿಯುತ್ತದೆ, ಭೂಕಂಪದಿಂದ ತಪ್ಪಿಸಿಕೊಂಡು ಮತ್ತೊಂದು ಕಡೆ ಬದುಕು ಕಟ್ಟಿಕೊಳ್ಳಲು ವಲಸೆ ಬಂದ ಕುಟುಂಬಕ್ಕೆ ಮತ್ತಷ್ಟು ಜೀವನ ನರಕಕ್ಕೆ ತಳ್ಳುವಂತೆ ಮಾಡುತ್ತದೆ. ಸಹಾಯ ಮಾಡಿದ ಹಕ್ಕಿನಲ್ಲಿ ಇಲ್ಲಿಯ ಶ್ರೀಮಂತ ವರ್ಗ ಹೆಣ್ಣನ್ನು ತಮ್ಮ ಕಾಮಕ್ಕೆ ಬಳಸಿಕೊಳ್ಳುತ್ತಾರೆ, ಇದೆಲ್ಲವೂ ಗೋತ್ತಿದ್ದು ಪ್ರತಿಭಟಿಸಲಾಗದ ಗಂಡನ ಅಸಹಾಯಕತೆ ಮನುಷ್ಯನ ದೌರ್ಬಲ್ಯವನ್ನು ತೋರಿಸುತ್ತದೆ.

ಬೆಸರಗಹಳ್ಳಿ ರಾಮಣ್ಣನವರ 'ಆಳು ಮಗ' ಕತೆಯು ಮನೆಯ ಆಳಾಗಿ ದುಡಿಯುವವನ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ. ಲೇಖಕರೇ ಈ ಕತೆಯನ್ನು ನಿರೂಪಿಸುತ್ತಾ ತಮ್ಮ ಹಳ್ಳಿಯ ಊರಲ್ಲಿ ಶತ-ಶತಮಾನಗಳಿಂದಲೂ ದುಡಿಯುತ್ತಾ ಬಂದಿರುವ ಆಳುಮಕ್ಕಳಲ್ಲಿ ಒಬ್ಬನಾದ ಕರೀಬೋರನ ಜೀವನದ ಕತೆಯನ್ನು ಬಿಚ್ಚಿಡುತ್ತದೆ. ಕರೀಬೋರನ ವಲಸೆ ಇಲ್ಲಿ ತಾತ್ಕಾಲಿಕವಾದಂತದ್ದು. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಹಳ್ಳಿಯಲ್ಲಿ ಬಂದ ಮಾಮೇರಿ ಬರ ಬಂದು, ಎಲ್ಲೆಲ್ಲೂ ಭೂಮಿ ಬರಡಾಗಿ ಹುಲ್ಲು, ನೀರೇ ದೊರಕದೆ, ಐದು ವರ್ಷಗಳ ಕಾಲ ಧರೆಯನ್ನೇ ನಡುಗಿಸಿತಂತೆ ಇದರ ಪರಿಣಾಮವಾಗಿ ಕರೀಬೋರನ ಕುಟುಂಬ ನೀಲಗಿರಿಗೆ ಕಾಫಿ ತೋಟಕ್ಕೆ ಕೆಲಸಕ್ಕೆಂದು ರಾತ್ರೋರಾತ್ರಿ ಹೊರಡುವ ಸಂದರ್ಭ ಉಂಟಾಗುತ್ತದೆ.

ಜೊತೆಗೆ ಈ ಬರ, ರೋಗಗಳ ಪರಿಣಾಮ ಇಡೀ ಊರಿಗೆ ಭಯಂಕರ ಪರಿಣಾಮವನ್ನು ಬೀರಿತು. ಹೊಟ್ಟೆಗಿಲ್ಲದ ಜನ. "ಭೂತಳೆ ಗಡ್ಡೆಯನ್ನು ಆಗೆದು ತಿಂದು, ವಾಂತಿ, ಭೇದಿ ಬಂದು ನೊಣ ಸತ್ತಂತೆ ಸತ್ತರಂತೆ"(ಬೆಸಗರಳ್ಳಿ ರಾಮಣ್ಣ, ೧೯೯೮, ಪು.೧೫೫-೧೫೬) ಇಷ್ಟಲ್ಲದೇ ಈ ತರಹದ ಸಮಸ್ಯೆ ಧಾರ್ಮಿಕವಾಗಿ ಸಹ ಪರಿಣಾಮ ಬೀರಿತ್ತು. ಹೇಗೆಂದರೆ "ವೀರಶೈವರಾಗಿ ಮತಾಂತರಗೊಂಡಿದ್ದ ಒಕ್ಕಲಿಗರು ತಾವು ಕಟ್ಟಿಕೊಂಡಿದ್ದ ಶಿವದಾರ ಕರಡಿಗಳಿಗೆ ತಿಲಾಂಜಲಿಕೊಟ್ಟು, ಪರಚಲು ಕಟ್ಟೆಗಳಲ್ಲಿ ಮೀನು ಹಿಡಿದು ತಿಂದು ಜೀವ ಉಳಿಸಿಕೊಂಡಂತ ಘಟನೆಗಳು ನಡೆದು ಹಸಿವಿನ ಮುಂದೆ ಧರ್ಮ ಸೋಲೊಪ್ಪಿಕೊಂಡಿತಂತೆ."(ಅದೇ, ಪು.೧೫೬)

ಇದು ಜನರಿಗಷ್ಟೇ ಅಲ್ಲದೇ ಪ್ರಾಣಿಗಳಿಗೂ ಸಹ ಭೀಕರ ಪರಿಣಾಮ ಬೀರಿತು. "ಎಲ್ಲೆಂದರಲ್ಲಿ ಸತ್ತ ದನ ಎಮ್ಮೆ, ನಾಯಿಗಳ ಕಾಲು, ಎದೆಗೂಡುಗಳ ಮೂಳೆಗಳು ಇಟ್ಟಾಡುತ್ತಿದ್ದವಂತೆ. ಅನೇಕರು ಹತ್ತಿರ ಸಂತೆಗಳಲ್ಲಿ ತಮ್ಮ ಮಕ್ಕಳನ್ನು ಹರಾಜಿನಲ್ಲಿ ಒಂದಷ್ಟು ದುಡ್ಡಿಗೆ ಮಾರಾಟ ಮಾಡಿದರಂತೆ ಇದೂ ವಿಫಲವಾದಾಗ ಎಷ್ಟೋ ಜನ ನಿಷ್ಪಾಪಿ ಬಡವರು ತಮ್ಮ ಮಕ್ಕಳನ್ನು ಕತ್ತುಹಿಸುಕಿ

ಕೊಂದು, ತಾವು ಒಣಮರಗಳಿಗೆ, ಭೂತಾಳೆ ಹೊಸೆದು ಉರಿ ಮಾಡಿ, ನೇಣು ಹಾಕಿಕೊಂಡು ಹಸಿವಿನಾಗ್ನಿಯಿಂದ ಬಿಡುಗಡೆ ಪಡೆದರಂತೆ!! ತಮ್ಮ ಮನೆತನದವರೂ ಈ ಬರಗಾಲದ ಏಟನ್ನು ತಾಳಲಾರದೆ ವಲಸೆ ಹೋದರಂತೆ"(ಅದೇ, ಪು.೧೫೬)

ಹೀಗೆ ಹಸಿವು, ಬಡತನ, ಸಾವು, ನೋವುಗಳು ಕರೀಬೋರನ ಕುಟುಂಬವು ಸೇರಿದಂತೆ ಇನ್ನು ಹಲವು ಜನರನ್ನು ಊರಿನಿಂದ ವಲಸೆ ಹೋಗುವಂತೆ ಪ್ರೇರೇಪಿಸಿತ್ತು. "ತಾನು ಆಳಾಗಿದ್ದ ಮನೆಯಿಂದಲೇ ಐದು ಸೇರು ರಾಗಿ ಈಸ್ಕೊಂಡು ರೊಟ್ಟಿ ಬುತ್ತಿ ಮಾಡಿಕೊಂಡು, ನಂಚುಕ್ಕೊಕೆ ಒಣಮೆಣಸಿನಕಾಯಿ ದೊರಕಿಸ್ಕೊಂಡು ತನ್ನ ಹೆಗಲ ಮೇಲೆ ಎರಡು ವರ್ಷದ ಮಗ ಚಿಕ್ಕಬೋರನನ್ನು ಕೂರಿಸಿಕೊಂಡು, ಹೆಂಡತಿ ಮಡ್ಲಲ್ಲಿ ಆರು ತಿಂಗಳ ಮಗಳು ಚಿಕ್ಕತಾಯಿ ಹಾಕ್ಕೊಂಡು, ಬರಿಗಾಲಲೇ ಹಗಲು–ರಾತ್ರಿ ನಡೆದೂ ನಡೆದೂ ನೀಲಗಿರಿ ತಲುಪಿ, ಇಂಗ್ಲೀಷ್ ದೊರೆಗಳ ಕಾಫಿ ತೋಟದಲ್ಲಿ ಕೆಲ್ಸ ಮಾಡಕ್ಕೊಂಡು ಬದುಕ್ತಾ ಇದ್ದು. ಸ್ವಾತಂತ್ರ್ಯ ಬಂದ ಮೇಲೆ ದೊರೆಗಳೆಲ್ಲ ನಮ್ಮ ದೇಶ ಬಿಟ್ಟು ತಮ್ಮ ನೀರಿನಾಚೆಯ ದೇಶಕ್ಕೆ ಹೊರಟು ಹೋದ ಮೇಲೆ ಕರೀಬೋರ ತನ್ನ ಹೆಂಡತಿ, ಮುಂಡೆಯಾದ ಮಗಳು, ಮಗ ಸೊಸೆ ಇತ್ಯಾದಿ ಸಂಬಂಧಿಗಳೊಡನೆ ಹುಟ್ಟೂರಿಗೆ ವಾಪಸ್ಸು ಬಂದ".(ಅದೇ, ಪು.೧೫೬)

ಹೀಗೆ ಮಕ್ಕಳನ್ನು ಮಾರಿಕೊಂಡು ಬದುಕುವಂತಹ ದುಃಸ್ಥಿತಿ ಇದು ಸಾಧ್ಯವಾಗದೇ ಹೋದಾಗ ಸಾಯಿಸಿ ಹಸಿವಿನಿಂದ ಬಿಡುಗಡೆ ಪಡೆಯುವಂತಹ ಪರಿಸ್ಥಿತಿಗಳು ಮನುಷ್ಯನನ್ನು ಎಷ್ಟೊಂದು ಕಷ್ಟಕರವಾಗಿತ್ತು ಎನ್ನುವುದನ್ನು ಕರುಣಜನಕವಾಗಿ ಚಿತ್ರಿಸುತ್ತದೆ. ಇದಲ್ಲದೇ ಇಂಥ ಪರಿಸ್ಥಿತಿಯಲ್ಲೂ ಕರಿಬೋರನ ಸ್ವಾಭಿಮಾನ ಮೌಲ್ಯಯುತವಾದ್ದು. ತಾನು ಯಾವ ಮನೆಗೆ ಆಳುಮಗನಾಗಿದ್ದನೋ ಆ ಮನೆಯೇ ಒಂದಾಗಿರುವುದನ್ನು ಕಂಡು ಕಣ್ಣೀರು ಹಾಕಿ, ಬೇರೆ ಮನೆ ಮೆಟ್ಟಲು ಹತ್ತಿ 'ದೇಯಿ'ಅನ್ನಲು ಹೇಸಿಗೆ ಪಟ್ಟವನು ಎಂಥ ಪರಿಸ್ಥಿತಿಯಲ್ಲೂ ಬೇರೆಯವರ ಮನೆಗೆ ಹೋಗಿ ಭೀಕ್ಷೆ ಬೇಡದವನಲ್ಲದ ಮನಸ್ಥಿತಿ ಇರುವ ಕರೀಬೋರನ ಜೀವನ ಪ್ರಕೃತಿ ವಿಕೋಪ ಮತ್ತು ರೋಗಗಳಿಗೆ ಸಿಕ್ಕಿ ಬದುಕುವ ದಾರಿಯನ್ನು ಹುಡುಕಿಕೊಂಡು ಇಡೀ ಕುಟುಂಬ ವಲಸೆ ಹೋಗುತ್ತದೆ.

ಈ ಕುಟುಂಬ ಮತ್ತೆ ವಾಪಸ್ಸು ಬಂದಾಗ ಕರಿಬೋರನಿಗೆ ತೊಂಬತ್ತರ ಮೇಲೆ ವಯಸ್ಸಾಗಿತ್ತು. ಇಂಗ್ಲೀಷ್ ದೊರೆಗಳ ಕಾಫಿ ತೋಟದಲ್ಲಿ ಕೆಲಸ ಮಾಡಲು ಹೋಗಿ ಮತ್ತೆ ಇಂಗ್ಲೀಷರು ನಮ್ಮ ದೇಶ ಬಿಟ್ಟು ತಮ್ಮ ದೇಶಕ್ಕೆಹೊರಟು ಹೋದಾಗ ವಾಪಸ್ಸು ಹುಟ್ಟೂರಿಗೆ ಬಂದು ಸೇರಿದ್ದರು. ಅಷ್ಟೊತ್ತಿಗಾಗಲೇ ಮಗಳು ಮುಂಡೆಯಾಗಿದ್ದಳು. ಜೊತೆಗೆ ಮಗನಿಗೂ ಮದುವೆಯಾಗಿ ಸೊಸೆ ಬಂದಿದ್ದಳು. ಹಾಗಾಗಿ ಕರೀಬೋರ ತನ್ನ ಹೆಂಡತಿ ಮುಂಡೆಯಾದ ಮಗಳು ಮಗ ಸೊಸೆ

ವಾಪಸ್ಸು ಊರಿಗೆ ಬಂದಿದ್ದರು. ಇದಿಷ್ಟು ಕರಿಬೋರನ ವಲಸೆ ಕುರಿತಾದ ಜೀವನದಲ್ಲಿ ಉಂಟಾದ ನೋವು, ಸಮಸ್ಯೆಗಳನ್ನು ತಿಳಿಸುತ್ತದೆ. ಜೊತೆಗೆ ಈ ಕತೆಯಲ್ಲಿ ಚಾರಿತ್ರಿಕ ಅಂಶಗಳು ಸಹ ಗಮನಿಸಬಹುದು. ಬರಗಾಲ, ಮಹಾಮಾರಿ ರೋಗಗಳಿಗೆ ತುತ್ತಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ಆಡಳಿತ ಅವಧಿಯಲ್ಲಿ ಹೊರಡುವ ಈ ಕುಟುಂಬಕ್ಕೆ ಬ್ರಿಟಿಷ್ ಅಧಿಕಾರಿಗಳ ಕಾಫಿ ತೋಟಗಳಲ್ಲಿ ಒಂದು ಬದುಕು ಸಿಕ್ಕುತ್ತದೆ. ಆದರೆ ಸ್ವಾತಂತ್ರ್ಯ ನಂತರದಲ್ಲಿ ಬ್ರಿಟಿಷರ ತಮ್ಮ ದೇಶಕ್ಕೆ ವಾಪಸು ಆದಾಗ ಈ ಕುಟುಂಬ ಮತ್ತೇ ಅನಿವಾರ್ಯವಾಗಿ ಅಲ್ಲಿ ಕೆಲಸ ಇಲ್ಲದೇ ಮತ್ತೇ ಊರಿಗೆ ಬರುವುದು, ಬ್ರಿಟಿಷರನ್ನು ಅವಲಂಬಿಸಿದ್ದ ಭಾರತೀಯ ಕುಟುಂಬದ ಅನಿವಾರ್ಯತೆಗಳನ್ನು ಗಮನಿಸಬಹುದಾಗಿದೆ.

ಕರಿಬೋರ ಊರಿಗೆ ವಾಪಸಾದಾಗ ತಾನು ಆಳು ಮಗನಾಗಿದ್ದ ಮನೆಯ ಧಣಿಯ ಸಮಾಧಿಗೆ ಹೋಗಿ "ಅಪ್ಪೊರೇ ನಿಮ್ ಆಳ್ ಮಗ ಕರೀಬೋರ ಬಂದಿವ್ನಿ ಬಾಪ್ಪೋ ಮಾತಾಡ್ಸು, ಹಾಳು ಬರಗಾಲದೇಲಿ ಹೊಟ್ಟೆಪಾಡು ತಾಳಲಾರ್ದೆ ನಿಂಗೆ ಹೇಳ್ದೆ ಮಾಡ್ದೆ ನಾನು ನೀಲಿಗಿರಿ ಸೇರ್ಕೊಂಡಿ. ಮುರ್ದು ನನ್ಮಗ ಒಂದು ಸಾಲು ಕಾಗ್ದಾನೂ ಗೀಚಾಕ್ಸಿ ಇಂಥಾ ತಾವು ಇವ್ನಿ ಅಂತ್ಲೂ ತಿಳಿಸಿಲ್ಲ. ಇಂಗ್ಲೀಷ್ ದೊರೆಗಳೆಲ್ಲ ಒಂಟೋದ ಮ್ಯಾಲೆ ತಿರ್ಗ ನಮ್ಮೂರಿಗೆ ನಾನು ಬಂದಿನ್ನಿ. ಬಾಪ್ಪೋ ಸಮಾಧಿ ಸೀಳ್ಕೋಂಡು! ಅಂತ ಸಮಾಧಿ ಸುತ್ತ ಬಿದ್ದು ಒದ್ದಾಡು ಬುಟ್ಟನಂತೆ"(ಅದೇ, ಪು.೧೫೬) ಎನ್ನುವ ಈ ಸಂದರ್ಭ ಒಡೆಯನಿಗೂ ಒಬ್ಬ ಹೊಲೆಯನಾದ ಆಳು ಮಗನಿಗೂ ಇದ್ದ ಅನ್ಯೋನ ಸಂಬಂಧವನ್ನು ತಿಳಿಸುತ್ತದೆ. ಜಮೀನ್ದಾರರು ಎಂದರೇ ದರ್ಪ, ಸೂಲಿಗೆ, ಶೋಷಣೆ ಎಂಬ ಗುಣಗಳನ್ನು ಹೆಚ್ಚು ಹೊಂದಿದ್ದ ವ್ಯಕ್ತಿಗಳಿಗಿಂತ ಇಲ್ಲಿಯ ಜಮೀನ್ದಾರ ಅಥವಾ ಗೌಡನ ಮನೆಯವರ ಪ್ರೀತಿ, ವಿಶ್ವಾಸ ಮಾನವೀಯ ಮೌಲ್ಯಗಳನ್ನು ಎತ್ತಿ ತೋರಿಸುತ್ತದೆ. ಜೊತೆಗೆ ಕರಿಬೋರನ ನಿಯತ್ತಿನ ಕೆಲಸ ಒಳ್ಳೆಯತನ, ವಯಸ್ಸಾದರೂ ಸ್ವಾಭಿಮಾನದಿಂದ ಬದುಕುವ ಛಲ ಎದ್ದುಕಾಣುತ್ತದೆ.

ಗಂಡ ಸತ್ತ ಮಗಳು ಬಸರಿಯಾಗಿದ್ದಳೇ ಎಂಬ ಸುಳ್ಳು ಅಪಾದನೆಯಿಂದ ಹೊಟ್ಟೆ ನೋವಿನಿಂದ ಊದಿಕೊಂಡಿದ್ದ ಹೊಟ್ಟೆನೋವನ್ನು ತಾಳಲಾರದೆ ನೇಣು ಹಾಕಿಕೊಂಡು ಸತ್ತರೆ ನಿರಪರಾಧಿಯಾದ ಮಗಳು ಸತ್ತಳು ಎಂಬ ಚಿಂತೆಯಿಂದ ಹುತ್ತಿನಲ್ಲಿ ಕೈ ಹಾಕಿ ಹಾವಿನಿಂದ ಕಚ್ಚಿಸಿಕೊಂಡು ಹೆಂಡತಿ ತೀರಿ ಹೋದಳು. ಇದ್ದ ಒಬ್ಬ ಮಗ ಕುಡಿದು ಅಲೆಯುವನಾಗಿದ್ದ ಒಟ್ಟಾರೆ ಕೊನೆಗೆ ಉಳಿದ ಕರಿಬೋರ ಲೇಖಕರ ಒತ್ತಾಯಕ್ಕೂ ಮನೆಗೆ ಬಾರದೆ, ಒತ್ತಾಯದಿಂದ ಕೊಟ್ಟ ಹಣವನ್ನು ಕೂಡಿಸಿದ ಇಪ್ಪತ್ತೈದು ರೂಪಾಯಿಗಳು "ಸಾಯುವ ಕಾಲಕ್ಕೆ ಲೇಖಕನಿಗೆ ಕೊಟ್ಟು ಇದರಲ್ಲಿ ನನಗಿಂತಲ್ಲೂ ನಿರ್ಗತಿಕರಿಗೆ ಒಂದು ಜೊತೆ ಬಟ್ಟೆ ಹೊಲಿಸಿ ಕೊಡು ಮತ್ತು

ನಾನು ಸತ್ತ ಮೇಲೆ ಅವರಿವರತ್ತ ದುಡ್ಡು ಕೇಳಿ ನನ್ನ ಹೆಣಕ್ಕೆ ಅವಮಾನ ಮಾಡದೇ ಸಮಾಧಿ ಮಾಡಿ ಅದರ ಮೇಲೆ ಒಂದು ಗಿಡ ನೆಡಿ. ಮುಂದೆ ಮರಗಳಿಂದ ನಮ್ಮೂರ ಹೈಕ್ಳುಮಕ್ಳು, ಆ ಜಾತಿ, ಈ ಜಾತಿ ಅನ್ನದೆ ಹಣ್ಣಕಿತ್ಕೊಂಡು ತಿನ್ನಬೇಕು! ಮರಕೋತಿ ಆಟ ಆಡಬೇಕು. ಹಕ್ಕಿಗಳು ಗೂಡು ಕಟ್ಟಿ, ಮೊಟ್ಟೆ ಇಕ್ಕಿ ಮರಿ ಮಾಡಿ ಮರಿಗಳ್ಗಿ ಗುಟುಕು ಗುಟುಕು ಕೊಟ್ಟು ರೆಕ್ಕೆ ಪುಕ್ಕ ಬಲಿತ ಮ್ಯಾಲೆ ಫರ್ ಅಂತ ಆಕಾಶಕ್ಕೆ ಹಾರೋಗಬೇಕು" ಎಂದು ಆಸೆ ಪಡುವ ಮನೋಭಾವ ಲೇಖಕರು ಗ್ರಾಮೀಣ ಭಾಷೆಯಲ್ಲಿ ಮನಮುಟ್ಟುವ ಹಾಗೆ ಚಿತ್ರಿಸುತ್ತಾರೆ.

ಒಟ್ಟಾರೆ ಇದೊಂದು ಸತ್ಯಾಧಾರಿತ ಘಟನೆಯಾಗಿದೆ. ಕತೆಯ ಆರಂಭದಲ್ಲಿ ಈ ಕತೆಯ ರಚನೆಯ ಹಿನ್ನೆಲೆ ಕುರಿತು ಮಾತಾಡುವ ರಾಮಣ್ಣನವರು ಸ್ನೇಹಿತ ನಾಗರಾಜರವರ ವಂಶದಲ್ಲಿ ನಡೆದ ಈ ಕತೆಯನ್ನು ಬರೆಯಲು ಪ್ರೇರೆಪಿಸಿದ ವಿಷಯ ಮತ್ತು ಕತೆ ವಿವರಣೆಯೇ ಈ ಕತೆಯಾಗಿದೆ. ಲೇಖಕ ನಾಗರಾಜವರೇ ಹೇಳುವಂತೆ ಇತ್ತೀಚಿನ ದಿನಗಳಲ್ಲಿ ಕಾಣೆಯಾಗುತ್ತಿರುವ ಮಾನವೀಯ ಗುಣಗಳನ್ನು ಕರೀಬೋರನ ಕತೆಯ ಮೂಲಕ ಕಾಣಸಿಗುತ್ತದೆ.

"ನೋಡಿ ರಾಮಣ್ಣನೋರೆ ಇವತ್ತು ನಾವು ಯಾವ ಅತ್ಯಂತ ಬೆಲೆಯುಳ್ಳ ಗುಣಗಳು ಅಂತಿದ್ದೆವೋ ಅವೆಲ್ಲ ನಾಶವಾಗುತ್ತಿವೆ. ಪ್ರಾಮಾಣಿಕವಾಗಿ, ಬೇವರು ಸುರಿಸಿದೆ ಕುಡಿದ ನೀರು ಅಲ್ಲಾಡದೆ ಬದುಕೋದೆ ಒಂದು ಫ್ಯಾಶನ್ ಆಗಿಸಿ ವಿದ್ಯಾವಂತರೆನಿಸಿಕೊಂಡವರು ಭ್ರಷ್ಟರಾಗುತ್ತಿದ್ದಾರೆ ಅಕ್ಷರಸ್ಥರು ಆಯೋಗ್ಯರಾಗುತ್ತಿದ್ದಾರೆ. ಹಳ್ಳಿಗಳೆಲ್ಲ ಹೆಣದ ಮಾಳಗಳಾಗುತ್ತಿವೆ. ಇವೆಲ್ಲವನ್ನು ನೆನಪಿಸಿಕೊಂಡಾಗ ನನ್ನ ಮನಸೆಲ್ಲ ಬಹಳ ದಿನಗಳಿಂದ ಅಚ್ಚೇತ್ತು ನಿಂತಿರುವ ಒಂದು ಸತ್ಯ ಕತೆ ಎಂದು ಅಭಿಪ್ರಾಯ ಪಡುತ್ತಾರೆ.

ಈ ಆಳುಮಗ ಕತೆಯಲ್ಲಿ ಬರುವ ವಲಸೆ, ಪೂರ್ಣ ಪ್ರಮಾಣದಲ್ಲದಿದ್ದರೂ ಕರಿಬೋರನ ಆಪತ್ಕಾಲದಲ್ಲಿ ಬದುಕಿಗೆ ಒಂದು ದಾರಿಯಾಗುತ್ತದೆ. ಜೊತೆಗೆ ಬ್ರಿಟಿಷ್ ಅಧಿಕಾರಿಗಳು ವಲಸೆ ಬಂದವರಿಗೆ ಕೆಲಸ ಕೊಟ್ಟು ಸಹಾಯ ಮಾಡುತ್ತಾರೆ. ಹಾಗೆಯೆ ಅಂದಿನ ಚಾರಿತ್ರಿಕವಾಗಿ ವಲಸೆಯಿಂದಾದ ಪರಿಣಾಮಗಳನ್ನು ಚಿತ್ರಿಸುತ್ತದೆ. ಜೊತೆಗೆ ಕರಿಬೋರನ ಪ್ರಾಮಾಣಿಕತೆ, ನಿಯತ್ತು, ಒಳ್ಳೆಯತನ, ಸತ್ಯ ಇತ್ಯಾದಿ ಗುಣಗಳು ಮೌಲ್ಯವನ್ನು ಮುಖ್ಯವಾಗಿ ಹೇಳುತ್ತದೆ.

ಮಾಸ್ತಿಯವರ ಚೆನ್ನಮ್ಮ ಕತೆಯ ಶೀರ್ಷಿಕೆಯೇ ಹೇಳುವಂತೆ ಚೆನ್ನಮ್ಮ ಕತೆಯ ನಾಯಕಿ ಓದು ಬರಹ ಬರದ ಅವಿದ್ಯಾವಂತೆ ಹಳ್ಳಿಯಲ್ಲೆ ಹುಟ್ಟಿ ಬಾಳಿದ ಹುಡುಗಿ, ರಾಮಪ್ಪ ಈ ಕತೆಯ ನಾಯಕ ಮತ್ತು ಕಳನಾಯಕನೂ ಹೌದು. ಜೊತೆಗೆ ಚೆನ್ನಮ್ಮನ ಗಂಡ ರಾಮಪ್ಪ ಚೆನ್ನಮ್ಮನಿಗೆ ಸೋದರ ಮಾವ. ಅವನಿಗೆ ಸ್ವಲ್ಪ ಜಮೀನು ಇವಳಿಗೆ ಸ್ವಲ್ಪ ಜಮೀನು ಇತ್ತು. ಎರಡನ್ನು ಸರಿಯಾಗಿ ನೋಡಿಕೊಂಡಿದ್ದರೆ ಗ್ರಾಮದಲ್ಲಿಯೇ ತಕ್ಕಷ್ಟು ಸುಖವಾದ ಜೀವನ ನಡೆಸಬಹುದು.

ಆದರೆ ಚಿಕ್ಕವನಿದ್ದಾಗಲೇ ಪಟ್ಟಣದ ಕನಸು ಕಂಡಿದ್ದರಿಂದ ಒಂದು ನಾಲ್ಕೈದು ಸಾರಿ ಹೋಗಿ ಬಂದು ಅಲ್ಲಿಯ ಆರ್ಥಿಕ ಜೀವನ ಇಲ್ಲಿಯ ಒಂದು ಆರ್ಥಿಕ ಜೀವನವನ್ನು ಲೆಕ್ಕಹಾಕಿ "ಊರಿನ ಬಾಳು ಬಡತನದ ಬಾಳು, ಪಟ್ಟಣದ ಬಾಳು ಪುಣ್ಯವಂತಿಕೆಯ ಬಾಳು"(ಶ್ರೀನಿವಾಸ, ೨೦೦೮, ಪು.೧೭) ಎಂದು ನಿರ್ಧಾರ ಮಾಡಿಕೊಂಡು ಬೆಂಗಳೂರಿನ ಜೀವನ ಹೇಗಿರುತ್ತದೆ ನೋಡಿಯೋ ಬಿಡುವುದು ಎಂದು ಹೋಗಿ ನೆಲೆಯಾಗಿದ್ದ.

ಹೋಗಿ ನೆಲೆಯಾದ ಆರು ತಿಂಗಳ ನಂತರ ಬೆಂಗಳೂರಿನ ಜೀವನವೇ ಸುಖಕರವೆಂದು ಊರಿಗೆ ತಿರುಗಿ ಬಂದು ಭೂಮಿ ಸಾಗುವಳಿಯ ವಿಷಯ ತಕ್ಕ ಏರ್ಪಾಡು ಮಾಡಿ ಮತ್ತೆ ಬೆಂಗಳೂರಿಗೆ ಹೋಗಿ ಗಿರಣಿಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದ. ಮತ್ತೆ ತಿರುಗಿ ಬಂದು ಹೆಂಡತಿಯ ಹೆರಿಗೆಯ ನಂತರ ಮಗು ಮತ್ತು ಹೆಂಡತಿಯನ್ನು ಬೆಂಗಳೂರಿಗೆ ವಲಸೆ ಹೋಗುತ್ತಾನೆ. ಹಳ್ಳಿಯಲ್ಲಿ ಹುಟ್ಟಿದ ಇವಳಿಗೆ ಮತ್ತು ತಾಯಿಗೆ ಬೆಂಗಳೂರಿಗೆ ಹೋಗುತ್ತಾರೆ ಎಂದಾಗ ದಿಗಲು ಉಂಟಾಗುತ್ತದೆ ಎಂದೂ ಊರು ಬಿಟ್ಟು ಹೋಗದ ಹುಡುಗಿ ಅಲ್ಲ ಈ ಹೊತ್ತು ಬೆಂಗಳೂರು ಹೊರಟವಳೆ ದೇವರು ಒಳ್ಳೆಯದು ಮಾಡಲಿ ಅಂತ ಹರಸಿ ಲಕ್ಷ್ಮವ್ವ ಕೈಯಲ್ಲಿ ಬೇರೆ ಈ ಕಂದ ನನಗೆ ಪಾಣ್ರದಾಗೆ ಪ್ರಾಣ ಇಲ್ಲ."(ಅದೇ, ಪು.೧೮) ಎಂದು ದಿಗಿಲುಗೊಂಡವರೇ ಹೆಚ್ಚು.

ಇನ್ನು ಸ್ವತಃ ಚೆನ್ನಮ್ಮಳಿಗಂತು ಪಟ್ಟಣದ ಜೀವನಕ್ಕೆ ಕಾಲಿಡುವುದೇ ಆತಂಕವೇ ಆಗಿತ್ತು. ಕಂಡ ಮನೆ, ಕಂಡ ಜನವನ್ನು ಬಿಟ್ಟು ಈ ಗುಡಿ, ಈ ಕೊಳ, ಈ ದಾರಿ, ಈ ತೋಪು ಇಲ್ಲದ ದೊಡ್ಡ ಪಟ್ಟಣದ ಒಂದು ಸಂಧಿಯ ಹೊಸಮನೆ, ಹೊಸ ಮುಖಗಳೂ, ಮಧ್ಯೆ ನಿಲ್ಲುವುದು ಅವಳ ಸಹಜವಾದ ಉಲ್ಲಾಸವನ್ನು ಕುಗ್ಗಿಸಿತ್ತು. ಗಂಡನ ಮಾತಿಗೆ ಹೋಗಲೇಬೇಕೆಂಬ ಅನಿವಾರ್ಯತೆ ಇವಳನ್ನು ಸುಮ್ಮನಾಗಿಸಿತ್ತು.

ಹೇಗೋ ಅನಿವಾರತೆಯಿಂದಲೂ ಅಥವಾ ಗಂಡನ ಅಪೇಕ್ಷೆಯಿಂದಲೋ ಗಂಡ, ಹೆಂಡತಿ, ಮಗು ಮೂವರು ಬೆಂಗಳೂರಿನ ಪೆಂಡೆಪೇಟೆಯ ಬಳಿಯ ಓಣಿಯಲ್ಲಿ ಬಾಡಿಗೆ ಮನೆಯನ್ನು ಮಾಡಿದ್ದರು. ಬಂದ ದಿನವೇ ರಾಮಪ್ಪ ದೇವರ ಮಂದಿರಕ್ಕೆಂದು ಸುಳ್ಳು ಹೇಳಿ ದಿನ ರಾತ್ರಿ ಹೋಗಲು ಶುರುಮಾಡುತ್ತಾನೆ. ಚೆನ್ನಮ್ಮಳಿಗಂತೂ ಹೊಸ ಜಾಗ, ಹೊಸ ಪರಿಸರ ಊಟ, ಎಲ್ಲವೂ ಸಮಸ್ಯೆಯಾಗುತ್ತದೆ. ಹಳ್ಳಿಯಲ್ಲಿ ಒಳ್ಳೆಯ ವಾತಾವರಣದಲ್ಲಿ ಬೆಳೆದವಳಿಗೆ ಇಲ್ಲಿಯ ಚರಂಡಿ ವಾಸನೆ, ಸೀಮೆ ಎಣ್ಣೆಯ ದೀಪ ಏನೇನೂ ರುಚಿಯಿಲ್ಲದ ಹೋಟೆಲ್‌ನ ಊಟ, ಯಾವುದು ಸರಿಬಾರದೆ ಚಡಪಡಿಸುತ್ತಾಳೆ. ನಿಧಾನವಾಗಿ ಎಲ್ಲವೂ ಅಭ್ಯಾಸವಾಗುತ್ತದೆ ಎಂದು ಸಮಾಧಾನ ಪಟ್ಟುಕೊಂಡಳಾದರೂ, ಆದರೆ ಮನಸ್ಸಿನಲ್ಲಂತೂ ಅಸಮಾಧಾನವಿದ್ದೆ ಇರುತ್ತದೆ.

ಓೀಗೆ ದಿನಾಲೂ ರಾಮಪ್ಪ ದುಡಿದು ಬರುವುದು ರಾತ್ರಿ ಮಂದಿರಕ್ಕೆಂದು ಹೋಗಿ ತಡವಾಗಿ ಬರುವುದು ಇದೇ ಅಭ್ಯಾಸವಾದ ಚೆನ್ನಮ್ಮನಿಗೆ ಸಂಶಯ ಬರಲು ಶುರುವಾಗುತ್ತದೆ. ಇದಷ್ಟೇ

ಅಲ್ಲದೇ ಗಂಡ, ಚೆನ್ನಮ್ಮನಿಗೆ ಗಿರಣಿಯಲ್ಲಿ ಕೂಲಿಗೆ ಹೋಗು ಎಂದು ಒತ್ತಾಯ ಮಾಡಲು ಶುರುಮಾಡುತ್ತಾನೆ. ಆದರೆ ಚೆನ್ನಮ್ಮನಿಗೆ ಕೂಲಿ ಕೆಲಸವೆಂದರೆ ಅಗೌರವದ ಕೆಲಸವಾಗಿತ್ತು. ತಾನು ಭೂಮಿ ಉಳ್ಳ ತಂದೆಯ ಮಗಳು, ಭೂಮಿಯುಳ್ಳ ಗಂಡನ ಹೆಂಡತಿ, ಬೆಂಗಳೂರಿನಲ್ಲಿ ಕೂಲಿ ಮಾಡಿ ಹಣ ಗಳಿಸಬೇಕೆ? ಊರಿನಲ್ಲಿ ಕೂಲಿ ಕೊಡುವವಳು ಪಟ್ಟಣಕ್ಕೆ ಬಂದು ಕೂಲಿ ಮಾಡಬೇಕೆ ಎಂದು ತಿರಸ್ಕರಿಸುತ್ತಾಳೆ.

ಅದಕ್ಕೆ ರಾಮಪ್ಪ ಕೂಲಿ ಕೆಲಸವೆಂದರೆ ಹೊಲದ ಕೂಲಿ ಅಲ್ಲ ಎಂದು ಉಪಾಯವಾಗಿ ಹೇಳಿದರು ಚೆನ್ನಮ್ಮ ಕೇಳಾದವಳಾಗುತ್ತಾಳೆ. ಹೇಗೂ ಹೊಸದಾಗಿ ಬಂದವಳನ್ನು ಒತ್ತಾಯ ಮಾಡಬಾರದೆಂದು ಸುಮ್ಮನಾಗಿ ಮೂಗುತಿ ಮತ್ತು ಮಗನಿಗೆ ಕಡಗ ತೆಗೆದುಕೊಡುತ್ತಾನೆ. ತಿಂಗಳಿಗಿಷ್ಟು ತೀರಿಸುತ್ತೇನೆ ಎಂದು ಹೇಳಿ ಸುಮ್ಮನಾಗಿಸುತ್ತಾನೆ.

ಹಂಗಾದರೇನು ಈ ಬೆಂಗಳೂರಾಗ ಹತ್ತು ವರ್ಷ ಇರಬೇಕು ಅಂತಿಯಾ ನನಗೆ ಈಗಲೆ ಸಾಕಾಗಿ ಹೋಯಿತು. ಯಾಕೆ ಸಾಕಾಗಿ ಹೋಯಿತು? ಹಳ್ಳಿಯಲ್ಲಿ ತಿನ್ನುತ್ತಿದ್ದ ಹಿಟ್ಟಿಲ್ಲ, ಪಟ್ಟಣದ ಅನ್ನ ಆಗಿಬಿಡತು ಅಂತಲಾ? ಎಂದು ರಾಮಪ್ಪ ಎಂದಾಗ "ಅವ್ವಾ! ನಿನ್ನ ಪಟ್ಟಣದ ಅನ್ನ ಈ ಚರಂಡಿಗಬ್ಬು ಎರಡೂ ಬ್ಯಾಡ ಅನ್ನಿಸತದೆ ನನಗೆ ಊರಾಗಿದ್ದು ಹೊಲದಾಗ ದುಡಿದು ಹಾಯಾಗಿ ಹಿಟ್ಟುಂಡೇನು ಅನ್ನಿಸುತ್ತದೆ."(ಅದೇ, ಪು.೨೯)

ಹೀಗೆ ಇಬ್ಬರ ನಡುವೆ ಮಾತುಕತೆ ನಡೆದು ಎಷ್ಟೇ ಬೇಡವೆಂದರೂ ರಾಮಪ್ಪ ಒಂದು ಮೆಸ್ತ್ರಿ ಕರೆದುಕೊಂಡು ಬಂದು ಚೆನ್ನಮ್ಮನಿಗೆ ಬುದ್ದಿ ಹೇಳಿಸಿ ಕೆಲಸಕ್ಕೆ ಬರಲು ಒಪ್ಪಿಸುತ್ತಾನೆ, ಆದರೂ ಈ ವಿಷಯ ಊರಿನಲ್ಲಿ ಯಾರಿಗೂ ತಿಳಿಯಬಾರದೂ ಎಂದು ಎಚ್ಚರಿಸುತ್ತಾಳೆ.

ಆಗಿನಿಂದ ಮಗುವನ್ನು ಕರೆದುಕೊಂಡು ಗಿರಣಿಗೆ ಹೋಗಲು ಶುರುಮಾಡುತ್ತಾಳೆ. ಮೇಸ್ತ್ರಿ ಇವಳು ಹೋದ ಕೆಲವೇ ದಿನಗಳಲ್ಲಿ ಕೂಲಿ ಜಾಸ್ತಿ ಮಾಡಿದ ಚೆನ್ನಮ್ಮಳ ಹತ್ತಿರ ಅಸಭ್ಯ ವರ್ತನೆ ಯಿಂದ ನಡೆದುಕೊಳ್ಳಲು ಶುರುಮಾಡುತ್ತಾನೆ ಇದಷ್ಟೆ ಅಲ್ಲದೆ ದಿನಾಲು ರಾತ್ರಿ ರಾಮಮಂದಿರಕ್ಕೆಂದು ಹೋಗುತ್ತಿದ್ದ ರಾಮಪ್ಪನ ನಿಜ ಸಂಗತಿ ಚೆನ್ನಮ್ಮಳ ಸಂಬಂಧಿಕರಾದ ಲಿಂಗಪ್ಪನಿಂದ ರಾಮಪ್ಪನ ಅವ್ಯವಹಾರ ತಿಳಿಯುತ್ತದೆ. ದಿನಾಲು ರಾಮಮಂದಿರಕ್ಕೆಂದು ಹೋಗಿ ಅಲ್ಲಿ ಕುಡಿದು ತಿಂದು ಒಬ್ಬ ಹೆಂಗಸಿನೊಂದಿಗೆ ಇರುವ ಸಂಗತಿ ತಿಳಿದು ಚೆನ್ನಮ್ಮ ದುಃಖಿತಳಾಗುತ್ತಾಳೆ. ಆ ಹೆಂಗಸಿಗೆ ಕೊಡಲು ದುಡ್ಡು ರಾಮಪ್ಪನ ದುಡಿಮೆಯಿಂದ ಸಾಕಾಗದ ಕಾರಣ ಚೆನ್ನಮ್ಮಳನ್ನು ಕೆಲಸಕ್ಕೆ ಸೇರಿಸಿದ್ದಾಕ್ಕಾಗಿ ಮನೆಯಲ್ಲಿ ಗಂಡ ಹೆಂಡತಿ ನಡುವೆ ಜಗಳವಾಗುತ್ತದೆ. ತಮ್ಮಿಬ್ಬರ ಬದುಕೂ ಈ ಪಟ್ಟಣದ ಬಾಳಿಗೆ ಬಲಿಯಾಯಿತೆಂದು ದುಃಖಪಡುತ್ತಾಳೆ. ಇದಾದ ಸ್ವಲ್ಪ ದಿನಗಳ ನಂತರ ನಡೆದ ರಾಮಪ್ಪನಿಗೂ ಮತ್ತು ರಾಮಮಂದಿರಕ್ಕೆ ಹೋಗುತ್ತಿದ್ದ ಅಲ್ಲಿಯ ಜನರಿಗೂ ನಡೆದ

ಗಲಾಟೆಯಲ್ಲಿ ರಾಮಪ್ಪ ಒಬ್ಬನನ್ನು ಹೊಡೆದಿದ್ದ ಅಷ್ಟೇ ಅಲ್ಲದೆ ರಾಮಂದಿರದ ಫಂಡಿನ ಹಣ ಬಳಸಿಕೊಂಡ ಕಾರಣಕ್ಕಾಗಿ ರಾಮಪ್ಪ ಮೇಸ್ತ್ರಿಯ ಹತ್ತಿರ ಹಣ ತೆಗೆದುಕೊಂಡು ಚೆನ್ನಮ್ಮನ ಹತ್ತಿರ ಸತ್ತಿದ್ದನೆಂದು ಸಹಿ ಮಾಡಿಸಿಕೊಂಡು ಗಿರಣಿಯ ಹಣವನ್ನು ಮುಂಗಡ ತೆಗೆದುಕೊಳ್ಳುತ್ತಾನೆ, ಅವಿದ್ಯಾವಂತೆಯಾದ ಚೆನ್ನಮ್ಮ ಇದಾವದು ತಿಳಿಯದೇ ಕಾಗದಕ್ಕೆ ರುಜು ಮಾಡುತ್ತಾಳೆ.

ಸ್ವಲ್ಪದಿನ ಮಟ್ಟಿಗೆ ಪೋಲಿಸರು ರಾಮಪ್ಪನನ್ನು ಹುಡುಕಿದರೂ, ರಾಮಪ್ಪ ಚೆನ್ನಮ್ಮನನ್ನು ಕರೆದುಕೊಂಡು ಹೋಗಿ ಹೊಸಮನೆ ಮಾಡುತ್ತಾನೆ. ಅಲ್ಲಿಯೂ ಸಹ ಪೋಲಿಸರು ಚೆನ್ನಮ್ಮಳ ಹತ್ತಿರ ಬಂದು ಗಂಡ ಸತ್ತಿದ್ದನೆಂದು ಹಣ ತೆಗೆದುಕೊಂಡಕ್ಕಾಗಿ ೬ ತಿಂಗಳ ಕಾಲ ಜೈಲುಗೆ ಹಾಕುತ್ತಾರೆ ಏನು ತಪ್ಪು ಮಾಡದ ಚೆನ್ನಮ್ಮ ಶಿಕ್ಷೆ ಅನುಭವಿಸುತ್ತಾಳೆ. ಹೀಗೆ ಆರು ತಿಂಗಳ ನಂತರ ಚೆನ್ನಮ್ಮನ ಬಿಡುಗಡೆಯ ದಿನ ಚೆನ್ನಮ್ಮನ ತಾಯಿ ಬರುತ್ತಾಳೆ. ಜೊತೆಗೆ ಗಂಡ ರಾಮಪ್ಪನು ಬಂದು ನನ್ನದು ತಪ್ಪಾಯಿತು. ಈಗ ಕೂಡಿ ಬಾಳೋಣವೆಂದು ಕೇಳಿಕೊಂಡರು ಚೆನ್ನಮ್ಮ ಕಲ್ಲಾಗಿ ನಿಲ್ಲುತ್ತಾಳೆ. ಅದಕ್ಕೆ ರಾಮಪ್ಪ ಒಂದು ತಿಂಗಳು ಬಿಟ್ಟಾದರೂ ಬರುತ್ತೀಯಾ ಎಂದಾಗ.

"ನಾ ತಿಂಗಳಲ್ಲೂ ಬರಲಾರಿ ಎರಡು ತಿಂಗಳಲ್ಲೂ ಬರಲಾರಿ ಬರೋದಿಲ್ಲಾಂತಲೂ ಅನ್ನಲಾರಿ ಊರಿಗೆ ಬಂದರೂ ಈಗ ನಾ ಬಾಳ್ವೆ ಮಾಡಲಾರಿ ಈಗ ನಾ ಯಾವುದನ್ನು ಒಲ್ಲೆ ನನ್ನ ಯಾಕ ಸುಮ್ಮನೆ ಕಾಡೋದು ಎಂದು ಮುಖಕ್ಕೆ ಹೊಡೆದಂತೆ ಹೇಳಿ ತಾಯಿಯೊಂದಿಗೆ ತನ್ನ ಊರಿಗೆ ಹೊರಡಲು ರೈಲ್ವೆ ಸ್ಟೇಷನಿಗೆ ತಯಾರಾಗುತ್ತಾಳೆ. ಇನ್ನು ಈ ಕಡೆ ರಾಮಪ್ಪ ನಾನವಳ ಪಾಲಿಗೆ ಇಲ್ಲವೆಂದು ಇಟ್ಟಕೋ ಎಂದು ಹೋಗುತ್ತಾನೆ. ಅಲ್ಲಿ ಗಿರಣಿಯ ಕೂಲಿಗಾರರ ಗಲಾಟೆಯಲ್ಲಿ ಪೋಲಿಸರಿಂದ ಗುಂಡಿಗೆ ಬಲಿಯಾಗುತ್ತಾನೆ. ಈ ವಿಷಯ ಚೆನ್ನಮ್ಮಳ ಸಂಬಂಧಿಕನಾದ ಲಿಂಗಪ್ಪ ರೈಲ್ವೆ ಸ್ಟೇಷನಿಗೆ ಬಂದು ವಿಷಯ ತಿಳಿಸಿ ಕರೆದರೆ ಚೆನ್ನಮ್ಮ ಅವ್ವ ಹೋಗುವುದಾದರೆ ನೀ ಹೋಗಿ ಬಾ ನಾ ಇಲ್ಲೆ ಇರತೀನಿ. ಅಂತಿದ್ದಿ ಗಂಡನ ಬಿಟ್ಟ ತಾಳೀನೆನ್ ತಂದಿ ಅಂದ ಹನುಮಂತರಾಯ ತಗೋವ್ವ ಇವನೂ ಅದೇನಾ ಮಾಡಿಬಿಡು."(ಅದೇ, ಪು.೫೩) ಎಂದು ಕೊರಳಲ್ಲಿದ್ದ ತಾಳಿಯನ್ನು ಕಿತ್ತು ಕೈಯಲ್ಲಿಡುತ್ತಾಳೆ. ತಾಯಿ ಮಾದವ್ವ ಇವಳನ್ನು ಚಿಕ್ಕ ಮಗಾನೂ ಬಿಟ್ಟು ನಾ ಬಿಟ್ಟು ಏನು ಬರಲೇ ಎಂದು ಊರಿಗೆ ಹೊರಡುತ್ತಾಳೆ.

ಒಟ್ಟಾರೆಯಾಗಿ ೧೯೫೦ರ ದಶಕದಲ್ಲಿಯೇ ರಚನೆಯಾದ ಮಾಸ್ತಿಯವರ ಈ ಕತೆಯಲ್ಲಿ ರಾಮಪ್ಪ ಪಟ್ಟಣದ ಐಷಾರಾಮಿ ಜೀವನಕ್ಕೆ ಆಸೆಪಟ್ಟು ಹಳ್ಳಿಯಲ್ಲಿ ಬದುಕಿನ ಎಲ್ಲ ಸೌಕರ್ಯಗಳಿದ್ದರೂ ಬೆಂಗಳೂರಿಗೆ ಹೆಂಡತಿ ಮಗುವಿನೊಂದಿಗೆ ವಲಸೆ ಹೋಗಿ ಅಲ್ಲಿಯ ಹೆಂಗಸರೊಂದಿಗೆ ಅನೈತಿಕ ಸಂಬಂಧವನ್ನಿರಿಸಿಕೊಂಡು ಜೀವನವನ್ನೆ ಹಾಳು ಮಾಡಿಕೊಳ್ಳುತ್ತಾನೆ. ಆದರೆ ಈ ಕತೆಯ ನಾಯಕಿ

ಚೆನ್ನಮ್ಮ ಹಳ್ಳಿಯಲ್ಲಿ ಮಗಳಾಗಿ ಬದುಕಿ ಹಳ್ಳಿಯ ಪರಿಸರದಲ್ಲಿ ಬಾಳಿದ ಇವಳಿಗೆ ಗಂಡನ ಆಸೆಗೆ ವಿರುದ್ಧವಾಗಿ ಮಾತನಾಡದೆ ಒಪ್ಪಿಕೊಂಡು ಹೋಗುತ್ತಾಳೆ.

ಆದರೆ, ಅಲ್ಲಿಯ ಪರಿಸರಕ್ಕೆ ಹೊಂದಿಕೊಳ್ಳಲು ಆಗದೆ ಗಂಡನ ಶೋಷಣೆ ಅನೈತಿಕ ಸಂಬಂಧವನ್ನು ಸಹಿಸಿಕೊಂಡು ಕೊನೆಗೆ ಗಂಡನ ಮೋಸ ವಂಚನೆಯಿಂದ ಜೈಲುವಾಸವು ಅನುಭವಿಸುತ್ತಾಳೆ. ಆದರೆ ಕತೆಯಲ್ಲಿ ಆಕೆ ತೆಗೆದುಕೊಳ್ಳುವ ನಿರ್ಧಾರ ದಿಟ್ಟವಾಗಿ ಇರುತ್ತದೆ. ಗಂಡ ಎಲ್ಲವನ್ನು ಮರೆತು ಜೊತೆಗೆ ಬಾ ಎಂದು ಕರೆದಾಗ ಚೆನ್ನಮ್ಮ ಎಲ್ಲ ಹೆಣ್ಣಮಕ್ಕಳಂತೆ ಗಂಡನ ದಾಸಿಯಾಗದೆ, ಗಂಡನ ಶೋಷಣೆ, ಪ್ರತಿಕಾರವಾಗಿ ಪ್ರತಿಭಟಿಸಿ ಅವನು ಸತ್ತನೆಂದು ತಿಳಿದಾಗಲು ತಿರುಗಿ ಹೋಗದೇ ಗಂಡನ ತಾಳಿಯನ್ನು ಬಿಚ್ಚಿಕೊಟ್ಟು ತನ್ನೂರಿಗೆ ವಾಪಸು ಹೊರಟು ಹೋಗುತ್ತಾಳೆ. ಹೀಗೆ ಅನಿವಾರ್ಯತೆಯಿಂದಲೇ ವಲಸೆ ಬಂದ ಚೆನ್ನಮ್ಮ ಕೊನೆಗೂ ತನ್ನ ಬದುಕಲ್ಲಿ ಸುಖಕಾಣದೇ ವಾಪಸಾಗುತ್ತಾಳೆ. ಚೆನ್ನಮ್ಮಳ ಬಾಳಿನಲ್ಲಿ ವಲಸೆ ಕರಾಳವಾಗಿ ಕಾಣಿಸಿಕೊಳ್ಳುತ್ತದೆ.

ಹೀಗೆ 'ಚೆನ್ನಮ್ಮ' ಎಂಬ ಈ ಕತೆ ವಲಸೆಯ ಪ್ರೇರಣೆ ಪ್ರಕ್ರಿಯೆ ಪರಿಣಾಮಗಳನ್ನು ಸಂವೇದನೆಗಳ ಮೂಲಕ ಕಟ್ಟಿ ಕೊಡುತ್ತದೆ, ಅದರಲ್ಲೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ದುಡಿಯಲು ವಲಸೆ ಬಂದ ಅವಿದ್ಯಾವಂತ ಹೆಣ್ಣುಮಕ್ಕಳ ಮೇಲೆ ನೆಡೆಯುವ ಮೋಸ, ವಂಚನೆ, ಕೊಲೆಯಂತಹ ಶೋಷಣೆಗಳನ್ನು ಬಯಲಿಗೆಳೆಯುತ್ತದೆ, ಅದರಲ್ಲೂ ಸ್ವತಃ ಗಂಡನೆ ತನ್ನ ಮೋಜಿಗಾಗಿ ಹೆಂಡತಿ ಮಕ್ಕಳನ್ನು ಬೆಂಗಳೂರಿಗೆ ವಲಸೆ ಕರೆದುಕೊಂಡು ಬಂದು ಶೋಷಿಸುವ ರೀತಿ ಕರುಣಾಜನಕವಾಗಿ ಮೂಡಿಬರುತ್ತದೆ. ಹೀಗೆ ನಗರಗಳಲ್ಲಿ ನೆಡೆಯುವ ಕೊಲೆ, ಸುಲಿಗೆ, ಕಳ್ಳತನ, ಮೋಸ, ಅನ್ಯಾಯದಂತಹ ಅನೈತಿಕ ಚಟುವಟಿಕೆಗಳನ್ನು ಚಿತ್ರಿಸುತ್ತದೆ, ಅದರಲ್ಲೂ ಏನೂ ಅರಿಯದ ಹಳ್ಳಿಯಿಂದ ಹೋದ ಮುಗ್ದ ಹೆಣ್ಣಿನ ಮೇಲೆ ನೆಡೆಯುವ ಶೋಷಣೆ ಯಾವ ರೀತಿ ಪರಿಣಾಮ ಬೀರುತ್ತದೆ ಎಂಬುದನ್ನು ಇಲ್ಲಿ ನೋಡಲಾಗಿದೆ, ಜೊತೆಗೆ ಈ ಕಥೆಯಲ್ಲಿ ಚೆನ್ನಮ್ಮ ಹಳ್ಳಿಯಿಂದ ನಗರಕ್ಕೆ ವಲಸೆ ಬಂದರೂ ಮತ್ತೇ ತಿರುಗ ನಗರದಿಂದ ಹಳ್ಳಿಗೆ ವಾಪಾಸಾಗುವ ಒಂದು ಸೂಚನೆಯೊಂದಿಗೆ ಮುಗಿಯುತ್ತದೆ, ಹಾಗಾಗಿ ಇದೊಂದು ಚೆನ್ನಮ್ಮಳ ಬಾಳಿನಲ್ಲಿ ತಿರುವಲಸೆಯಾಗಿ ಪರಿಣಮಿಸುತ್ತದೆ, ಮತ್ತು ವಲಸೆಯ ಪ್ರೇರಣೆ ಪ್ರಕ್ರಿಯೆಗಿಂತ ನಗರದಲ್ಲಿ ನೆಡೆಯುವ ಪರಿಣಾಮವನ್ನು ಇದು ಹೆಚ್ಚು ಸ್ಪಷ್ಟಪಡಿಸುತ್ತದೆ.

ಡಾ.ಡಿ.ವಿ.ಗುರುಪ್ರಸಾದ್ ರವರ 'ಬೇರು' ಕಾದಂಬರಿಯಲ್ಲಿ ನಾಯಕ ಆದಿತ್ಯ ನನ್ನ ಊರು, ನನ್ನ ಮನೆ ಎಂಬ ಹಲವು ಭಾವನಾತ್ಮಕ ಹೊಂದಿದಾಗಲೂ ಹೆಂಡತಿಯ ಬಲವಂತಕ್ಕೆ ಅಮೆರಿಕಾಕ್ಕೆ ವಲಸೆ ಹೋಗಿ ನಾನಾ ಸಮಸ್ಯೆಗಳಿಗೆ ಗುರಿಯಾಗಿ ಅಲ್ಲಿ ಭಯೋತ್ಪಾದಕರಿಂದ ಮಗನಾದ ಆದಿತ್ಯನನ್ನು ಕಳೆದುಕೊಂಡು ಹೆಂಡತಿಯಿಂದ ವಿಚ್ಚೇದನ ತೆಗೆದುಕೊಂಡು ಒಬ್ಬ ಸ್ವಾಮೀಜಿಯಾಗಿ

ಪ್ರಪಂಚದೆಲ್ಲೆಲ್ಲ ಪರಿಚಯವಾಗುವ ಆದಿತ್ಯ ಕೊನೆಗೆ ತಾನು ಸತ್ತ ನಂತರ ಚಿತೆ ಭಸ್ಮ ತಾನು ಹುಟ್ಟಿದ ಮಣ್ಣಲ್ಲಿ ಸೇರಬೇಕೆಂದು ಆಸೆ ಪಡುತ್ತಾನೆ.

ತಂದೆ, ತಾಯಿಗೆ ಒಬ್ಬನೇ ಮಗನಾಗಿ ಹುಟ್ಟಿದ ಆದಿತ್ಯ ಎಲೆಕ್ಟ್ರಿಕಲ್ ಇಂಜನಿಯರಾಗಿ ಬೆಂಗಳೂರಿನಲ್ಲಿಯೇ ಕೆಲಸ ಮಾಡುತ್ತ ಸುಖವಾಗಿ ಇದ್ದವನಿಗೆ ಒಬ್ಬ ಶ್ರೀಮಂತನ ಮಗಳಾದ ಶಶಿಯನ್ನು ಕೊಟ್ಟು ಮದುವೆ ಮಾಡಲಾಗುತ್ತದೆ. ಮದುವೆಯಾದ ನಂತರ ಹೊಸ ತಿರುವನ್ನು ಪಡೆದುಕೊಂಡು ಆದಿತ್ಯ ಜೀವನದಲ್ಲಿ ದೊಡ್ಡ ಬಿರುಗಾಳಿಯನ್ನೇ ಬೀಸುತ್ತದೆ. ಶ್ರೀಮಂತನ ಮಗಳಾದ ಶಶಿಯ ವರ್ತನೆ, ನಡವಳಿಕೆ, ಸ್ವಾತಂತ್ರ್ಯವಾಗಿ ಬದುಕಬೇಕೆಂಬ ಆಸೆ ಆದಿತ್ಯ ಮನೆಯವರಿಗೆ ಕಿರಿಕಿರಿ ಉಂಟು ಮಾಡುತ್ತದೆ. ಹೇಗೂ ಆದಿತ್ಯನ ಇಬ್ಬರೂ ಮಕ್ಕಳು ಹೆಂಡತಿ, ತಂದೆ, ತಾಯಿ, ಸುಖವಾಗಿ ಇದ್ದ ಕುಟುಂಬದಲ್ಲಿ ಭಾರತದಲ್ಲಿದ್ದ ಶಶಿಯ ಸ್ನೇಹಿತೆಯಾದ ರಮಾ ಅಮೆರಿಕಾದ ಹುಡುಗನನ್ನು ಮದುವೆಯಾಗಿ ಆರಾಮವಾಗಿದ್ದ. ರಮಾ, ಒಮ್ಮೆ ಭಾರತಕ್ಕೆ ಬಂದಾಗ ಶಶಿಯನ್ನು ಅಮೆರಿಕಾಕ್ಕೆ ಬಂದರೆ ಬೇಗ ಶ್ರೀಮಂತರಾಗಿ ಆರಾಮವಾಗಿದ್ದ. ಇರಬಹುದು ಎಂದು ಆಸೆ ಹುಟ್ಟಿಸಿದ್ದರಿಂದ ಮೊದಲೇ ಶ್ರೀಮಂತಿಕೆಯ ಹುಚ್ಚು ಮತ್ತು ಸ್ವಾತಂತ್ರ್ಯವಾಗಿ ಬದುಕಬೇಕೆಂಬ ಹಂಬಲವಿದ್ದ ಶಶಿ ಆದಿತ್ಯನಿಗೆ ಅಮೆರಿಕಕ್ಕೆ ಹೋಗಲೇಬೇಕೆಂಬ ಹಠ ಹಿಡಿಯುತ್ತಾಳೆ.

ಇಲ್ಲಿಂದ ಕಾದಂಬರಿ ಹೊಸ ತಿರುವನ್ನು ಪಡೆದುಕೊಳ್ಳುತ್ತದೆ. ಅನೇಕ ಸಾವು ನೋವುಗಳೇ ಸಂಭವಿಸುತ್ತದೆ. ಈ ಮೊದಲೇ ಜಿ.ಇ.ಸಿ. ಕಂಪನಿಯ ಕಡೆಯಿಂದ ತರಬೇತಿಗೆಂದು ಹೋಗಿದ್ದ ಆದಿತ್ಯ, ಅಮೆರಿಕಾದಲ್ಲಿರುವ ಸಮಯದ ಮೇಲೆ ಇರುವ ಪ್ರಜ್ಞೆ, ಅಲ್ಲಿದ್ದಂತಹ ದೊಡ್ಡ ದೊಡ್ಡ ಅಪಾರ್ಟ್‌ಮೆಂಟ್ ಕಟ್ಟಡಗಳು, ಅವಸರದ ಬದುಕು ಎಲ್ಲವನ್ನು ನೋಡಿ ಒಂದು ತಿಂಗಳಲ್ಲಿ ಅಲ್ಲಿಯ ಬದುಕು ಸಾಕಾಗಿ ಬಂದಿದ್ದ. ಅಷ್ಟೇ ಅಲ್ಲದೇ "ನಾನಂತೂ ಲಕ್ಷ ವರಹ ಕೊಟ್ಟರೂ ನಮ್ಮ ಬೆಂಗಳೂರು, ನಮ್ಮ ಕರ್ನಾಟಕ, ನಮ್ಮ ಭಾರತ ಬಿಟ್ಟು ಖಂಡಿತಾ ಎಲ್ಲಿಯೂ ಹೋಗುವುದಿಲ್ಲ." (ಗುರುಪ್ರಸಾದ್ ಡಿ.ವಿ. ೨೦೦೩, ಪು.೧೪೬) ಅಂದಿದ್ದ.

ಈತನ ಅಷ್ಟೇ ಅಲ್ಲದೇ ತಂದೆ, ತಾಯಿಗಳು ಸಹ "ಆದಿ ನಮ್ಮ ಏಕೈಕ ಪುತ್ರ. ನಮ್ಮ ಜೀವನ ಇರುವುದು ಅವನಿಗಾಗಿಯೇ ಅವನೇ ನಮ್ಮ ಉಸಿರು ಅವನೇ ನಮ್ಮ ನಾಡಿಬಡಿತ. ಅವನು ನಮ್ಮಿಂದ ದೂರ ಹೋಗುವುದು ನಾನು ಸಹಿಸಲು ಆಗೋದಿಲ್ಲ. ಹಾಗೇನಾದ್ರು ಆದರೆ ನಾವು ವಿಷ ಕುಡಿದು ಪ್ರಾಣ ಬಿಡ್ತೀವಿ."(ಅದೇ, ಪು.೧೫೦) ಅಂದಿದ್ದರು.

ಇವರಷ್ಟೆ ಅಲ್ಲದೆ ಆದಿತ್ಯನ ಮಾವ ವೆಂಕಟೇಶ ಸಹ ಒಂದು ವೇಳೆ ಅಮೆರಿಕಾಕ್ಕೆ ವಲಸೆ ಹೋಗಬೇಕೆಂದಿದ್ದರೆ ಮದುವೆಯಾದ ಕೂಡಲೇ ಹೋಗಿದ್ದರೆ ನಿನ್ನ ಎರಡು ಮಕ್ಕಳೂ ಅಮೆರಿಕಾದಲ್ಲೇ ಜನಿಸಿ ಅಲ್ಲಿಯ ಪೌರತ್ವ ಪಡೀತಾ ಇದ್ದರು. ಅವರು ಅದೇ ದೇಶದಲ್ಲಿ ಜನಿಸಿದ್ರೆ ಅಲ್ಲಿಯ

ವಾತಾವರಣಕ್ಕೆ ಹೊಂದಿಕೊಂಡು ಬಿಡ್ತಾ ಇದ್ದರು. ನಿನ್ನ ಮಗನಿಗೆ ಈಗ ಹದಿಮೂರು ವರ್ಷ, ಮಗಳಿಗೆ ಹನ್ನೊಂದು ವರ್ಷ ಬೇರೆ ಬೇರೆ ಸ್ಕೂಲ್, ಬೇರೆ ಬೇರೆ ಗೆಳೆಯರು, ಬೇರೆ ಬೇರೆ ಪುಸ್ತಕ, ಸಿಲಬಸ್. ಆದರೆ ಅವರ ಮನಸ್ಸಿನ ಮೇಲೆ ಬಾರಿ ಪರಿಣಾಮ ಬೀರುತ್ತೆ ಅಷ್ಟೆ ಅಲ್ಲದೆ ಆದಿತ್ಯನ ಕೆಲಸದಲ್ಲಿ ಹಿರಿಯ ಉದ್ಯೋಗದಲ್ಲಿದ್ದರಿಂದ ದಿಡೀರನೇ ಬಿಟ್ಟರೆ ಅಲ್ಲಿ ಕೆಲಸ ಸಿಗದೆ ಪರದಾಡಬೇಕಾಗುತ್ತದೆ ಎಂದು ಏನೆನೂ ಬುದ್ದಿ ಹೇಳಿದರೂ ಶಶಿ ತನ್ನ ಹಠವನ್ನು ಬಿಡದೆ ಆದಿತ್ಯನನ್ನು ಅಮೆರಿಕಾಗೆ ಕರೆದುಕೊಂಡು ವಲಸೆ ಹೋಗುತ್ತಾಳೆ.

"ಆದಿತ್ಯನಿಗೂ ಅಮೆರಿಕಾಗೆ ಹೋಗಲು ಎರಡು ಹೆದರಿಕೆಗಳಿದ್ದವು. ಮೊದಲನೆಯದು ಅಲ್ಲಿ ತನ್ನ ಯೋಗ್ಯತೆಗೆ ತಕ್ಕ ನೌಕರಿ ಸಿಗುವುದಿಲ್ಲ ಅಂತ ಹಾಗೂ ಎರಡನೆಯದು ತನ್ನ ಮಕ್ಕಳ ಭವಿಷ್ಯ ತೂಗೂಯ್ಯಾಲೆಯಲ್ಲಿ ಇರುತ್ತದೆ. ಅಮೆರಿಕಾದಲ್ಲಿ ಇರುವ ಭಾರತೀಯ ಸಂಜಾತ ಮಕ್ಕಳು ಯಾವ ರೀತಿ ತುಮುಲಗಳಿಗೆ ಒಳಗಾಗಿ ಮಾನಸಿಕ ಒತ್ತಡಕ್ಕೆ ಬೀಳುತ್ತಾರೆ ಎಂಬುದನ್ನು ಅವನು ಚೆನ್ನಾಗಿ ಅರಿತಿದ್ದ. ಅವನ ಕೆಲವು ಸ್ನೇಹಿತರು, ಅವರ ಬಂಧುಗಳು, ಅಮೆರಿಕಾದಲ್ಲಿ ನೆಲೆಸಿ ಅಲ್ಲಿ ಮಕ್ಕಳಾದಾಗ ಅವರಿಗೆ ಭಾರತೀಯ ವ್ಯಾಲ್ಯೂಗಳನ್ನು ಅನುಸರಿಸಲು ಹೇಳುವುದು ನೋಡಿದ್ದ. ಆ ಮಕ್ಕಳು ತಮ್ಮ ಪರಿಸರ ಸಾಮಾಜಿಕ ನಿಯಮಗಳಿಗೂ ಹೊಂದಿಕೊಳ್ಳದೇ ಭಾರತೀಯ ಮೌಲ್ಯಗಳಿಗೂ ಹೊಂದಿಕೊಳ್ಳದೇ ಸಂದಿಗ್ದತೆಯಿಂದ ಬಹಳ ತೊಂದರೆ ಪಡುತ್ತಿದ್ದ."(ಅದೇ, ಪು.೧೭೪)

ಅಮೆರಿಕನ್ ಸಿಟಿಜನ್‌ಶೀಪ್ ಪಡಿಬೇಕು ಅಂತ ಅಮೆರಿಕಾದಲ್ಲೆ ಹೆರಿಗೆ ಮಾಡಿಸಿಕೊಳ್ಳುವ ನಮ್ಮ ಭಾರತೀಯರು ತಮ್ಮ ಮಕ್ಕಳನ್ನು ಅಮೆರಿಕನ್ ಸಿಟಿಜನ್‌ರಂತೆ ಬೆಳೆಯಲು ಏಕೆ ಬಿಡೋದಿಲ್ಲ? ಅಮೆರಿಕಾದಲ್ಲೇ ಹುಟ್ಟಿ ಬೆಳೆದ ಆ ಮುಗ್ದ ಮಕ್ಕಳು ಯಾಕೆ ಭಾರತೀಯ ಸಂಸ್ಕೃತಿ ಅಳವಡಿಸಿ ಕೊಳ್ಳಬೇಕು? ಅವರು ತಮ್ಮ ಜೀವನವೆಲ್ಲ ಅಮೆರಿಕನ್ ಪ್ರಜೆಗಳಾಗಿ ಕಳೆಯುವುದರಿಂದ ಅವರಿಗೇಕೆ ಭಾರತೀಯ ಆಚಾರ ವಿಚಾರ ಕಲಿಸಬೇಕು. ಅವರು ಯಾಕೆ ಯುಗಾದಿ ಹಬ್ಬ ಮಾಡಬೇಕು? ನಮ್ಮ ಮೌಲ್ಯಗಳನ್ನು ಅಮೆರಿಕಾ ಪ್ರಜೆಗಳಾದ ನಮ್ಮ ಮಕ್ಕಳ ಮೇಲೆ ಏಕೆ ಹೇರಬೇಕು ಹೇಳು. ಆ ಮುಗ್ದ ಮಕ್ಕಳು ಭಾರತೀಯರೂ ಆಗದೇ ಅಮೆರಿಕ ಕನ್ನಡಿಗರೂ ಆಗದೇ ದ್ವಂದ್ವದಲ್ಲೇ ಬೆಳೆಯುತ್ತಾರೆ. ಎರಡು ಸಂಸ್ಕೃತಿಗಳ ನಡುವೆ ಹೊಯ್ದಾಡುತ್ತಾರೆ. ತೊಳಲಾಡುತ್ತಾರೆ. ತ್ರಿಶಂಕು ಸ್ಥಿತಿ ಅನುಭವಿಸುತ್ತಾರೆ. ಪಾಪ ಅಲ್ಲಿಯೂ ಸಲ್ಲ, ಇಲ್ಲಿಯೂ ಸಲ್ಲ ಎಲ್ಲಿಯೂ ಸಲ್ಲ ಎನ್ನಿಸಿಕೊಳ್ಳುತ್ತಾರೆ. ಆ ಮಕ್ಕಳನ್ನು ನಾವು ದೊಡ್ಡವರು ಏಕೆ ನಮ್ಮ ಸ್ವಾರ್ಥಕ್ಕೆ ಬಲಿಕೊಡಬೇಕು ಹೇಳು."(ಅದೇ, ಪು.೧೭೪-೧೭೫) ಎಂದಿದ್ದ. ಹೀಗೆ ನಮ್ಮ ನಮ್ಮ ಸ್ವಾರ್ಥಗಳಿಗೆ ಆಸೆಗಳಿಗೆ ಮಕ್ಕಳ ಭವಿಷ್ಯ ಕೆಡಬಾರದು ಎಂಬ ಉದ್ದೇಶದಿಂದ ಆದಿತ್ಯ ಅಮೆರಿಕಕ್ಕೆ ಹೋಗುವುದನ್ನು ತಡೆಯಲು ಬಹಳ

ಪ್ರಯತ್ನಪಟ್ಟ. ಆದರೂ ವಿಧಿಯಾಟ ಬೆಂಗಳೂರಿನ ಕೆಲಸಕ್ಕೆ ರಾಜಿನಾಮೆ ಕೊಟ್ಟು ಅಮೆರಿಕಾಕ್ಕೆ ವಲಸೆ ಹೋಗಲು ನಿರ್ಧಾರ ಮಾಡಿಯೇ ಬಿಟ್ಟ.

ನಾನಾ ಗೊಂದಲ ಆತಂಕ ಸಮಸ್ಯೆಗಳೊಂದಿಗೆ ಹೊರಟ ಆದಿತ್ಯನ ಕುಟುಂಬ ಆದಿತ್ಯನನ್ನು ಹೊರತುಪಡಿಸಿ ಹೆಂಡತಿ ಮಕ್ಕಳಿಗೆ ಈ ವಲಸೆ ಖುಷಿಕೊಟ್ಟಿತ್ತು. ಅಮೆರಿಕಾದಲ್ಲಿ ಕೆಲಸ ಸಿಗುವವರೆಗೂ ಆದಿತ್ಯನ ಕುಟುಂಬ ಶಶಿಯ ಸ್ನೇಹಿತೆ ರಮಾ ಮನೆಯಲ್ಲಿಯೇ ನೆಲೆಸಿದ್ದರು. ಹೋಗಿ ಒಂದುವರೆ ತಿಂಗಳಾದರೂ ಆದಿತ್ಯನಿಗೆ ಯಾವುದೇ ಕೆಲಸ ಸಿಕ್ಕಿರಲಿಲ್ಲ. ಮಕ್ಕಳು ಶಾಲೆಗೆ ಹೋಗಲು ಆರಂಭಿಸಿದರು. ಹೆಂಡತಿ ಶಶಿ ಸೇಲ್ಸ್‌ಗರ್ಲ್ಸ್ ಆಗಿ ಕೆಲಸಕ್ಕೆ ಸೇರಿಕೊಂಡಳು. ಆದಿತ್ಯ ಎಲ್ಲಿಯೂ ಕೆಲಸ ಸಿಗದೇ ಬೇಜಾರಿನಿಂದ ಮನೆಯಲ್ಲಿಯೇ ಕುಡಿಯುವ ಚಟಕ್ಕೆ ಬಲಿಯಾದ ಶಶಿಯು ಕೆಲಸಕ್ಕೆ ಹೋಗುತ್ತಿದ್ದರಿಂದ ಆದಿತ್ಯನಿಗೆ ನೀನು ಈಗ ಭಾರತದ ಹೌಸ್‌ವೈಫ್ ತರಹ ಮನೆಯಲ್ಲಿ ಎಲ್ಲ ಕೆಲಸ ಮಾಡಬೇಕು ಎಂದು ಷರತ್ತು ಹಾಕುತ್ತಾಳೆ.

ಭಾರತದಲ್ಲಿ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದವನಿಗೆ ಅಮೆರಿಕಾದ ಬಲವಂತದ ವಲಸೆ ದುಃಖಕ್ಕೀಡು ಮಾಡಿತ್ತು. ಹೇಳಿಕೊಳ್ಳಲು ಯಾರು ಆಪ್ತರಿಲ್ಲದ ಸಂಕಟ. ಭಾರತಕ್ಕೆ ಫೋನ್ ಮಾಡೋಣವೆಂದರೆ ಹಣದ ಸಮಸ್ಯೆ ಹೀಗೆ ನೋವಿನಲ್ಲಿಯೇ ಕಾಲಕಳೆಯುತ್ತಿದ್ದವನಿಗೆ ಒಂದು ದಿನ ಒಂದು ಕಂಪನಿಯಲ್ಲಿ ಕೆಲಸ ಸಿಕ್ಕಿತು. ಆಗ ಒಂದು ಚೂರು ನೆಮ್ಮದಿ ಕಂಡಿತಾದರೂ ಇದಾದ ಆರು ತಿಂಗಳ ನಂತರ ಮಗ ರೋಷನ್ ಶಾಲೆಯಲ್ಲಿ ಗುಂಡಿನ ದಾಳಿಗೆ ಬಲಿಯಾಗುತ್ತಾನೆ. ಇದರಿಂದ ಆಘಾತಗೊಂಡ ಆದಿತ್ಯ ಮತ್ತೆ ಖಿನ್ನನಾಗುತ್ತಾನೆ. ಈ ವಿಷಯ ತಿಳಿದ ಆದಿತ್ಯನ ತಂದೆ ತಾಯಿಯಂತು ನೋವಿನಿಂದ ಕಂಗಾಲಾಗುತ್ತಾರೆ. ಇದರಿಂದ ಸ್ವಲ್ಪದಿನಗಳಲ್ಲಿ ಆದಿತ್ಯನ ತಂದೆ ತಾಯಿ ಮೊಮ್ಮಗನ ಸಾವು ಮಗನ ವಿರಹದ ಅಪಾರ ದುಃಖವನ್ನು ತಡೆಯದೆ ಕಾಂಫೋನ್ ಮಾತ್ರೆ ತೆಗೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.

ತಂದೆ ತಾಯಿ ಮುಖನೋಡಕೂ ಆದಿತ್ಯ ಹತ್ತಿರ ಡಾಲರ್ ಇಲ್ಲದೆ ಕಂಪನಿಯಲ್ಲಿ ರಜೆ ಕೊಡದ ಕಾರಣ ಸಾಕಷ್ಟು ಪರದಾಡುತ್ತಾನೆ. ಆದರೂ ಕೊನೆಗೆ ಒಂದು ದಿನದ ಮಟ್ಟಿಗೆ ಅಂತ್ಯಕ್ರಿಯೆ ಮಾಡಲು ಬೆಂಗಳೂರಿಗೆ ಬಂದು ಕ್ರಿಯೆ ಮುಗಿದ ನಂತರ ಹೊರಟು ಹೋಗುತ್ತಾನೆ. ಭಾರತಕ್ಕೆ ಬಂದಾಗ ತನ್ನ ಮಾವನಾದ ವೆಂಕಟೇಶನ ಹತ್ತಿರ ತನ್ನ ನೋವನ್ನೆಲ್ಲಾ ಹೇಳಿಕೊಂಡು. ನರಳುತ್ತಾನೆ. ಮತ್ತೆ ವಾಪಸ್ಸು ಭಾರತಕ್ಕೆ ಬರುವುದೆಂದರೆ "ಒಂದು ಸಲ ಮಾತ್ರ ಭೂಮಿಗೆ ವಿದಾಯ ಹೇಳಿ ಇನ್ನೊಂದು ದೇಶಕ್ಕೆ ವಲಸೆ ಹೋದ ವ್ಯಕ್ತಿ ಮತ್ತೆ ತನ್ನ ಊರಿಗೆ ವಾಪಸ್ಸಾದರೆ ಜನ ನೂರು ಮಾತು ಆಡ್ತಾರೆ ಏನೇ ಆದರೂ ನನಗೆ ಭಾರತಕ್ಕೆ ಬರುವ ಅಧಿಕಾರವಿದೆ ಬಂದು ಬಿಡೋಣವೆಂದರೆ ಶಶಿಯಾಗಲಿ, ತಾರಾ ಆಗಲಿ ಏನು ಮಾಡಿದರೂ ಮತ್ತೆ ಇಂಡಿಯಾಕ್ಕೆ ವಾಪಸ್ಸಾಗುವುದಿಲ್ಲವೆಂದು

ಶಪಥ ಮಾಡಿದ್ದಾರೆ. ಭಾರತಕ್ಕೆ ಒಬ್ಬಂಟಿಯಾಗಿ ವಾಪಸ್ಸು ಬಂದು ಏನು ಮಾಡಲಿ ಇದ್ದ ಒಂದೇ ಒಂದು ಆಸರೆ ಅಪ್ಪ ಅಮ್ಮನೂ ಇಲ್ಲದೆ ಬೆಂಗಳೂರಿಗೆ ಬಂದು ಏನು ಸಾದಿಸಲಿ."(ಅದೇ, ಪು.೨೧೯) ಎಂದು ವಾಪಸ್ಸು ಅಮೆರಿಕಾಕ್ಕೆ ಹೊರಟು ಹೋಗುತ್ತಾನೆ. ಹೋಗುವ ಮುಂಚೆಯೆ ಆದಿತ್ಯನ್ನು ನೋಟಿಸ್ ಕೊಡದೇ ರಜೆ ಪಡೆದಿದ್ದರಿಂದ ಕೆಲಸದಿಂದ ತೆಗೆದು ಹಾಕಿತ್ತು. "ಬಾಸ್ಟರ್ಡ್ಸ್ ಅಮೆರಿಕನ್ಸ್ ಕಂತ್ರಿ ನಾಯಿಗಳು, ಹೃದಯವೇ ಇಲ್ಲದ ಹಂದಿಗಳು."(ಅದೇ, ಪು.೨೦೦) ಎಂದು ಬೈಯಲು ಶುರುಮಾಡುತ್ತಾನೆ. ಅವನು ಮತ್ತೆ ಒಂದು ಥರ ತ್ರಿಶಂಕು ಸ್ಥಿತಿಯಲ್ಲಿ ಒದ್ದಾಡುತ್ತಾನೆ.

ಮತ್ತೆ ಅಮೆರಿಕದಲ್ಲಿ ಕೆಲಸ ಕಳೆದುಕೊಂಡು ಕಾದಂಬರಿಗಳನ್ನು ಓದುತ್ತಾ ಮನೆಯಲ್ಲಿ ಕಾಲಕಳೆಯುತ್ತಾನೆ. ಒಂದು ದಿನ ಶಶಿ ತಾನು ಕೆಲಸಕ್ಕೆ ಸೇರಿಕೊಂಡ ಮಾಲಿಕನೊಂದಿಗೆ ಸಂಬಂಧವಿರಿಸಿಕೊಂಡು ಮನೆಯಲ್ಲಿಯೇ ಲೈಂಗಿಕತೆಯನ್ನು ನಡೆಸುತ್ತಿದ್ದ ಸಂದರ್ಭವನ್ನು ನೋಡಿ ಆದಿತ್ಯ ದಂಗಾಗಿ ಹೋಗುತ್ತಾನೆ. ಶಶಿಯಂತೂ ತಾನು ಮಾಡಿದ ಕೆಲಸದಲ್ಲಿ ತಪ್ಪೆ ಇಲ್ಲವೆನ್ನುವಂತೆ ವಾದಿಸಿ ಕೊನೆಗೆ ಡೈವೋರ್ಸ್ ಕೊಡುವಂತೆ ಒತ್ತಾಯಿಸುತ್ತಾಳೆ. ಆದರೆ ಆದಿತ್ಯ ಡೈವೋರ್ಸ್ ಕೊಟ್ಟರೆ ಪ್ರತಿ ತಿಂಗಳು ಧನ ಸಹಾಯ ಕೇಳುತ್ತೀಯಾ ಜೊತೆಗೆ ಮಗಳಿಗೂ ಇನ್ನೂ ಹದಿನೆಂಟು ತುಂಬಿಲ್ಲ. ಹಾಗಾಗಿ ಮಗಳು ಯಾರ ಹತ್ತಿರ ಇರಬೇಕು ಎಂದು ತೊಂದರೆಗಳು ಉಂಟಾಗುತ್ತವೆ. ಹಾಗಾಗಿ ನಾನೇ ಮನೆ ಬಿಟ್ಟು ಹೋಗುತ್ತೇನೆ ಎಂದನು. ಆದರೂ ಶಶಿ ಆದಿತ್ಯ ನೀನು ಹೀಗೆ ಹೊರಟರೆ ನಾನು ಇಲ್ಲಿಯ ಕನ್ನಡ ಜನರ ಬಳಿ ಏನು ಹೇಳಲಿ? ಬೆಂಗಳೂರಿನ ಕುಟುಂಬದವರಿಗೆ ಏನು ಉತ್ತರ ಹೇಳಲಿ ಎಂದಾಗ "ಶಶಿ ಇನ್ನು ನನ್ನ ಹಾಗೂ ಭಾರತದ ನಂಟು ಮುರಿಯಿತು. ನನಗೆ ಬೆಂಗಳೂರಿನ ನನ್ನ ಸೋದರಮಾವ ವೆಂಕಿಯೊಡನೆ ಮಾತ್ರ ಇತ್ತು. ಅದನ್ನು ಕಡಿದು ಹಾಕ್ತೀನಿ ನಾನೇನೂ ಭಾರತಕ್ಕೆ ವಾಪಸ್ ಹೋಗುವ ಪ್ಲಾನ್ ಹಾಕಿಲ್ಲ. ನಾನು ಇದೇ ದೇಶದಲ್ಲೇ ಇರ್ತೀನಿ. ಅಂದ ಹಾಗೆ ನಾನು ಚಿಕಾಗೋದಲ್ಲೇ ಇದ್ದ ಇಲ್ಲಿನ ಕನ್ನಡಿಗರ ಕಣ್ಣಿಗೆ ಬಿದ್ದು ನಿನ್ನ ಗುಟ್ಟು ರಟ್ಟು ಮಾಡ್ತೀನಿ ಎಂದು ಭಯಪಡಬೇಡ. ನಾನು ಈ ಕ್ಷಣವೇ ಚಿಕಾಗೋ ಬಿಟ್ಟು ಹೊರಟು ಹೋಗ್ತೀನಿ."(ಅದೇ ಪು.೨೧೪) ಎಂದು ತೀರ್ಮಾನಿಸುತ್ತಾನೆ. ಅಲ್ಲಿಂದ ದುಃಖದಿಂದ ನಿರಾಸೆ ಬೇಸರದಿಂದ ಬಂದ ಆದಿತ್ಯ ಕಾರಿನಲ್ಲಿ ಸ್ಯಾನಫ್ರಾನ್ಸಿಸ್ಕೋ ತಲುಪಿ ತನ್ನ ಸ್ನೇಹಿತನಾದ ಹಾಲಿವುಡ್ ಛಾಯಾಗ್ರಾಹಕ ಶ್ಯಾಂನನ್ನು ಭೇಟಿಯಾಗಿ ಒಂದೆರಡು ತಿಂಗಳು ಅವರ ಮನೆಯಲ್ಲಿಯೇ ಇದ್ದು, ಕೆಲಸಕ್ಕೆ ಅರ್ಜಿ ಹಾಕಿದ ಜೊತೆಗೆ ತನ್ನ ಮನಶಾಂತಿಗಾಗಿ ಗಾಯತ್ರಿ ಮಂತ್ರವನ್ನು ದಿನಾಲು ಜಪಿಸುತ್ತಿದ್ದ.

ಒಂದು ಸಾರಿ ಛಾಯಾಗ್ರಾಹಕ ಏರ್ಪಡಿಸಿದ್ದ ಪಾರ್ಟಿಗೆ ಹಾಲಿವುಡ್ ನಟಿವೊಬ್ಬಳ ಪರಿಚಯದಿಂದ ೯೪೮ರಲ್ಲಿ ಗಾಯಿತ್ರಿ ಫೌಂಡೇಶನ್ ಆರಂಭವಾಗಿ ಪ್ರಪಂಚದಾದ್ಯಂತ ಅಶಾಂತಿಯಿಂದ ನರಳುತ್ತಿರುವವರೆಗೆ ಗಾಯತ್ರಿ ಮಂತ್ರ ಶಾಂತಿ ತಂದುಕೊಟ್ಟು ಯಶಸ್ವಿಯಾಗಿತ್ತು.

ಲಾಸ್ ಏಂಜಲ್ಸ್‌ನ ಹಾಲಿವುಡ್ ನಟಿ ಹಲವಾರು ಚಿತ್ರಗಳಲ್ಲಿ ನಟಿಸಿ ಕೋಟ್ಯಾಂತರ ಡಾಲರ್ ಸಂಪಾದಿಸಿ ಎಲ್ಲ ತರಹದ ಸುಖವನ್ನು ಅನುಭವಿಸಿದ್ದಳು. ಆದರೆ ಈಕೆಗೆ ವಯಸ್ಸಾಗಿದ್ದ ಕಾರಣ ಮತ್ತು ಮಾದಕ ವಸ್ತುಗಳ ಸೇವನೆಯಿಂದಾಗಿ ಚಿತ್ರೋದ್ಯಮ ದೂರವಿಟ್ಟಿತ್ತು. ಇದರಿಂದಾಗಿ ಹ್ಯಾರಿಸನ್‌ಗೆ ಜೀವನವೇ ನಿರಾಸೆ ಎನಿಸಿದಾಗ ಆಕಸ್ಮಾತಾಗಿ ಪಾರ್ಟಿಯಲ್ಲಿ ಪರಿಚಯವಾದ ಆದಿತ್ಯನಿಂದ ಗಾಯಿತ್ರಿ ಮಂತ್ರ ಕಲಿತು ಅದರಿಂದ ಪ್ರಭಾವಿತಳಾಗಿ, ಇದರ ಉಪಯೋಗ ಎಲ್ಲರಿಗೂ ಆಗಬೇಕೆಂದು ಮೊದಲು ಈಕೆಯ ಮನೆಯಲ್ಲಿ ಉದಯಿಸಿದ ಗಾಯಿತ್ರಿ ಫೌಂಡೇಶನ್ ಮುಂದೆ ಅಮೆರಿಕಾದ ಕ್ಯಾಲಿಪೋರ್ನಿಯಾ ಪ್ರಾಂತ್ಯದಲ್ಲಿ ಇನ್ನೂರು ಎಕರೆ ಜಮೀನಿನಲ್ಲಿ ಇಂಟರ್‌ನ್ಯಾಶನಲ್ ಗಾಯಿತ್ರಿ ಫೌಂಡೇಶನ್ ಆಶ್ರಮ ಸ್ಥಾಪಿತವಾದ ಹದಿನೈದು ವರ್ಷಗಳಲ್ಲೆ ವಿಶ್ವವಿಖ್ಯಾತವಾಗಿದ್ದು ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿ ಪ್ರಖ್ಯಾತಿಯನ್ನು ಪಡೆದು ಭಾರತವನ್ನು ಬಿಟ್ಟು ನೂರಾ ಹದಿನೈದು ಶಾಖೆಗಳನ್ನು ಹೊಂದಿ ಲಕ್ಷಕ್ಕೂ ಮೀರಿದ ಭಕ್ತರಿದ್ದರು. ಆದರೆ ಭಾರತಕ್ಕೆ ಕಾಲಿಡುವುದಿಲ್ಲ ಎಂದು ಹೆಂಡತಿಯ ಹತ್ತಿರ ಶಪಥ ಮಾಡಿದ್ದ ಆದಿತ್ಯ ಭಾರತದಲ್ಲಿ ಫೌಂಡೇಶನ್ ಆರಂಭಿಸಲು ನಿರಾಕರಿಸಿದ್ದ.

ಒಂದು ಸಾರಿ ಆದಿತ್ಯ ಸ್ವಾಮೀಜಿಯಾಗಿ ತನ್ನ ಜೀವನ ವೃತ್ತಾಂತವನ್ನೆಲ್ಲಾ ಕಾಗದದಲ್ಲಿ ಬರೆದು ತನ್ನ ಭಕ್ತೆಯಾದ ಲಾಸ್ ಎಂಜಲ್ಸ್‌ನ ಕೈಗೆ ಕೊಟ್ಟು ದೇಹತ್ಯಾಗ ಮಾಡುತ್ತಾನೆ. ಇವನ ಸತ್ತ ನಂತರ ಭಸ್ಮವನ್ನು ಭಾರತದಲ್ಲಿಯೇ ಬಿಡಬೇಕೆಂಬ ತನ್ನ ಆಸೆಯಂತೆ, ಎಂಜಲ್ಸ್ ಭಾರತಕ್ಕೆ ಬಂದು ಭಸ್ಮವನ್ನು ಬಿಟ್ಟು ಭಾರತದಲ್ಲಿ ಗಾಯತ್ರಿ ಫೌಂಡೇಶನನ್ನು ಸ್ಥಾಪಿಸುತ್ತಾಳೆ.

ಪತ್ರದ ಕೊನೆಗೆ ಅಂತೂ "ನನಗೆ ಗಾಯತ್ರಿ ಮಂತ್ರದ ಪ್ರಭಾವದಿಂದಲೇ ಅಮೆರಿಕದಲ್ಲಿ ಹೊಸ ಜನ್ಮ ಸಿಕ್ಕಿತು. ಅದಕ್ಕೆ ನೀವು ಕಾರಣೀಭೂತರು. ನಿಮ್ಮ ಸಹಕಾರದಿಂದ ನಾನು ಗಾಯಿತ್ರಿ ಫೌಂಡೇಶನ್ ಅನ್ನು ಸಾಕಷ್ಟು ಬೆಳೆಸಿದ್ದೇನೆ. ಭಾರತದಲ್ಲಿ ನಾಳೆ ನೀವು ನೋಡುತ್ತಿರುವ ಚಿಕ್ಕ ಬೇರು ದೊಡ್ಡ ಮರವಾಗಿ ಹಲವಾರು ಕೊಂಬೆಗಳನ್ನು ಹೊಂದಿದಲ್ಲಿ ಪರದೇಶದ ಮಣ್ಣಿನಲ್ಲಿ ಈ ಆದಿತ್ಯ ಎಂಬ ಮರ ಎಷ್ಟೇ ಭರ್ಜರಿಯಾಗಿ ಬೆಳೆದರೂ ಆ ಮರದ ಬೇರಿಗೆ ಕರ್ನಾಟಕದ ಮಣ್ಣಿನ ಅಗತ್ಯತೆ ಇತ್ತು. ಈ ಅಗತ್ಯತೆ ಪೂರೈಸಿದ್ದೀರಿ"(ಅದೇ, ಪು.೨೧೮) ಎಂದು ತನ್ನ ಕೊನೆಯ ಮಾತನ್ನು ಬರೆಯುತ್ತಾನೆ.

ಈ ಕತೆಯ ಕೊನೆಯಲ್ಲಿ ಬರುವ ವೆಂಕಟೇಶನ ಮಾತು ಇಡೀ ಕತೆಯ ಸಾರವನ್ನು ತಿಳಿಸುತ್ತದೆ. "ಕಡೆಗೂ ನಮ್ಮ ಆದಿತ್ಯ ದೊಡ್ಡ ಸಾಧನೆ ಮಾಡಿದ ವಿಶ್ವಮಾನ್ಯನಾದ ಎಲೆಕ್ಟ್ರಿಕಲ್ ಇಂಜನಿಯರ್ ಆಗಿ ಮುಂದೆ ಬರದಿದ್ದರೂ ಸ್ವಾಮೀಜಿ ಆಗಿ ಮುಂದೆ ಬಂದ. ಅಮೆರಿಕಗೆ ಹೋಗಬಾರದು ಎಂದು ಅವನು ಪ್ರಯತ್ನಿಸಿದರೂ ಅದೇ ದೇಶದಲ್ಲಿ ಖ್ಯಾತಿ ಪಡೆದ. ಭಾರತಕ್ಕೆ ಬರಲೇಬಾರದು ಎಂದು ಮನಸ್ಸು ಎಷ್ಟು ಗಟ್ಟಿ ಮಾಡಿಕೊಂಡರೂ ಭಾರತದ ಮಣ್ಣಿನಲ್ಲೆ ಲೀನವಾದ.

ಅದಕ್ಕೆ ಹೇಳುವುದು ಯಾವ ಬೇರು ಯಾವ ಮಣ್ಣಿನಲ್ಲಿ ಇರಬೇಕೋ ಅಲ್ಲಿ ಇದ್ದರೆ ಶೋಭೆ"(ಅದೇ, ಪು.೨೧೯) ಎನ್ನುವ ಮಾತು ಆದಿತ್ಯ ಜೀವನದಲ್ಲಿ ನಡೆದ ತಿರುವುಗಳನ್ನು ಸೂಕ್ಷ್ಮವಾಗಿ ತೆರೆದಿಡುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಕತೆ ಆದಿತ್ಯ ಜೀವನದಲ್ಲಿನ ವಲಸೆ ಭಿನ್ನ ಆಯಾಮವನ್ನು ಪಡೆದುಕೊಳ್ಳುತ್ತದೆ. ತಂದೆ, ತಾಯಿ, ದೇಶ, ಊರು ಎಂಬ ಅನೇಕ ಅಭಿಮಾನಗಳಿದ್ದಾಗಲೂ ವಿಧಿ ಅವನನ್ನು ವಿದೇಶಕ್ಕೆ ಕರೆದುಕೊಂಡು ಹೋದರೂ ಅಲ್ಲಿಯ ಅನೇಕ ಸಮಸ್ಯೆಗಳು ಒತ್ತಡಗಳು ಆದಿತ್ಯನ ನೆಮ್ಮದಿಯನ್ನು ಕಿತ್ತುಕೊಳ್ಳುತ್ತದೆ. ಆದಿತ್ಯ ಅಮೆರಿಕಾದ ವಲಸೆಯಿಂದ ಉಂಟಾದ ತಂದೆ,ತಾಯಿಯ ಆತ್ಮಹತ್ಯೆ ಅಮೆರಿಕಾದಲ್ಲಿನ ಮಗನ ಕೊಲೆ, ಹೆಂಡತಿಯ ನಿರ್ಲಕ್ಷ್ಯ ಆದಿತ್ಯನನ್ನು ಖಿನ್ನನಾಗಿ ಮಾಡುತ್ತದೆ.

ಭಾರತಕ್ಕೆ ಬಂದರೆ ಒಂಟಿಯಾಗಿ ಬದುಕಬೇಕಲ್ಲ ಎಂಬ ಭಯ. ಅಮೆರಿಕಾದಲ್ಲಿ ಹೆಂಡತಿಯ ಹಿಯಾಳಿತನವನ್ನು ಸಹಿಸಿಕೊಳ್ಳುತ್ತಾನೆ. ಕೊನೆಗೂ ಹೆಂಡತಿ ಅನೈತಿಕ ಸಂಬಂಧಕ್ಕೆ ಬೇಸತ್ತು, ತಿರಸ್ಕಾರದ ಮಾತುಗಳನ್ನು ಕೇಳಿ ಭಾರತಕ್ಕೂ ಹೋಗುವುದಿಲ್ಲ ಎಂಬ ಶಪತ ಮಾಡಿ ಅಮೆರಿಕಾದಲ್ಲಿ ನೆಲೆಯಾಗಿ ಭಾರತದಲ್ಲಿ ಆಚಾರ-ವಿಚಾರ ಸಂಪ್ರದಾಯ ಸಂಸ್ಕೃತಿಯ ಜ್ಞಾನದಿಂದಲೇ ಗಾಯಿತ್ರಿ ಮಂತ್ರ ಎಂಬ ಶಕ್ತಿಯಿಂದ ಅಮೆರಿಕದಲ್ಲಿ ಹೆಸರುವಾಸಿಯಾಗಿ ಬೆಳೆದನು ಎಂಬುದು ಆಶ್ಚರ್ಯಕರವೆನಿಸುತ್ತದೆ.

ಇಲ್ಲಿಯ ವಲಸೆಗೆ ಮುಖ್ಯ ಕಾರಣ ಅಥವಾ ಹಿನ್ನೆಲೆ ಹೆಂಡತಿಯ ಶ್ರೀಮಂತಿಕೆಯ ಆಸೆ, ಐಷಾರಾಮಿ ಜೀವನವೇ ಕಾರಣವಾಗುತ್ತದೆ. ಮತ್ತು ಆದಿತ್ಯನ ಕೌಟುಂಬಿಕ ಜೀವನ ಭಾರತೀಯ ಸಂಸ್ಕೃತಿ ಮತ್ತು ಅಮೆರಿಕಾದ ಸಂಸ್ಕೃತಿಗಳೊಂದಿಗೆ ಮನಸ್ಸಿನ ತಾಕಲಾಟಗಳನ್ನು ಬಿಚ್ಚಿಡುತ್ತದೆ. ಭಾರತದಿಂದ ಅಮೆರಿಕಕ್ಕೆ ಹೋದ ಕೆಲವೇ ತಿಂಗಳುಗಳಲ್ಲಿಯೇ ಹೆಂಡತಿಯ ವರ್ತನೆಯಲ್ಲಿ ಆದ ಬದಲಾವಣೆಗಳು ಅಮೆರಿಕ ಸಂಸ್ಕೃತಿಯೊಂದಿಗಿನ ಹೊಂದಾಣಿಕೆ ಆಶ್ಚರ್ಯವೆನಿಸುತ್ತದೆ.

ಒಟ್ಟಾರೇಯಾಗಿ ಹೇಳುವುದಾದರೆ ವಲಸೆಗೆ ಕಾರಣ, ಆಂತಕ, ಗೊಂದಲ, ಸಂಘರ್ಷಗಳಿಂದ ಆರಂಭವಾದರೆ ಪರಿಣಾಮದಲ್ಲಿ ಅನೇಕ ಸಾವು, ನೋವು ತಿರಸ್ಕಾರದಿಂದ ಒಳಗೊಂಡಿದ್ದರೂ ಕೊನೆಗೆ ಭಾರತೀಯ ಪುರುಷ ಭಾರತೀಯ ಸಂಸ್ಕೃತಿಯ ಆಚರಣೆ ಸಂಪ್ರದಾಯಗಳಿಂದಲೇ ಅಮೆರಿಕಾದಲ್ಲಿ ಯಶಸ್ವಿಯಾಗುವುದು ಈ ವಲಸೆ ಸಕರಾತ್ಮಕವನ್ನು ಸೂಚಿಸುತ್ತದೆ. ಒಟ್ಟಾರೆ ಲೇಖಕರ ಬೆನ್ನುಡಿಯಲ್ಲಿನ ಮಾತಿನಂತೆ ಭಾರತೀಯನೊಬ್ಬ ವಿದೇಶಕ್ಕೆ ಹೋಗಿ ಅಲ್ಲಿನ ಆತನಿಗೆ ಸರಿಯಾದ ಕೆಲಸ ಸಿಗದೆ ಹತಾಶನಾಗಿ ಮತ್ತೆ ನಮ್ಮ ಸಂಪ್ರದಾಯದ ಮೊರೆ ಹೊಕ್ಕು ಆಶ್ಚರ್ಯಕರ ರೀತಿಯಲ್ಲಿ ಯಶಸ್ಸು ಗಳಿಸಿದ ವಿಷಯವೇ ಕಥಾ ವಸ್ತುವಾಗಿದೆ. ಇದಿಷ್ಟೇ ಅಲ್ಲದೆ ತಂದೆ,

ತಾಯಿ, ಭಾವನಾತ್ಮಕ ಸಂಬಂಧ ಅವರ ಮನಸ್ಸಿನ ತುಡಿತಗಳು ಮಗನ ದೂರವನ್ನು ಸಹಿಸಿಕೊಳ್ಳದೇ ಮಾಡಿಕೊಳ್ಳುವ ಆತ್ಮಹತ್ಯೆ ಎಲ್ಲವೂ ಮನ ಕಲಕುತ್ತದೆ.

ತಂದೆ, ತಾಯಿಯ ಅಂತ್ಯಕ್ರಿಯೆಗೂ ಅಮೆರಿಕಾದ ದೇಶದಂತಹ ಕಂಪನಿಗಳು ರಜೆ ಕೊಡದೇ ಹಿಂಸಿಸುವ ವಿದೇಶಿಯ ಕಾನೂನುಗಳು ಷರತ್ತುಗಳು ಭಾರತದ ಕಾನೂನುಗಳಿಗಿಂತ ಭಿನ್ನವಾಗಿ ನಿಷ್ಠುರವಾಗಿ ಕಾಣಿಸಿಕೊಳ್ಳುತ್ತವೆ. ಮಾನವೀಯತೆಗೂ ಬೆಲೆ ಕೊಡದೇ ಶಾಲೆಯಲ್ಲಿ ನಕ್ಸಲೆಟ್‌ಗಳಿಗೆ ಬಲಿಯಾಗುವ ಮಗನ ಕೊಲೆ ಅಮೆರಿಕಾದ ಅಮಾನವೀಯತೆಯನ್ನು ಪ್ರದರ್ಶಿಸುತ್ತದೆ. ಮತ್ತು ವಲಸೆ ಕುರಿತಂತೆ ವಲಸೆಯ ಪ್ರಕ್ರಿಯೆಯಲ್ಲಿ ಲೇಖಕರು ಮೌನ ವಹಿಸಿದರು ಕಾರಣ, ಪರಿಣಾಮಗಳು ವಿವರಣಾತ್ಮವಾಗಿ ಅಭಿವ್ಯಕ್ತಿಸಿದ್ದಾರೆ.

ನೀಳಾದೇವಿಯವರ 'ಬೇರಿಂದ ಫಲಕ್ಕೆ' ಕಾದಂಬರಿಯು ಸತ್ಯಧಾರಿತ ಚಾರಿತ್ರಿಕ ಕಾದಂಬರಿ ಯಾಗಿದೆ. ಲೇಖಕಿ ನೀಳಾದೇವಿಯವರು ಮುನ್ನುಡಿಯಲ್ಲಿ ಹೇಳಿರುವಂತೆ "ಮಾನವೀಯ ಮೌಲ್ಯ ಮರೆತು ಹೋಗುತ್ತಿರುವ ಈ ಕಾಲದಲ್ಲಿ ಈ ಸತ್ಯ ಕತೆ ಆಧಾರಿತ ಕಾದಂಬರಿಯನ್ನು ಒಂದು ಕುಟುಂಬದ ಬಗ್ಗೆ ಚಾರಿತ್ರಿಕ ಹಿನ್ನೆಲೆಯಲ್ಲಿ ಬರೆದಿದ್ದೇನೆ"(ನೀಳಾದೇವಿ ಮುನ್ನುಡಿ) ಎಂದು ಅಭಿಪ್ರಾಯಪಡುತ್ತಾರೆ.

೧೮ನೇ ಶತಮಾನದಲ್ಲಿದ್ದ ಮೈಸೂರು ಒಡೆಯರ ಕಾಲದಲ್ಲಿದ್ದ ರಾಜಕೀಯ ಸ್ಥಿತ್ಯಂತರಗಳು ಅಲ್ಲಿಯ ಸುತ್ತಮುತ್ತಲ್ಲಿನ ಕುಟುಂಬಗಳಿಗೆ ಬೀರಿದ ಪರಿಣಾಮವಾಗಿ ಅಲ್ಲಿದ ನಾಲ್ಕು ಬ್ರಾಹ್ಮಣ ಕುಟುಂಬಗಳು ಮತಾಂತರಕ್ಕೆ ಹೆದರಿ ತಮ್ಮ ಧರ್ಮವನ್ನು ಉಳಿಸಿಕೊಳ್ಳೂವುದಕ್ಕಾಗಿ ತಮ್ಮ ಮೂಲ ನೆಲೆಯನ್ನು ಬಿಟ್ಟು ಮತ್ತೇ ಎಲ್ಲಿ ನೆಲೆಯಾಗಬೇಕೆಂಬ ಗುರಿಯು ಇಲ್ಲದೆ ಹೊರಡುವ ವಲಸೆಯ ಹಿನ್ನೆಲೆ, ಚಲನೆ, ಪರಿಣಾಮಗಳನ್ನು ಬ್ರಾಹ್ಮಣ ಸಮುದಾಯದವರು ಅನುಭವಿಸಿದ ಸ್ಥಿತಿಗತಿಗಳನ್ನು ವಾಸ್ತವ ಮತ್ತು ಕಲ್ಪನೆಗಳೆರಡು ಕಲಾತ್ಮಕವಾಗಿ ಮೂಡಿಬಂದಿದೆ.

ಬ್ರಿಟಿಷರು, ಪೋರ್ಚುಗೀಸರು, ಮುಸ್ಲಿಂರ ಆಕ್ರಮಣಗಳು ಜನರನ್ನು ಕಂಗೆಡಿಸಿತ್ತು. ಇದಕ್ಕೂ ಮುಂಚೆ ಬಂದ ಹೈದರಾಲಿ ಮೆಕ್ಕಾ ಬಳಿ ಖುರೇಣಿ ಎಂಬ ಸ್ಥಳದಿಂದ ಬಂದ ಸಾಮಾನ್ಯ ಸೈನಿಕನಾಗಿ ಕಾಲನಂತರ ತನ್ನ ಪರಾಕ್ರಮಗಳಿಂದ ಮರಾಠರ ದಾಳಿಯನ್ನು ಸೋಲಿಸಿ ಚಾಮರಾಜ ಒಡೆಯರನ್ನು ಹೆಸರಿಗೆ ಮಾತ್ರ ರಾಜನಾಗಿ ಮಾಡಿ ರಾಜ್ಯಬಾರ ಮಾಡಲು ಶುರುಮಾಡಿದ. ಹೀಗೆ ರಾಜಕೀಯ ವಿವರಣೆ ಕೊಡುತ್ತಲೆ ಇತ್ತ ಊರಿನ ಅನಂತಚಾರ್ಯರ ಬ್ರಾಹ್ಮಣ ಕುಟುಂಬ ರಾಜಕೀಯ ಪರಿಣಾಮಗಳಿಂದ ವಲಸೆ ಹೋಗಲು ನಿರ್ಧಾರ ತೆಗೆದುಕೊಂಡ ಅನಿವಾರ್ಯತೆಯ ಸಂವೇದನೆಗಳು ಅಭಿವ್ಯಕ್ತಿಸುತ್ತಾರೆ. ಹೈದರಾಲಿಯ ನಂತರ ಬಂದ ಮಗ ಟಿಪ್ಪುವಿನ ಆಡಳಿತಾವಧಿ ಯಲ್ಲಿ ಟಿಪ್ಪುವಿನ ವಿಜಯದಿಂದ ಮುಸ್ಲಿಂರ ಪ್ರಭಾವ ಪೋರ್ಚುಗೀಸರ ಮತಾಂತರ ದಿನೇ

ದಿನೇ ಹೆಚ್ಚಾಗುತ್ತಾ ಬ್ರಿಟಿಷರ ಆಕ್ರಮಣಗಳು ಗ್ರಾಮಸ್ಥರನ್ನು ತಲ್ಲಣಗೊಳಿಸಿತ್ತು. ಜನರಂತು ತಮ್ಮ ಮತ, ನಂಬಿಕೆ, ಧರ್ಮವನ್ನು ಉಳಿಸಿಕೊಳ್ಳುವುದೇ ಕಷ್ಟವಾಗಿತ್ತು. "ಬಾವಿಗೆ ಬಿದ್ದು ಜೀವ ಕಾಪಾಡಿ ಕ್ಕೊಳ್ಳಲಿಕ್ಕೆ ಸಿಕ್ಕ ಬೇರನ್ನು ಹಿಡಿದು ಮೇಲೆತಲಿಕ್ಕೆ ಸಾಹಸ ಪಡುವಂತೆ ಅನಿಶ್ಚಿತತೆಯಿಂದ ಜನ ಕಂಗಲಾಗಿದ್ದರು."(ಅದೇ, ಪು.೫೦)

ಹೀಗೆ ಒಂದು ಕಡೆ ಮತಾಂತರ ಭಯವಾದರೆ, ಇನ್ನೊಂದು ಕಡೆ ಬ್ರಿಟಿಷರ ಯುದ್ಧದ ಭಯ ಜನರಲ್ಲಿ ಮಡುಗಟ್ಟಿತ್ತು. ಹಿಂದೆ ಮೈಸೂರಿಗೆ ಯುದ್ಧ ಮಾಡಲು ಶ್ರೀರಂಗಪಟ್ಟಣಕ್ಕೆ ಕುಂಪಣಿಯ ಕಾರ್ನ್‌ವಾಲೀಸ್ ನೇತೃತ್ವದ ಸೈನ್ಸ್ ಇದೇ ಮಳೂರಿನ ಮೇಲೆ ಹಾದು ಹೋಗುವಾಗ ದಾರಿಯುದ್ದಕ್ಕೂ ಅಲ್ಲೋಲ ಕಲ್ಲೋಲ ಆಗಿತ್ತು. ಶತ್ರು ಪಕ್ಷದವರ ಕಿವಿ ಮೂಗು ಕತ್ತರಿಸಲಾಗುತ್ತಿತ್ತು. ಕೊನೆಯಲ್ಲಿ ಸೈನಿಕರು ಗಾಡಿಯಲ್ಲಿ ತಂದಿದ್ದ ಕಾಳು, ಕಡಿ ಎಲ್ಲ ಪೋಲಾಗಿ ಸೈನಿಕರ ಹೊಟ್ಟೆಗೆ, ಗಾಡಿಗೆ ಕಟ್ಟಿದ್ದ ಎತ್ತನ್ನೇ ಕೊಚ್ಚಿ ತಿನ್ನುವಂತಾಗಿತ್ತು. ಇದರಿಂದ ಸೈನ್ಯ ಹಾದು ಹೋಗುವಾಗ ಗ್ರಾಮೀಣ ಜನರು ಬಲಿಯಾಗುತ್ತಿದ್ದರು.

ಹೀಗಾಗಿ ಸ್ವ-ಧರ್ಮವನ್ನು ಕಾಪಾಡಿಕೊಳ್ಳಲು ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಮಳೂರಿನ ಜನ ಆಗಾಗ್ಗೆ ಸಭೆ ಸೇರುತ್ತಿದ್ದ ಸಂದರ್ಭಗಳು ಇದ್ದವು. ಜೊತೆಗೆ ಮಡಿ ಮೈಲಿಗೆ ಎಂದು ಜನರನ್ನೆ ಮುಟ್ಟಿಸಿಕೊಳ್ಳಲಾರದಂತಹ ಸಂದರ್ಭದಲ್ಲೂ ಸಹ ಅಗ್ರಹಾರದ ಬ್ರಾಹ್ಮಣರು ಯಾವ ಭೇದವೂ ಇಲ್ಲದೆ ಒಬ್ಬರಿಗೊಬ್ಬರು ಸಹಾಯ ಮಾಡುತ್ತ ತಮ್ಮ ಮನಸ್ಸಿನ ಆತಂಕಗಳನ್ನು ಹೊರಹಾಕುತ್ತಿದ್ದರೂ. ಇದಕ್ಕೆ ಉದಾಹರಣೆಯಾಗಿ ಇಲ್ಲಿ ಕತೆಯಲ್ಲಿ ಬರುವ ಒಂದು ಸಂದರ್ಭವನ್ನು ನೋಡಬಹುದು.

"ರಾಜ್ಯಾಡಳಿತ ಕೈಗೆ ತಗೊಂಡು ಅರಿಯದ ಜನರನ್ನು ಉಪಾಯವಾಗಿ ಕಿರಿಸ್ತಾನರಾಗಿಸಿ ಮಾಡಿಬಿಡ್ತಾರೆ ಈಗಾಗ್ಲೇ ಎಷ್ಟೋ ಹೊಲೆರನ್ನು ಬಡ ಜನರನ್ನು ಕಿರಾಸ್ತನರನ್ನಾಗಿ ಮಾಡಿಬಿಟ್ಟಿದರಂತೆ ಅವರ ದೇವ ಪ್ರಾರ್ಥನೆಗಾಗಿ ಚರ್ಚುಗಳನ್ನು ಕಟ್ಟಿ ಪಾದ್ರಿಗಳಿಂದ ಮತಾಂತರ ಮಾಡಿ ನಮ್ಮೂರ ಹುಟ್ಟೇ ಅಡಗಿಸಿ ಹೆಸರು ಪದ್ಧತಿ ಎಲ್ಲ ಬದ್ಲಾಯಿಸಿದ್ದಾರೆ ಈ ನಮ್ಮ ಬಾಳು ಇತ್ತದರಿ ಅತ್ತ ಪುಲಿ ನಮಗೆ ದಾರಿ ಆದ್ರೇವೋ ತೋರ್ಬೇಕು ಅಷ್ಟೆ ಎಂದು ಕಡಿದಾಗಿ ಹೇಳಿ ಅನಂತಚಾರ್ಯರು ಕಲ್ಲಿನಂತೆ ಕುಳಿತರು."(ಅದೇ, ಪು.೫೨)

ಇವರ ಈ ಮಾತುಗಳಲ್ಲಿನ ವೇದನೆ ಅಂದಿನ ರಾಜಕೀಯ ಸ್ಥಿತ್ಯಂತರಗಳಿಂದ ಸಾಮಾನ್ಯ ಜನರ ಮೇಲೆ ಬೀರಿದ ಪರಿಣಾಮವನ್ನು ಚಿತ್ರಿಸುವ ಕತೆಯಾಗಿ ಮೂಡಿಬರುತ್ತದೆ. ಇದಷ್ಟೇ ಅಲ್ಲದೆ ಕೆಲವು ಗುಂಪುಗಳು ಸುಲ್ತಾನರ ವಿರುದ್ಧ ಮಾತಾನಾಡುತ್ತಿದ್ದ ಜನರನ್ನು ಎಳೆದು ತಂದು ಮರಕ್ಕೆ ಕಟ್ಟಿ ಗುಂಪ್ತಾಂಗಗಳ ಹಿಂದೂಗಲಿ ಕತ್ತರಿಸಿ ಬಂದ ರಕ್ತಕ್ಕೆ ಅರಸಿನ ಪುಡಿ ಮೆತ್ತಿ ಎತ್ತಿಕೊಂಡು

ಹೋಗಿ ಹಸಿವಿನ ಮಾಂಸವನ್ನು ತುರುಕುತ್ತಿದ್ದ ಸನ್ನಿವೇಶಗಳು ನಡೆಯುತ್ತಿದ್ದವು. ಇತರಹದ ಸನ್ನಿವೇಶಗಳಿಗೆ ಬಲಿಯಾಗಲು ಇಷ್ಟವಿಲ್ಲದೇ ಮಡಿ, ಮೈಲಿಗೆ ಸಂಪ್ರದಾಯವೆಂದು ಬದುಕುತ್ತಿದ್ದ ಬ್ರಾಹ್ಮಣ ಸಮುದಾಯದ ಕುಟುಂಬಗಳು ದುಃಖ ತಡೆಯಲಾಗದೇ ಅಳುವ ಸಂದರ್ಭ ಕರುಣಾಜನಕ ವಾಗಿ ಮೂಡಿಬಂದಿದೆ.

ಇನ್ನು ತಮ್ಮ ಸ್ಥಳವನ್ನು ಬಿಟ್ಟು ಮತ್ತೊಂದೆಡೆ ವಲಸೆ ಹೋಗಬೇಕೆಂದಾಗ ಉಂಟಾಗುವ ವೇದನೆ ಅಷ್ಟು ಸುಲಭವಾಗಿರಲಿಲ್ಲ. ಹೋಗಲೆಬೇಕಲ್ಲವೆಂಬ ಚಿಂತೆ ಒಂದು ಕಡೆಯಾದರೆ ಎಲ್ಲಿಗೆ? ಎಂಬ ಚಿಂತೆ ಇನ್ನೊಂದು ಕಡೆ ಎತ್ತಿನ ಗಾಡಿಯಲ್ಲಿ ಹೋದರೆ ದಾರಿಯಲ್ಲಿ ಸೈನಿಕರ ಕೈಗೆ ಮತ್ತೆ ಸಿಗಬಹುದೆಂಬ ಆತಂಕ. ಹಾಗಾಗಿ ಸ್ವಲ್ಪದೂರದವರೆಗೂ ಗಾಡಿಯಲ್ಲಿ ಹೋಗಿ ನಂತರ ಆ ಗಾಡಿ ಯನ್ನು ಅಲ್ಲಿಯೇ ಬಿಟ್ಟು ಕಾಲುದಾರಿಯಲ್ಲಿ ಸಾಗುವ ಯೋಚನೆಯನ್ನು ಮಾಡುತ್ತಾರೆ. ಇಂತಹ ಕಷ್ಟಕರ ಪ್ರಯಾಣದಲ್ಲಿ ನೋವುಂಡವರು ಹೆಚ್ಚು ವಯಸ್ಸಾದವರು ಮತ್ತು ಮಕ್ಕಳು. ಹೀಗೆ ಅನಂತಚಾರ್ಯರ ಕುಟುಂಬವೂ ಸೇರಿದಂತೆ ಇನ್ನು ಮೂರು ಕುಟುಂಬಗಳೊಂದಿಗೆ ಮನೆಯಲ್ಲಿರುವ ಪಾತ್ರೆ, ಒಡವೆ, ಉಪ್ಪು, ಊಟದ ಚಿಂತೆ ಆ ಕಾಲಕ್ಕೆ ಅಷ್ಟಾಗಿ ಕಾಡುತ್ತಿರಲಿಲ್ಲ. ಪರಸ್ಥಳದ ಅತಿಥಿಗಳಿಗೆ ಅದರಲ್ಲೂ ಮೇಲ್ವರ್ಗದ ಬ್ರಾಹ್ಮಣರಿಗೆ ಎಲ್ಲೇ ಹೋದರಂತೂ ದಾಸೋಹ ಕಾದಿರುತ್ತಿತ್ತು.

ಆದರೂ ದಾರಿಯಲ್ಲಿ ತಿನ್ನುವುದಕ್ಕೆಂದು ಅಕ್ಕಿರೊಟ್ಟಿ, ಪುಳಿಯೊಗರೆಯಂತಹ ನಾನಾ ಬಗೆಯ ತಿಂಡಿಗಳನ್ನು ತಯಾರಿ ಮಾಡಿಕೊಂಡಿದ್ದರು. ಜೊತೆಗೆ ಒಡವೆ ಬೆಳ್ಳಿ ಪಾತ್ರೆಗಳು ತೆಗೆದು ಕೊಂಡಿದ್ದರು. ಊರು ಬಿಟ್ಟು ಹೋಗುವ ವೇದನೆ ಇವರಿಗಷ್ಟೇ ಅಲ್ಲದೆ ಊರಿನ ಜನಕ್ಕೆ ದುಃಖದ ವಿಷಯ ಆಗಿತ್ತು. ಪರಿಸ್ಥಿತಿ ಸರಿಯಾದರೆ ನಾವು ಬರಲೂಬಹುದು ಎಂದು ದುಃಖಪಡುತ್ತಾರೆ. ನದಿಗಳ ಮಾರ್ಗವಾಗಿ ಹೋದರೆ ದೇವಸ್ಥಾನ, ಧರ್ಮ, ಛತ್ರಗಳು ಸಿಗುತ್ತವೆ ಎಂದು ಗುಂಪು ನದಿದಡದಲ್ಲಿ ನಡೆಯುತ್ತ ಹೋದರು, ಆದರೆ ಯಾರಿಗೂ ತಾವು ಎಲ್ಲಿಗೆ ಹೋಗುತ್ತಿದ್ದೇವೆ ಎಂಬ ಗುರಿ ಇರಲಿಲ್ಲ. ಬರಡಾದಂತೆ ತೋರ್ಪಡಿಸಿಕೊಳ್ಳುವ ಕಣ್ವ ನದಿಯಿಂದಲೇ ಅವರು ಧೈರ್ಯ ತೆಗೆದುಕೊಳ್ಳಬೇಕಿತ್ತು. ಏಕೆಂದರೆ ಈ ನದಿ ಕಾವೇರಿಯನ್ನು ಸೇರುತ್ತದೆ, ಕಾವೇರಿ ತೀರವೆಂದರೆ ತಾಯಿ ಮಡಿಲ ದಡದಲ್ಲಿ ಸಮೃದ್ಧವಾದ ಗ್ರಾಮಗಳಿದ್ದವು. ಹೀಗೆ ಹಳ್ಳಿಗಳಲ್ಲಿ ಧರ್ಮಛತ್ರಗಳಲ್ಲಿ ಊಟ ಮಾಡುತ್ತ ದೇವಸ್ಥಾನಗಳಲ್ಲಿ ಮಲಗುತ್ತ ನದಿ ಮರಳಿನ ದಡದಲ್ಲಿ ಅಡುಗೆ ಮಾಡಿಕೊಂಡು ತಿನ್ನುತ್ತ ದಾರಿ ಸಾಗಿಸಿದರು.

ದಾರಿಯಲ್ಲಂತೂ ವಯಸ್ಸಾದ ತಿರುವೇಗಂಡಮ್ಮ ನಡೆದು ನಡೆದು ಆಯಾಸದಿಂದ ತೀರಿಕೊಳ್ಳು ತ್ತಾರೆ. ಹೀಗೆ ಅನಿವಾರ್ಯವಾಗಿ ಅಲ್ಲಿಯೇ ಮಣ್ಣು ಮಾಡಿ ಹತ್ತಿರದಲ್ಲಿದ್ದ ಕೊಳ್ಳೆಗಾಲದಲ್ಲಿ ನೆಲೆಯಾಗು ತ್ತಾರೆ. ಜೀವನಕ್ಕೆ ದಾರಿಯಾಗಿ ಅನಂತಚಾರ್ಯರರು ಮಕ್ಕಳಿಗೆ ಪಾಠ ಪ್ರವಚನ ಹೇಳಿದರೆ

ಹೆಣ್ಣುಮಕ್ಕಳು ಉಪ್ಪಿನಕಾಯಿ, ಮೆಣಸಿನ ಪುಡಿಯನ್ನು ಮಾರಿ ಬದುಕು ಸಾಗಿಸುತ್ತಾರೆ. ಹೀಗೆ ಇವರ ಜೀವನ ಮುಂದೆ ಸ್ವಲ್ಪಮಟ್ಟಿನ ಸುಧಾರಣೆ ಕಂಡು ಸ್ವಂತ ಭೂಮಿಯನ್ನು ತೆಗೆದುಕೊಳ್ಳುವಂತೆ ಆಗುತ್ತದೆ.

ಈ ಮಧ್ಯೆ ಅನಂತಚಾರ್ಯರು ತಾವು ಮೊದಲು ನೆಲೆಸಿದ್ದ ಮೈಸೂರಿಗೆ ತನ್ನ ಮಗಳನ್ನು ನೋಡಲು ಹೋದಾಗ ಬ್ರಿಟಿಷರ ಆಡಳಿತದಿಂದ ಭಾಷೆ, ನಡವಳಿಕೆ, ಜೀವನ ಪದ್ಧತಿಯಲ್ಲಿ ಆದ ಬದಲಾವಣೆಯನ್ನು ಕಂಡು ಬೆರಗಾಗುತ್ತಾನೆ. ಕಾಲನಂತರದಲ್ಲಿ ಪ್ಲೇಗ್ ರೋಗ ಬಂದು ಸಾಕಷ್ಟು ಜನ ಸಾವಿಗಿಡಾಗುತ್ತಾರೆ. ಅದರಲ್ಲಿ ಅನಂತಚಾರ್ಯರರು ಪ್ಲೇಗ್ ರೋಗಕ್ಕೆ ತುತ್ತಾಗುತ್ತಾರೆ. ಅಷ್ಟೊತ್ತಿಗಾಗಲೇ ಕೊಳ್ಳೆಗಾಲದಲ್ಲಿ ಬ್ರಿಟಿಷರು ತಮ್ಮ ಆಡಳಿತಕ್ಕೆ ಅನುವಾಗುವಂತೆ ವೈದ್ಯ ಕ್ಯಾಂಪುಗಳನ್ನು, ತೆರೆದಿದ್ದರು. ಇದರಿಂದ ರೋಗಗಳಿಂದ ಬಳಲುತ್ತಿರುವವರಿಗೆ ಔಷಧಿಗಳನ್ನು ವಿತರಿಸುತ್ತಿದ್ದರು. ಆದರೆ ವಿದೇಶಿ ಔಷಧಿ ಅಲ್ಲಗಳೆದಿದ್ದಕ್ಕೆ ಅನಂತಚಾರ್ಯರು ಸಾವಿಗಿಡಾಗುತ್ತಾರೆ. ಮಗ ಶಾಮರಾಯ ಪಾರೋಸ್ಟ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಮದುವೆಯಾದ ಹೆಂಡತಿಯರು ತೀರಿ ಹೋದ ಬಳಿಕ ಮನೆಯವರ ಬಲವಂತಕ್ಕೆ ಮತ್ತೊಂದು ಮದುವೆಯಾಗುತ್ತಾನೆ. ಸಂಸಾರ ದೊಡ್ಡದಾದಂತೆಲ್ಲ ಸಂಬಳ ಸಾಕಾಗದೇ ಮತ್ತೆ ಕುಟುಂಬ ಸಂಕಷ್ಟವಾಗಿ ಮತ್ತೆ ಮೈಸೂರಿಗೆ ಬಂದು ನೆಲೆಯಾಗುತ್ತಾರೆ. ಹೀಗೆ ಶ್ರೀರಂಗ ಕಡೆಯಿಂದ ಮುಳ್ಳೂರಿಗೆ, ಮುಳ್ಳೂರಿನಿಂದ ಕೊಳ್ಳೇಗಾಲಕ್ಕೆ, ಕೊಳ್ಳೇಗಾಲದಿಂದ ಮೈಸೂರಿಗೆ ಈ ಪಯಣದಲ್ಲಿ ನಾನಾ ತರಹದ ಸಂಕಷ್ಟಗಳು, ನೋವುಗಳು ಸಮಸ್ಯೆಗಳು ವ್ಯಕ್ತವಾಗುತ್ತದೆ. ಮೈಸೂರಿಗೆ ಬಂದು ನೆಲೆಯಾದ ನಂತರದಲ್ಲಿ ಶಾಮಣ್ಣನಿಗೆ ಕಾಣಿಸಿಕೊಂಡ ಬೆನಿನ್ನಲ್ಲಿನ ಹುಣ್ಣು ಶಾಮಣ್ಣನನ್ನು ಬಲಿ ತೆಗೆದುಕೊಳ್ಳುತ್ತದೆ. ಚಿಕಿತ್ಸೆಗೆಂದು ಬೆಂಗಳೂರಿಗೆ ಹೋದರೂ ಫಲಕಾರಿಯಾಗದೇ ಅಲ್ಲಿಯೇ ಸಾವನ್ನಪ್ಪುತ್ತಾನೆ. ಇನ್ನು ಶ್ಯಾಮಣ್ಣನ ಹೆಂಡತಿ, ನಾಲ್ಕು ಹೆಣ್ಣು, ಮೂರು ಗಂಡು ಮಕ್ಕಳನ್ನು ಸಾಕುವ ಜವಾಬ್ದಾರಿ ಹೊತ್ತು ಹೆಣ್ಣು ಮಕ್ಕಳನ್ನು ಎರಡನೇ ಸಂಬಂಧದಲ್ಲಿ ಮದುವೆ ಮಾಡಿಕೊಟ್ಟು ಗಂಡು ಮಕ್ಕಳನ್ನು ಮಾವಂದಿರೇ ಓದಿಸುವಂತೆ ವ್ಯವಸ್ಥೆ ಮಾಡುತ್ತಾಳೆ.

ಶಾಮಣ್ಣ ಸಾಯುವ ಮುಂಚೆ ಜಮೀನನ್ನು ಹೆಂಡತಿಯ ಹೆಸರಿಗೆ ಮಾಡುವ ಆಲೋಚನೆ ಇದ್ದರು. ಅದೇ ಸಂದರ್ಭದಲ್ಲಿ ಕಾವೇರಿ ನದಿಗೆ ಅಣೆಕಟ್ಟು ಕಟ್ಟುವ ಯೋಜನೆಯಿಂದ ಜಮೀನು ಎಲ್ಲವೂ ಮುಳುಗಡೆಗೆ ಹೋಗಿತ್ತು. ಇದರಿಂದ ಸಾವಿರಾರು ಹಳ್ಳಿ ಜನ ಕಂಗಾಲಗಿದ್ದರು. ಜೊತೆಗೆ ರೈತರೆಲ್ಲರೂ ಸೇರಿ ಚಳುವಳಿಯನ್ನು ನಡೆಸುತ್ತಾರೆ. ಆದರೂ ಪ್ರಯೋಜನವಾಗದೇ ಆ ಜಮೀನಿಗೆ ಪರಿಹಾರವೆಂದು ಸರ್ಕಾರ ರೈತರಿಗೆ ಹಣವನ್ನು ನೀಡಿದ್ದರಿಂದ ಶಾಮಣ್ಣನು ಸಹ ಪರಿಹಾರದ ಹಣವನ್ನು ಹೆಂಡತಿಯ ಹೆಸರಿಗೆ ಇಡುತ್ತಾನೆ. ಅಷ್ಟೆ ಅಲ್ಲದೇ ಕತೆ ಆಧುನಿಕ ಸಂದರ್ಭದ ಮುನ್ನೋಟವನ್ನು ಹಾಗೂ ಸರ್ಕಾರದ ಯೋಜನೆಗಳು ಸಾಧಕ-ಬಾಧಕಗಳನ್ನು ಕುರಿತು ವಿವರಿಸುತ್ತದೆ.

ಕೊನೆಯಲ್ಲಿ ಶಾಮಣ್ಣನ ಕೊನೆಯ ಮಗ ರಾಮ ಓದಿ ಇಂಜನಿಯರಾಗಿ ಶಿಕ್ಷಣಕ್ಕಾಗಿ ನಾನಾ ಕಡೆ ಅಲೆದಾಡಿ ಅಕ್ಕ ಭಾವನ ಸಹಾಯ ಪಡೆಯುತ್ತಾನೆ. ಕೊನೆಗೆ ಬೇರಿಂದ ಫಲಕ್ಕೆ ಎನ್ನುವ ಹಾಗೆ ತನ್ನ ತಾಯಿಯ ಜೊತೆಯಲ್ಲಿಯೇ ಮೈಸೂರಿಗೆ ಬಂದು ಜೀವಿಸುತ್ತಾನೆ.

ಒಟ್ಟಾರೇಯಾಗಿ ಈ ಕಾದಂಬರಿ ಒಂದು ಚಾರಿತ್ರಿಕ ಕೃತಿಯಾಗಿ ಮೂಡಿಬಂದಿದೆ ಹೈದಾರಾಲಿಯ ನಂತರ ಪಟ್ಟಕ್ಕೆಬರುವ ಟಿಪ್ಪುವಿನ ಸಮಕಾಲಿನ ಸಂದರ್ಭ ರಾಜಕೀಯ ಸ್ಥಿತ್ಯಂತರಗಳು ಜನರ ಮೇಲೆ ಯಾವ ತರಹದಲ್ಲಿ ಪರಿಣಾಮ ಬೀರುತ್ತದೆ ಎಂಬುದನ್ನು ಲೇಖಕರು ನೆಡೆದ ಸತ್ಯ ಘಟನೆಯನ್ನು ಕಥೆಗೆ ವಸ್ತುವಾಗಿರಿಸಿಕೊಡು ಚಿತ್ರಿಸಿದ್ದಾರೆ ಹಾಗೆಯೆ ಬ್ರಿಟಿಷರ ಮತ್ತು ಮುಸ್ಲಿಂಮರ ನಡುವೆ ನೆಡೆದ ದಾಳಿಯಿಂದ ಸಾಮಾನ್ಯ ಜನರ ಮೇಲೆ ಉಂಟಾದ ಸಮಸ್ಯೆಗಳನ್ನು ಪ್ರಮುಖವಾಗಿ ಕಟ್ಟಿಕೊಡುತ್ತದೆ ಮತ್ತು ವಲಸೆಯ ಪ್ರೇರಣೆ, ಪ್ರಕ್ರಿಯೆ, ಪರಿಣಾಮಗಳನ್ನು ಕತೆ ಸ್ಪಷ್ಟವಾಗಿ ವಿವರಣೆಯೊಂದಿಗೆ ಸಂವೇದನಾತ್ಮಕವಾಗಿ ಅಭಿವ್ಯಕ್ತಿದ್ದಾರೆ.

ಗೀತಾ ನಾಗಭೂಷಣರವರ 'ಭೂಮಿ ಮತ್ತು ಬೀಜ' ಕತೆಯು ನಾಯಕ ಶಾಣಪ್ಪ ಸುಮಾರು ಹತ್ತು ಹನ್ನೊಂದು ವರ್ಷಗಳ ಹಿಂದೆ ಹೆಂಡತಿ ನೀಲವ್ವನೊಂದಿಗೆ ಹೊಟ್ಟೆ ತುಂಬಿಸಿಕೊಳ್ಳಲು ಕೆಲಸವನ್ನು ಹುಡುಕಿಕೊಂಡು ಕಲಬುರ್ಗಿಯ ಹತ್ತಿರದ ಒಂದು ಹಳ್ಳಿಗೆ ಈ ಕುಟುಂಬ ವಲಸೆ ಬರುತ್ತದೆ ನಂತರದಲ್ಲಿ ಉಂಟಾದ ಬದುಕಿನಲ್ಲಾದ ಬದಲಾವಣೆಗಳನ್ನು ಮತ್ತು ಅವರ ನೋವು ನಲಿವುಗಳನ್ನು ಉತ್ತರ ಕನ್ನಡದ ಭಾಷೆಯ ಮೂಲಕ ಲೇಖಕರು ಚಿತ್ರಿಸಿದ್ದಾರೆ.

ಇಲ್ಲಿ ಒಂದೇ ಕುಟುಂಬ ಭಿನ್ನ ಕಾರಣಗಳಿಗಾಗಿ ಎರಡು ಸಾರಿ ವಲಸೆ ಹೋಗುವ ಸಂದರ್ಭ ಉಂಟಾಗುತ್ತದೆ. ಮೊದಲು ಹೊಟ್ಟೆಪಾಡಿಗಾಗಿ ಹಳ್ಳಿಯಿಂದ ಕಲಬುರ್ಗಿಗೆ ವಲಸೆ ಬಂದ ಕಲಬುರ್ಗಿಯಲ್ಲಿ ಉಂಟಾದ ಬರಗಾಲದಿಂದ ಇಡೀ ಊರಿಗೆ ಊರೇ ಮುಂಬೈಗೆ ವಲಸೆ ಹೋಗುವ ಸನ್ನಿವೇಶ ಉಂಟಾಗುತ್ತದೆ.

ಮೊದಲು ಹೊಟ್ಟೆ ಪಾಡಿಗಾಗಿ ಬದುಕನ್ನು ಅರಸಿ ಬಂದ ಈ ಕುಟುಂಬಕ್ಕೆ ಊರಿನ ಗೌಡನಾದ ಗುರುಪಾದಪ್ಪ ನೆರವಾಗುತ್ತಾನೆ. ದಿಕ್ಕುತೋಚದೆ ಬಂದವರಿಗೆ ನೆಲೆಯಾಗಲು ಜಾಗ ಕೊಡುತ್ತಾನೆ. ಆದರೆ ಸಹಾಯ ಮಾಡಿದ ಗೌಡನೇ ಶಾಣಪ್ಪನ ಹೆಂಡತಿ ನೀಲವ್ವನನ್ನು ಪ್ರೀತಿಸಿ ಅವಳೊಂದಿಗೆ ಸಂಬಂಧವನ್ನಿರಿಸಿಕೊಳ್ಳುತ್ತಾನೆ. ಈ ವಿಷಯ ಗಂಡನಿಗೆ ತಿಳಿದರೂ ಗೌಡನ ಸಹಾಯ ಗುಣ ಆತ್ಮೀಯತೆ ಕಟ್ಟಿ ಹಾಕುತ್ತದೆ. ಇದಷ್ಟೇ ಅಲ್ಲದೆ ಗೌಡನನ್ನು ಮನೆಯಲ್ಲಿ ಹೆಂಡತಿಯನ್ನು ಬಿಟ್ಟು ತಾನು ಹೊರಗೆ ಮಲಗುವ ದೊಡ್ಡ ಗುಣದವನಾಗುತ್ತಾನೆ.

ಇಲ್ಲಿ ಶಾಣಪ್ಪನಿಗೆ ಒಂದಿಷ್ಟು ಅಸಹಾಯಕತೆ ಬಿಟ್ಟರೆ ಗೌಡನ ಮೇಲೆ ಸಿಟ್ಟು, ರೋಷ ಯಾವುದು ಇವನಿಗಿರಲಿಲ್ಲ. ಆದರೆ ಗೌಡನ ಹೆಂಡತಿ ಬಸಮ್ಮ, ಶಾಣಪ್ಪ ಗೌಡನ ಮನೆಗೆ

ಬಂದಾಗ ಬೈಯುವ ಮಾತುಗಳಿಗೆ ಶಾಣಪ್ಪ ಪ್ರತಿಕ್ರಿಯೆ ದಂಗುಬಡಿಸುತ್ತದೆ. "ಈಗೀಗ ಈಕಮಜಿಜಾತಿ ಮಾದರ ಜೋಚೇರೆಲ್ಲಾ ಗೌಡ್ಸೇರಾಗಲಿಕ್ಕ ಹೊಂಟಾರ ನೋಡೇ ಸಾಕವ್ವಾ ಈ ಹಡಬಿಟ್ಟಿ ಹಾದರಗಿತ್ತೇರಿಗೆ ಬುದ್ಧಿಯಿಲ್ಲಂದ್ರ ಅವರ ಗಂಡದೇರನೂ ಭಾಡಾ ತಿಲ್ಕಕ ಬಿದ್ದಾವ ನಾಯಿಗೋಳು, ತಾವು ತಾಳಿಕಟ್ಟಿದ ಹೆಂಡ್ತಿಗ್ಗಿ ಊರಗೌಡನ ಟೊಂಕದ ಕೆಳಗ ಅಡ್ಡ ಹಾಕಿ ರೊಕ್ಕಾ ತಿಂತಾವ ನನ್ ಹಾಟ್ಯಾಗೋಳು."(ಗೀತಾ ನಾಗಭೂಷಣ, ೨೦೦೬, ಪು.೨೭೩) ಎಂದಾಗ ಶಾಣಪ್ಪ "ಯವ್ವಾ ಗೋಡ್ತೀ ನಾ ಹಂತಾಂವಲ್ಲೇ ತಾಯೀ ಅವರಿಬ್ಬರ ಮನಸ ಕಲ್ತ ಮ್ಯಾಲ ನಾನು ನೀನೂ ಏನು ಮಾಡ್ಹಂಗಿದ್ದೀವೇ ಹಡದವ್ವಾ ನಾವು ಬ್ಯಾಡಂದ್ರ ಅವ್ರು ಕೇಳ್ತಾರೇನು? ಇದರಾಗ ನಂದೇನೂ ಕೈಯಿಲ್ಲ ಗೋಡ್ತೀ"(ಅದೇ, ಪು.೨೭೩) ಎಂದು ಕಣ್ಣೀರು ಹೊರಸಿಕೊಳ್ಳುತ್ತಾನೆ.

ಗೌಡ ಇಲ್ಲಿ ಶೋಷಕನಲ್ಲದಿದ್ದರೂ ಒಂದು ರೀತಿಯಲ್ಲಿ ಶಾಣಪ್ಪನ ಅಸಹಾಯಕತೆಯನ್ನು ಬಳಸಿಕೊಳ್ಳುತ್ತಾನೆ. ಊರಿನ ಗೌಡ ಎಂಬ ಅಧಿಕಾರ ದರ್ಪವಿಲ್ಲದಿದ್ದರೂ. ತನ್ನ ಸ್ಥಾನಮಾನವೇ ಶಾಣಪನ ಕುಟುಂಬದ ನೆಮ್ಮದಿಯನ್ನು ಹಾಳು ಮಾಡುತ್ತದೆ. ಶಾಣಪ್ಪನ ಕೃತಜ್ಞತೆ ಭಾವದ ಮೌಲ್ಯವನ್ನು ಹೆಚ್ಚುತ್ತದೆ.

ಗೌಡ ಒಂದೆರಡು ಸಾರಿ ಆಗಾಗ ನೀಲವ್ವ ಜೊತೆ ಇದ್ದು ಬಂದರೂ ಅವಳ ನೆನಪು ಹೆಚ್ಚು ಕಾಡಲು ಶುರುವಾಗುತ್ತದೆ. ಹಾಗಾಗಿ ಗುಡಿಸಲು ಹಾಕಿಕೊಳ್ಳಲು ಕೊಟ್ಟ ಜಾಗದಲ್ಲಿ ಒಂದು ಮನೆಕಟ್ಟಿಸುತ್ತಾನೆ. ಮನೆಯಲ್ಲಿ ಮಂಚ, ಹಾಸಿಗೆ ಎಲ್ಲತರದ ಸೌಕರ್ಯಗಳನ್ನು ಮಾಡಿಸುತ್ತಾನೆ. ಇದಷ್ಟೇ ಅಲ್ಲದೆ ಶಾಣಪ್ಪನ ಹೆಸರಿಗೆ ಎರಡು ಕೂರಿಗೆ ಹೊಲವನ್ನು ರಿಜಿಸ್ಟರ್ ಮಾಡಿಸುತ್ತಾನೆ.

ಇದಕ್ಕೂ ಮುಂಚೆಯೋ ಗೌಡ ನೇರವಾಗಿ ಶಾಣಪ್ಪನ ಹತ್ತಿರ ಹೋಗಿ "ನೋಡು ಶಾಣ್ಯ ನನಗ ನಿನ್ನ ನೀಲವ್ವಬೇಕು ನೀ ಬ್ಯಾಡಂದರನೂ ನಾ ಏನೂ ಬಿಡಾಂವ ಅಲ್ಲ ನಿನಗೇ ಆಕೀಗಿ ನಾ ಏನೂ ಕಮ್ಮಿ ಮಾಡಂಗಿಲ್ಲಪ್ಪ ಆಕೆಗೆ ನಾ ಅಂಗೈದಾಗಿನ ನಿಂಗಾ ನೋಡ್ಕೊಂಡ್ಹಂಗ ನೋಡ್ಕೋತಿನಿ. ಕುಡ್ದ ನೀರ ಅಳ್ಳ್ಯಾಡಲಾರದ್ಹಾಂಗ ಕಾಳಜಿಯಿಂದ ಇಡ್ತೀನಿ ಗಿಣಿ ಗಿಣಿ ಸಾಕದ್ಹಾಂಗ ಸಾಕ್ತೀನೀ ನಿನ್ ಹೆಸರಿಗೆ ಎರ್ಡು ಕೂರಗಿ ಹೊಲ ಬರ್ದುಕುಡ್ತೀನಿ ಏನಂತೀ ನಿ?"(ಅದೇ, ಪು.೨೭೩) ಎನ್ನುವ ಗೌಡನ ಮಾತಿನಿಂದೆ ಕಾಳಜಿಯೂ ಇದೆ ಗೌಡ ಎಂಬ ದರ್ಪವೂ ಕಾಣಿಸುತ್ತದೆ. ಈ ಮಾತಿಗೆ "ಒಟ್ನ್ಯಾಗ ನನ್ ನೀಲಿ ಚಂದದ್ರ ಆಯ್ತು ಬಿಡ್ರಿ"(ಅದೇ, ಪು.೨೭೭) ಎನ್ನುವ ಬಡವನ ಮಾತಿನಲ್ಲಿ ಅಸಹಾಯಕತೆಯೂ ಅಡಗಿರುವುದು ಕಂಡು ಬರುತ್ತದೆ.

ಒಂದು ದಿನ ನೀಲವ್ವಾ ಅಚಕನಾಕಾಗಿ ಬಂದ ಹೊಟ್ಟೆ ನೋವಿನಿಂದ ಸತ್ತು ಹೋಗುತ್ತಾಳೆ. ಆದರೂ ಗೌಡನಿಗೆ ಹುಟ್ಟಿದ ಮಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಶಾಣಪ್ಪನಿಗೆ ಬೀಳುತ್ತದೆ ಇದಾದ ಸ್ವಲ್ಪ ದಿನಗಳಲ್ಲಿ ಬಂದ ಬರಗಾಲಕ್ಕೆ ಜನ ಕಂಗಾಲಾಗುತ್ತಾರೆ. ಒಂದು ಹೊತ್ತಿನ ಊಟಕ್ಕೂ

ಗತಿಯಿಲ್ಲದೆ ದುಡಿಯಲು ಕೆಲಸವಿಲ್ಲದೇ ಜೀವನ ನಡೆಸುವುದು ಕಷ್ಟವೆನಿಸಿದಾಗ ಊರಿನ ಜನರೆಲ್ಲರು ಪುಣೆ, ಮುಂಬೈಯಂತಹ ನಗರಗಳಿಗೆ ವಲಸೆ ಹೋಗಲು ಶುರುಮಾಡುತ್ತಾರೆ. ಈ ಬರಗಾಲದಿಂದ ಊರಿನಲ್ಲಿ ಹೊಲಗಳು ಒಣಗಿ ಬಿರುಕು ಬಿಟ್ಟಿದವು. ಬಾವಿಗಳು ಬತ್ತಿದ್ದವು. ಹಳ್ಳಕೊಳ್ಳಗಳೆಲ್ಲ ಮೈಯೊಣಗಿಸಿ ಕೊಂಡು ಬಿಸಿಲಿಗೆ ಕಾದ ಬೆಂಕಿಕೊಂಡಗಳಾದವು. ಕುಡಿಯಲು ನೀರಿಲ್ಲದೆ ಹಳ್ಳಿಗಳ ಮಂದಿಯೆಲ್ಲ ಕಂಗಲಾದರು. ದನಕರುಗಳು ಕೊರಳಲ್ಲಿಯ ಕಟ್ಟುಬಿಚ್ಚಿ ಹೋಗಲು ಬಿಟ್ಟರು ಮಂದಿಯೆಲ್ಲ ಖಾಲಿ ಮಾಡಿ ಗುಳೆಯೆದ್ದು, ಬೊಂಬಾಯಿ, ಪುಣೆ, ಬೆಂಗಳೂರುಗಳಿಗೆ ಅನ್ನ ನೀರು ಹುಡುಕಿಕೊಂಡು ಹೊರಟರು.

ಇಲ್ಲಿ ವಲಸೆ ಹೋದವರು ಬಡವರಷ್ಟೇ ಅಲ್ಲದೆ ಗೌಡ, ಕುಕ್ಕಣಿ, ಸಾವ್ಕಾರರೂ ಮಜಬೂರ ಆಗಿ ಹಳ್ಳಿ ಬಿಟ್ಟು ಬಿಟ್ಟು ನಡೆದರು. ಉತ್ತರ ಕರ್ನಾಟಕ ಪ್ರದೇಶವಾದ ಕಲಬುರ್ಗಿ ಬಿಸಿಲಿನ ಪ್ರಭಾವ ಜನರನ್ನು ಎಷ್ಟು ಬರ್ಬರವಾಗಿತ್ತು ಎನ್ನುವುದಕ್ಕೆ ಲೇಖಕರು ತಮ್ಮದೇ ಆದ ಆಡು ಭಾಷೆಯಲ್ಲಿ ಸಂವೇನಾತ್ಮಕವಾಗಿ ವಿವರಿಸುತ್ತಾ ಹೋಗುವ ಸನ್ನಿವೇಶಕ್ಕೆ ಈ ಸಂದರ್ಭ ಉದಾಹರಣೆಯಾಗುತ್ತದೆ. ಗೌಡ ನೀಲವ್ವ ಸತ್ತಿದ್ದರು ಮಕ್ಕಳು ಗಂಡನನ್ನು ಕೈ ಬಿಡದೆ ಸಾವಿರ ರೂಪೈಗಳ ಬಂಡಲ್ ಕೊಟ್ಟು ಅಳುತ್ತ "ಶಾಣ್ಯ ಈ ರೂಪೈ ತೆಗೋ ಈ ಹಳ್ಳಿ ಬಿಡು ಎರ್ಡೂ ಮಕ್ಕಳಿಗೆ ಕರ್ಕೊಂಡು ಮುಂಬೈಗೆ ಹೋಗಿಬಿಡು, ಮಕ್ಕಳನ್ನು ಬದುಕಿಸು ಈ ಬರಗಾಲ ಕಳ್ದು ಮಳೆಬಿತ್ತ ಅಂದ್ರ ಮತ್ತು ನೀ ಮಕ್ಕಳಿಗೆ ಕರ್ಕೊಂಡು ಇಲ್ಲಿ ಬಾ ನಾವು ಬರ್ತಿವೆಂತ"(ಅದೇ, ಪು.೨೭೭) ಎಂದು ಅಳುತ್ತಾನೆ.

"ನಾವು ನಾಳಿಗೇ ಹಳ್ಳಿಬಿಟ್ರು ಹೈದರಾಬಾದ ಕಡೀಗೆ ಹೋಗುಲಕತ್ತೀವಿ ಅಲ್ಲಿನಮ್ಮ ನೆಂಟರ ಬಾ ಅಂದಾರ ಅಲ್ಲೇ ಏನರೆ ಯಾಪಾರಾ ಯ್ಯವ್ಹಾರ ಮಾಡ್ತಿವಿ ನಿಮ್ಮಂದೆಲ್ಲಾ ಮುಂಬೈನಿಂದ ಲಾರಿ ಬರ್ತವಂತ ನಿಮ್ಮೆಲ್ಲೋರಿಗೆ ತುಂಬ್ಕೊಂಡು ಮುಂಬೈಗಿ ಒಯ್ತದಂತ ಅಲ್ಲಿ ನಿನಗ ಕೆಲ್ಸಾ ಕೊಡ್ತಾರ ಕೂಲಿ ರೊಕ್ಕಾನೂ ಭಾಳ ಕೊಡ್ತಾರಂತ"(ಅದೇ, ಪು.೨೭೭) ಎಂದು ಹೇಳಿ ಸಮಾಧಾನ ಪಡಿಸಿದ. ಆದರೂ ಹೆಂಡತಿ ಇಲ್ಲದೆ ಎರಡು ಮಕ್ಕಳನ್ನು ಕರೆದುಕೊಂಡು ನಿಟ್ಟುಸಿರು ಬಿಡುತ್ತಾ ಹೊರಡುವ ಪ್ರಸಂಗ ಮನಕರಗಿಸುತ್ತದೆ. ಒಂದು ಕೈಯಲ್ಲಿ ಚಂದ್ರಳನ್ನೆತ್ತಿಕೊಂಡು, ಹೆಗಲ ಮೇಲೆ ಗಂಟು ಹೊತ್ತುಕೊಂಡು ಶಾಣ್ಯ ಮನೆಯಿಂದ ಹೊರಬಂದಾಗ ಪೂರುವ ಆಕಾಶದ ಅಗಲಕ್ಕೂ ಕೆಂಪು ಮೆತ್ತುತ್ತು. ಅಲ್ಲಲ್ಲಿ ಕತ್ತೆ ಬಣ್ಣದ ಖೊಜ್ಜಾ ಮೋಡಗಳನ್ನು ಎದೆಗೆ ಅಮರಿಕೊಂಡಿದ್ದ ಆಕಾಶ ಮೂರು ವರುಷಗಳಿಂದ ಗೊಡ್ಡು ಬಿದ್ದು, ಗರ್ಭ ಒಣಗಿಸಿಕೊಂಡಿತ್ತು. ಹೊಟ್ಟೆ ಸುಟ್ಟು, ಎದೆ ಬತ್ತಿ, ಬರಿ ಬಿಸಿಲನ್ನೇ ನೆಲಕ್ಕೆ ಹನಿಸುವ ಆಕಾಶದ ಕಡಗೆ ಹಳ್ಳಿಯವರ್‍ಯಾರೂ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

ಹತ್ತು ವರ್ಷದ ಭೀಮು, ಆರು ವರುಷ ಚಂದ್ರಾ ಹೊಲದ ಬಿರುಕುಬಿಟ್ಟ, ಸೀಳಿನಿಂತ ಮಣ್ಣಿನಲ್ಲಿ ಮೆಲ್ಲಗೆ ಹೆಜ್ಜೆ ಎತ್ತಿಡುತ್ತಿದ್ದರು. ಹೆಂಡತಿಯ ಸಮಾಧಿ ಹತ್ತಿರ ಹೋಗಿ ಎರಡು ಹುಡುಗರಿಗೂ "ಇದರಾಗ ನಿಮ್ಮವ್ವ ಮಲಕೊಂಡಾಳ, ಸೆಣಮಾಡ್ರಿ ಮಕ್ಳೇ ಇಲ್ಲಿ ಬರಗಾಲವಿದ್ದು ಆ ಹೊಟ್ಟೀಗಿ ಅನ್ನಾ ನೀರಾ ಸಿಗಲಾದ್ದ, ಬದಕಬೇಕಂತ ಬ್ಯಾರೆ ದೇಶಕ್ಕ ಗುಳೆಯೆದ್ದು ಆಕಿನ ಹರಕಿ ನಿವೆಲ್ಲಿ ಹ್ಯಾದರನೂ ನಿಮ್ ತೆಲಿ ಕಾಯ್ತಿದ ಕಂದಮ್ಮ ಗೋಳಾ ಸೆಣಮಾಡ್ರಿ"(ಅದೇ, ಪು.೨೭೭) ಎಂದು ಹೇಳುವ ಸಂದರ್ಭ. ಬರಗಾಲದಿಂದ ತತ್ತರಿಸುವ ಮನಸ್ಸುಗಳ ತಳಮಳ ನೋವು ಆತಂಕಗಳನ್ನು ಲೇಖಕಿ ಕಟ್ಟಿಕೊಟ್ಟಿದ್ದಾರೆ.

ಒಟ್ಟಾರೇಯಾಗಿ ಹೇಳುವುದಾದರೆ ಇಲ್ಲಿ ಬರುವ ಎರಡು ರೀತಿಯ ವಲಸೆಯಲ್ಲಿ ಒಂದು, ಕುಟುಂಬದ ವಲಸೆ, ಎರಡೂ ಊರಿನ ವಲಸೆ. ಮೊದಲನೆಯದು ಹೊಟ್ಟೆ ಪಾಡಿಗಾಗಿ ಕೆಲಸ ಹುಡಿಕೊಂಡು ಬಂದರೆ, ಎರಡನೆಯದು ಬರಗಾಲದಿಂದ ತತ್ತರಿಸಿ ಬದುಕುವುದಕ್ಕೆ ನಗರಕ್ಕೆ ವಲಸೆ ಹೋಗುವಂತದು. ಮೊದಲು ವಲಸೆ ಬಂದಾಗ ಗಂಡ ಹೆಂಡತಿ ಮಗು ಮೂರು ಜನರ ಒಂದು ಕುಟುಂಬ ವಲಸೆ ಬರುತ್ತದೆ. ಆದರೆ, ಬರಗಾಲ ಬಂದಾಗ ಮಕ್ಕಳೊಂದಿಗೆ ವಲಸೆ ಹೋಗುವಾಗ ಹೆಂಡತಿಯ ಆಗಲಿಕೆ ಹೆಚ್ಚು ಕಾಡುತ್ತದೆ. ಹೀಗೆ ಒಂದೇ ಕುಟುಂಬ ಎರಡು ಬಾರಿ ವಲಸೆ ಹೋದರೂ, ಭಿನ್ನ ರೀತಿಯ ಪರಿಣಾಮವನ್ನು ಅನುಭವಿಸುತ್ತಾರೆ. ಮೊದಲ ಸಾರಿಯ ವಲಸೆ ಹಿನ್ನೆಲೆಯನ್ನು ಮಾತ್ರ ಸಂಕ್ಷಿಪ್ತವಾಗಿ ವಿವರಿಸಿ ಪರಿಣಾಮವನ್ನು ಮಾತ್ರ ವಿವರವಾಗಿ ವಿವರಿಸುತ್ತಾರೆ. ಆದರೆ ಎರಡನೇ ಸಾರಿಯ ವಲಸೆ ಹೋದಾಗ ಅದರ ಹಿನ್ನೆಲೆ ಮಾತ್ರ ವಿವರಿಸಿ ಪ್ರಕ್ರಿಯೆ ಪರಿಣಾಮವನ್ನು ಮಾತ್ರ ಹೇಳದೇ ಮೌನವಹಿಸುತ್ತಾರೆ.

ಹೀಗೆ ಇಲ್ಲಿ ಬಡವರ ಬದುಕಿನಲ್ಲಿ ಉಂಟಾಗುವ ಅನೇಕ ತಿರುವುಗಳು ಮತ್ತು ವಲಸೆ ಬಂದ ನಂತರದಲ್ಲಿನ ಹಾಗೂ ಹೋಗುವಲ್ಲಿನ ಉಂಟಾಗುವ ವಲಸೆಯ ಪ್ರೇರಣೆ, ಪರಿಣಾಮ, ಪ್ರಕ್ರಿಯೆಗಳನ್ನು ಸಂವೇದನಾತ್ಮಕವಾಗಿ ಉತ್ತರ ಕನ್ನಡ ಭಾಷೆಯ ಶೈಲಿಯಲ್ಲಿ ಕಲಾತ್ಮಕವಾಗಿ ಚಿತ್ರಿಸಿದ್ದಾರೆ, ಮತ್ತು ಒಂದೇ ಕುಟುಂಬ ಎರಡು ಬಾರಿ ವಲಸೆ ಹೋಗುವ ಸಂದರ್ಭ ಎದುರಾದಾಗಲೂ ಅನೇಕ ಸಮಸ್ಯೆ ಅನಿವಾರ್ಯತೆಗಳಿಗೆ ಬಲಿಯಾಗಿ ಸಾಕಷ್ಟು ನೋವು ಸಂಕಷ್ಟವನ್ನು ಅನುಭವಿಸುತ್ತದೆ. ಹೀಗಾಗಿ ಈ ಕತೆಯಲ್ಲಿ ಬಡವರ ಪಾಲಿಗೆ ವಲಸೆ ನೇತ್ಯಾತ್ಮಕವಾಗಿ ಮೂಡಿಬಂದಿದೆ ಮತ್ತು ಉತ್ತರ ಕನ್ನಡ ಪ್ರದೇಶವಾದ ಬಿಸಿಲು ನಾಡಿನಲ್ಲಿ ಬರಗಾಲದ ಸಮಸ್ಯೆಯಿಂದಾಗಿ ಅಲ್ಲಿಯ ಜನ ಬದುಕನ್ನು ಅರಸಿ ಆಗಾಗ್ಗೆ ವಲಸೆ ಹೋಗಬೇಕಾಗುವ ಸಂದರ್ಭ ಮತ್ತು ಇದರಿಂದ ಉಂಟಾಗುವ ಈ ಕತೆಯ ಮೂಲಕ ಲೇಖಕಿ ಗೀತಾ ನಾಗಭೂಷಣರವರು ಬಿಚ್ಚಿಡುತ್ತಾರೆ.

ಸುಧಾಮೂರ್ತಿಯವರ 'ಡಾಲರ್ ಸೊಸೆ' ಕಾದಂಬರಿಯು ಇಂದಿನ ಜಾಗತೀಕರಣದ ಪ್ರವಾಹದಿಂದ ಐಷಾರಾಮಿಯ ಜೀವನಕ್ಕೆ ಆಸೆಪಟ್ಟು ಅಮೆರಿಕಾಗೆ ವಲಸೆ ಹೋಗಿ ನೆಲಿಸಿದ್ದಂತಹ ಭಾರತೀಯ ಕುಟುಂಬಗಳ ಕೌಟುಂಬಿಕ ಸ್ಥಿತಿಗತಿಗಳನ್ನು ಈ ಕತೆಯಲ್ಲಿ ಕಾಣಬಹುದು. ಈ ಕತೆಯ ಕುರಿತು ಲೇಖಕಿ ಸುಧಾಮೂರ್ತಿಯವರು ತಮ್ಮ ಮುನ್ನಡಿಯಲ್ಲಿ ಹೇಳುವಂತೆ "ಇದೊಂದು ಸಮಕಾಲೀನ ಸಮಸ್ಯೆ ಕುರಿತು ಬರೆದ ಕಾದಂಬರಿಯಾಗಿದೆ"(ಸುಧಾಮೂರ್ತಿ, ೨೦೦೮, ಮುನ್ನುಡಿ) ಎಂದು ಹೇಳುತ್ತಾರೆ. ಇವರ ಈ ಅಭಿಪ್ರಾಯದಂತೆ ಇಂದಿನ ಕಾಲಘಟ್ಟದಲ್ಲಿ ಉದ್ಯೋಗ, ಶಿಕ್ಷಣ, ಐಷರಾಮಿ ಜೀವನಕ್ಕೆ ಇಚ್ಛಾಪೂರ್ವಕವಾಗಿಯೇ ತಮ್ಮ ಸಂಬಂಧಗಳನ್ನು ತೊರೆದು ಯುವಕ, ಯುವತಿಯರು ಉದ್ದೇಶ ಪೂರ್ವಕವಾಗಿ ವಲಸೆ ಹೋಗುತ್ತಿದ್ದಾರೆ. ಹಾಗಾಗಿ ವಲಸೆ ಇಂದಿನ ದಿನಗಳಲ್ಲಿ ಸಾಮಾಜಿಕ ಸಮಸ್ಯೆಯಾಗಿ ಪರಿಣಿಮಿಸಿದೆ. ಏಕೆಂದರೆ ಇಂದಿನ ವಿದ್ಯಾವಂತರ ಫಲಾಯಾನ ಒಂದು ರೀತಿಯಲ್ಲಿ ನಮ್ಮ ದೇಶದ ಪ್ರತಿಭಾ ಫಲಾಯಾನವೇ ಆಗಿದೆ.

ಇದರ ಜೊತೆಗೆ ಖುಷಿಯಾಗಿ ನೆಮ್ಮದಿಯಾಗಿ ಆರ್ಥಿಕವಾಗಿ ಸಬಲರಾಗಿ ಇರಬಹುದು ಎಂದು ಹೋದವರ ಬಾಳು ಅಲ್ಲಿನ ಸಂಸ್ಕೃತಿ, ಆಚಾರ, ನಡೆ, ನುಡಿ, ಎಲ್ಲವೂ ಭಿನ್ನತೆಗೊಳ್ಳುವುದರಿಂದ ಅಲ್ಲಿ ಜೀವನ ನಡೆಸುವುದು ಕಷ್ಟಕರವಾಗುತ್ತದೆ. ಈ ಕಷ್ಟಕರದ ನೋವು ನಲಿವಿನ ಬದುಕಿನ ಬವಣೆಯನ್ನು ವಿವರಿಸುವುದೇ ಸುಧಾಮೂರ್ತಿಯವರ ಡಾಲರ್ ಸೊಸೆಯಾಗಿದೆ. ಇದೊಂದು ಕುಟುಂಬ ವಲಸೆಯ ಚಿತ್ರಣವನ್ನು ಕೊಡುತ್ತದೆ. ಕತೆಯ ನಾಯಕ ಚಂದ್ರು, ಮಧ್ಯಮವರ್ಗದ ಕುಟುಂಬದಿಂದ ಬಂದವನು ಸದ್ಯದ ಮಟ್ಟಿಗೆ ಧಾರವಾಡದಲ್ಲಿ ಸಿಕ್ಕ ಕೆಲಸಕ್ಕೆ ಹಣದ ಮೋಹವೂ ಹೆಚ್ಚೋ? ನೆಲದ ಮೋಹವು ಹೆಚ್ಚೋ?"(ಅದೇ, ಪು.೨) ಎಂಬ ಗೊಂದಲದೊಂದಿಗೆ ಹೋಗುತ್ತಾನೆ. ಅಲ್ಲಿ ಕೆಲವು ದಿನಗಳ ಕಾಲ ಬಾಡಿಗೆ ಮನೆಯಲ್ಲಿ ವಾಸ ಮಾಡುವಾಗ ಮನೆಯ ಮಾಲಿಕನ ಅಣ್ಣನ ಮಗಳಾದ ವಿನುತಾಳ ಸೌಂದರ್ಯ ಗುಣಕ್ಕೆ ಮೆಚ್ಚಿ ಇಷ್ಟಪಡುತ್ತಾನೆ.

ಅಲ್ಲಿಂದ ಸ್ವಲ್ಪದಿನಗಳಲ್ಲಿಯೇ ಬೆಂಗಳೂರಿನಲ್ಲಿ ಇಸ್ರೋ ಕಂಪನಿಯೊಂದರಲ್ಲಿ ಸಿಕ್ಕ ಕೆಲಸಕ್ಕೆ ಸೇರಿ ಆ ಕಂಪನಿಯ ಕಡೆಯಿಂದ ಅಮೆರಿಕಾಕ್ಕೆ ಹೋಗಬಹುದೆಂಬ ಹಂಬಲ ಇವನ ಸಂತೋಷ ಹೆಚ್ಚಾಗುತ್ತಾ ಜೊತೆಗೆ ತಾನು ಪ್ರೀತಿಸಿದ್ದ ವಿನುತಾಳನು ಸಹ ಮರೆಯುತ್ತಾನೆ ಈ ಸಮಯದಲ್ಲಿ ಮರೆಯುತ್ತಾನೆ. ಇಲ್ಲಿಯ ಕಥಾನಾಯಕ ಚಂದ್ರುವೇ ಆದರೂ ಚಂದ್ರವಿನ ತಾಯಿಯ ಪಾತ್ರ ಇಲ್ಲಿ ಪ್ರಮುಖವಾಗಿ ಮೂಡಿಬರುತ್ತದೆ. ಚಂದ್ರುವಿನ ತಾಯಿ ಗೌರಮ್ಮನಿಗಿದ್ದ ಅಮೆರಿಕಾದ ಡಾಲರ್‌ನ ಆಸೆ, ಐಷಾರಾಮಿ ಜೀವನದ ಕನಸು, ನನಸಾದಾಗ ಕಾಲನಂತರ ಭಿನ್ನ ಸಂಸ್ಕೃತಿಗೆ ಒಳಗಾಗಿ ಆತಂತ್ರಕ್ಕೆ ಒಳಗಾಗುತ್ತಾಳೆ. ಚಂದ್ರನು ಕೆಲಸದ ನಿಮಿತ್ತ ಅಮೆರಿಕಕ್ಕೆ ಹೋಗಿ ಅಲ್ಲಿಯೇ ನೆಲಸಿ ಮತ್ತೊಂದು ಕೆಲಸದಲ್ಲಿ ಸೇರಿ ಆರ್ಥಿಕವಾಗಿ ಸಬಲನಾಗುತ್ತಾನೆ. ಆದರೆ ಚಂದ್ರುವಿನ ಮದುವೆಯ

ನಂತರ ಬದುಕು ಚಂದ್ರುವಿನ ಬಾಳಿನಲ್ಲಿ ಅಶಾಂತಿಯನ್ನು ತೋರುತ್ತದೆ. ತಾಯಿಯ ಆಸೆಯಂತೆ ಶ್ರೀಮಂತ ಮನೆತನದ ಜಮುನಾಳನನ್ನು ಮದುವೆಯಾಗಿ ಅಮೆರಿಕಕ್ಕೆ ಕರೆದುಕೊಂಡು ಬರುತ್ತಾನೆ.

ಗೌರಮಳೂ ಸಹ ಅಮೇರಿಕದ ಬದುಕಿಗೆ ಮರುಳಾಗಿ ಸೊಸೆ, ಮಗನೊಂದಿಗೆ ಬದುಕಲು ಅಮೆರಿಕಕ್ಕೆ ತೆರಳುತ್ತಾಳೆ. ಅಲ್ಲಿಂದ ಕತೆ ತಿರುವು ಪಡೆದುಕೊಳ್ಳುತ್ತದೆ. ಮನೆಯಲ್ಲಿದ್ದ ಮತ್ತೊಬ್ಬ ಮಗನ ಹೆಂಡತಿ ವಿನುತಾಳೊಂದಿಗೆ ಅತೀ ಕಠೋರವಾಗಿ ನಡೆದುಕೊಳ್ಳುತ್ತಾಳೆ. ವಿನುತಾ ಎಲ್ಲರ ಸೇವೆ ಮಾಡುತ್ತಾ ಮನೆಯ ಹೊರಗೆ ಒಳಗೆ ಎರಡು ಕೆಲಸ ಮಾಡುತ್ತಿದ್ದರೂ ಅವಳಿಗೆ ಬರೀ ಕಣ್ಣೀರೆ ಗತಿಯಾಗುತ್ತದೆ. ಇದೇ ಸಮಯಕ್ಕೆ ಅಮೆರಿಕದಲ್ಲಿದ್ದ ಜಮುಳಾ ಗರ್ಭಿಣಿಯಾದ್ದರಿಂದ ಗೌರಮ್ಮ ಸೊಸೆಯೊಂದಿಗೆ ಇರಲು ಅಮೆರಿಕಕ್ಕೆ ಹೋಗುತ್ತಾಳೆ. ಆದರೆ ದೂರದ ಬೆಟ್ಟದಂತೆ ನುಣ್ಣಗೆ ಇದ್ದ ಅಮೆರಿಕದ ತಗ್ಗು ದಿಣ್ಣೆಗಳ ಪರಿಚಯವಾಗುತ್ತದೆ. ಭಾರತದಿಂದ ಹೋದಂತಹ ಹಲವು ಕುಟುಂಬಗಳ ಸಮಸ್ಯೆಗಳು ಹೀಗೆ ಇರಬೇಕು ಹೀಗೆ ನಡೆದುಕೊಳ್ಳಬೇಕೆಂಬ ನಿಯಮಗಳು ಭಾರತೀಯ ಸಂಸ್ಕೃತಿಯಲ್ಲಿ ಬೆಳೆದ ಗೌರಮ್ಮನಿಗೆ ಕಿರಿಕಿರಿ ಎನಿಸುತ್ತದೆ.

ಹಾಗೆಯೇ ಅಮೆರಿಕಾದಲ್ಲಿನ ಸೊಸೆಯನ್ನು ಡಾಲರ್ ಸೊಸೆ ಎಂದು ಅತಿಯಾದ ಪ್ರೀತಿಯಿಂದ ನೋಡಿಕೋಳ್ಳುತ್ತಿದ್ದ ಗೌರಮ್ಮನಿಗೆ ಸೊಸೆಯ ನಡವಳಿಕೆ, ತಾತ್ಸರದಿಂದ ಬೇಸತ್ತು ಭಾರತಕ್ಕೆ ತಿರುಗಿ ಬಂದು ಬಿಡಬೇಕೆಂಬ ಕಾತರ ಹೆಚ್ಚಾಗುತ್ತದೆ. ಹಾಗಾಗಿ ಸೊಸೆಯ ನಾಟಕದ ಪ್ರೀತಿಯನ್ನು ಅರಿತು ಮತ್ತೇ ತಾಯ್ನಾಡಿಗೆ ಹಿಂಬಾಲಿಸಿ ಬರುತ್ತಾಳೆ. ಅಷ್ಟರಲ್ಲಿ ಗೌರಮ್ಮನ ಹಿರಿಯ ಮಗ ಗಿರೀಶ್ ಸೊಸೆ ವಿನುತಾ ಬೇರೆ ಕಡೆ ಹೋಗಿ ಜೀವನ ನಡೆಸುತ್ತಿರುತ್ತಾರೆ. ಗೌರಮ್ಮನಿಗೆ ತನ್ನ ತಪ್ಪಿನ ಅರಿವಾಗಿ ಈಗಲಾದರೂ ಸಂತೋಷದಿಂದ ಬದುಕಲೆಂದು ಹಾರೈಸಿ ಸುಮ್ಮನಾಗುತ್ತಾಳೆ.

ಒಟ್ಟಾರೆಯಾಗಿ ಇದೊಂದು ವಿದೇಶಕ್ಕೆ ಹೋದ ಕುಟುಂಬಗಳ ವಲಸೆಯ ಚಿತ್ರಣವನ್ನು ಇಲ್ಲಿ ಕಾಣಬಹುದು. ಇಲ್ಲಿ ಬರೀ ಚಂದ್ರುವಿನ ಕುಟುಂಬದ ಕತೆ ಮಾತ್ರ ಇಲ್ಲ. ಈ ಕಾದಂಬರಿಯಲ್ಲಿ ಬರುವ ಚಿತ್ರ, ವತ್ಸಲಾ, ಆಶಾ ಪಾಟೀಲ್, ಗೋಪಿನಾಥ ಪಾತ್ರಗಳು ಭಾರತೀಯ ಸಂಪ್ರದಾಯದಿಂದ ಬೇಸತ್ತು ವಿಧವೆಯಾಗಿ ನರಕಯಾತನೆ ಅನುಭವಿಸದೆ, ಅತ್ತೆಯ ಕಾಟ ತಡೆಯಲಾರದೆ ಒಳ್ಳೆಯ ಉದ್ಯೋಗ ಸಿಗಲಾರದೆ, ಬೆಸತ್ತು ಅಮೆರಿಕಕ್ಕೆ ಬಂದವರ ಕತೆಗಳನ್ನು ಹೇಳುತ್ತಾನೆ. ಇವರ ಪ್ರಕಾರ ಅಮೆರಿಕಾ ಒಂದು ರೀತಿಯಲ್ಲಿ ಸ್ವರ್ಗ. ಭಾರತ ನರಕ ಎನ್ನುವ ಭಾವನೆಯುಳ್ಳವರು. ಏಕೆಂದರೆ ಭಾರತದಲ್ಲಿ ವಿಧವಾ ವಿವಾಹವನ್ನು ವಿರೋಧಿಸುವಂತಹ ಜನರಿದ್ದಾರೆ. ಹಾಗೆಯೆ ವಿಧವೆಗೆ ಬಾಳು ಕೊಡುವ ಮಾನವೀಯ ಗುಣವುಳ್ಳ ಗಂಡಸು ಸಿಗುವುದು ಕೂಡ ಕಷ್ಟ. ಆದರೆ ಚಿತ್ರಾಳ ಬದುಕಿನಲ್ಲಿ ಪರದೇಶದ ಜೋಸೆಪ್ ಗಂಡನಾಗಿ ಕೈಯಿಡಿದ್ದರಿಂದ ಆಕೆಯ ಬಾಳು ಹಸನವಾಗುತ್ತದೆ.

ಹೀಗೆ ಕೆಲವರಿಗೆ ಅಮೆರಿಕಾ ಕೆಲವರಿಗೆ ನೆಮ್ಮದಿಯಿಲ್ಲದೆ ಅನಿವಾರ್ಯವಾಗಿ ಬದುಕುತ್ತಿರುವ ಜನರಲ್ಲಿ ಸಹ ಕಂಡುಬರುತ್ತದೆ. ಏಕೆಂದರೆ ಅಮೆರಿಕಾದಲ್ಲಿ ಹುಟ್ಟಿದಂತಹ ಭಾರತೀಯರ ಮಕ್ಕಳೂ ಯಾವ್ವನಕ್ಕೆ ಬಂದಾಗ ತಂದೆತಾಯಿಯರ ಮಾತು ಕೇಳದೆ ಸ್ವತಂತ್ರವಾಗಿ ತಮಗೆ ಇಷ್ಟಬಂದಾಗ ಹಾಗೆ ಬದುಕುವುದು ತಂದೆ ತಾಯಿಯರಿಗೆ ಆತಂಕ ಉಂಟುಮಾಡುತ್ತದೆ.

"ಮಗು ಚಿಕ್ಕದಾಗಿದ್ದಾಗ ಉಳಿದ ಅಮೆರಿಕೆಯ ಮಕ್ಕಳಂತೆ ಬಣ್ಣ ಬಣ್ಣದ ಫ್ರಾಕು ಧರಿಸಿ ಅವರ ಭಾಷೆ ಕಲಿತು ಅವರಂತೆ ಸ್ಕೂಲು ಓದಿದಾಗ ನಾವೆಲ್ಲ ಹೆಮ್ಮೆ ಪಡ್ತೀವಿ ಮಗು ಹದಿಹರೆಯದ ವಯಸ್ಸಿಗೆ ಬಂದಾಗ ಅಮೆರಿಕನ್ ಹುಡಿಗಿಯರ ಥರ ನಡೆದಾಗ ಬೇಡ ಅನ್ತೀವಿ ಈ ಎರಡು ಮೌಲ್ಯ ಮಕ್ಕಳಿಗೆ ಹೇಗೆ ಅರ್ಥವಾಗಬೇಕು."(ಅದೇ, ಪು.೧೯೯) ಎಂಬ ಚಂದ್ರುವಿನ ಮಾತುಗಳು ಭಾರತದಿಂದ ಅಮೇರಿಕಾಗೆ ವಲಸೆ ಹೋದ ಕುಟುಂಬದಲ್ಲಿನ ಮಕ್ಕಳ ದ್ವಂದಮಯ ಬದುಕನ್ನು ಚಿತ್ರಿಸುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಇಂದಿನ ಜಾಗತೀಕರಣ ಸ್ವಭಾವದಿಂದ ಇಂದಿನ ಯುವ ಪೀಳಿಗೆ ಐಷಾರಾಮೀ ಜೀವನಕ್ಕೆ ಆಸೆಪಟ್ಟು ಅಮೆರಿಕಾಗೆ ವಲಸೆ ಹೋಗಿ ನೆಲೆಯಾದ ನಂತರದಲ್ಲಿನ ಬದುಕಿನ ಜಂಜಾಟಗಳನ್ನು ಕಟ್ಟಿಕೊಡುತ್ತದೆ. ಮತ್ತು ಇಷ್ಟೇ ಅಲ್ಲದೇ ಭಾರತದಲ್ಲಿ ಇನ್ನು ಜೀವಂತ ವಾಗಿರುವ ಮೂಢನಂಬಿಕೆ, ಅಸಮಾನತೆಗಳಿಂದ ನಿರುದ್ಯೋಗದಂತಹ ಸಮಸ್ಯೆಗಳಿಂದ ಮುಕ್ತರಾಗಲು ವಿದೇಶಿ ವಲಸೆ ಒಂದು ರೀತಿಯಲ್ಲಿ ದಾರಿಯಾಗಿದೆ ಎಂಬುದನ್ನು ಇಲ್ಲಿ ಲೇಖಕರು ಸೂಕ್ಷ್ಮವಾಗಿ ತೆರೆದಿಡುತಾರೆ

ಹೀಗೆ ಭಾರತ ಮತ್ತು ಅಮೆರಿಕದ ಜೀವನದಲ್ಲಿನ ಅನುಕೂಲ ಮತ್ತು ಅನಾನುಕೂಲಗಳನ್ನು ವಲಸೆಯ ಅನಿವಾರ್ಯತೆಗಳನ್ನು ಹಾಗೂ ವಲಸೆ ಇಂದಿನ ಜಾಗತೀಕರಣವನ್ನು ಹೀಗೆ ಸಾಮಾಜಿಕ ಸಮಸ್ಯೆಯಾಗಿ ರೂಪಗೊಂಡಿದೆ, ಎಂಬುದನ್ನು ವಲಸೆಯ ಪ್ರೇರೆಣೆ ಪರಿಣಾಮಗಳ ರೂಪದಲ್ಲಿ ಕಟ್ಟಿಕೊಟ್ಟಿದ್ದಾರೆ.

ದೇವನೂರು ಮಹಾದೇವ ಅವರ ಮಾರಿಕೊಂಡವರು ಕತೆಯಲ್ಲಿ ಹಸಿವು, ಬಡತನ, ದಾರಿದ್ರ್ಯದಿಂದ ವಲಸೆ ಬಂದ ಬೀರ ಮತ್ತು ಲಕ್ಷ್ಮಿಯ ಕುಟುಂಬದ ಕತೆಯನ್ನು ಹೇಳುತ್ತದೆ. ಕತೆಯ ಆರಂಭದಲ್ಲಿಯೇ ಬೀರ ಮತ್ತು ಲಕ್ಷ್ಮಿ ವಲಸೆ ಹೊರಡುತ್ತಿರುವ ಸಂದರ್ಭದೊಂದಿಗೆ ಕತೆ ಆರಂಭವಾಗುತ್ತದೆ. ಕೈಯಲ್ಲಿ ಹಣವಿಲ್ಲದೇ ಹಸಿವು ಬಡತನವನ್ನು ತಾಳಲಾರದೆ ಎಲ್ಲದರೂ ಹೋಗಿ ಬದುಕಬೇಕೆಂದು ಊರು ಬಿಟ್ಟು ಹೋಗಲು ನಿರ್ಧಾರ ಮಾಡಿರುತ್ತಾರೆ. ಆದರೆ ಟಿಕೆಟ್ ಕೊಳ್ಳಲು ಸಹ ದುಡ್ಡಿಲ್ಲದೆ, ರೈಲಿನಲ್ಲಿ ಇನ್ಸ್‌ಪೆಕ್ಟರ್ ಕೈಗೆ ಸಿಕ್ಕಿಹಾಕಿಕೊಂಡು ಅವಮಾನಕ್ಕೆ ಒಳಗಾಗುತ್ತಾರೆ.

ಇದೇ ಸಮಯಕ್ಕೆ ದೇವರಂತೆ ಬಂದ ಒಂದು ಊರಿನ ಗೌಡ ಇವರ ಪರಿಸ್ಥಿತಿಗೆ ಮರುಗಿ ದಂಡ ಕಟ್ಟುತ್ತಾನೆ. ಕೆಲಸಕ್ಕಾಗಿ ಊರು ಬಿಟ್ಟು ಬಂದಿರುವ ವಿಷಯ ತಿಳಿದು ತನ್ನ ಹಳ್ಳಿಯಲ್ಲಿ ಮನೆಕೊಟ್ಟು ತೋಟದ ಕೆಲಸಕ್ಕಾಗಿ ನೇಮಿಸಿಕೊಳ್ಳುತ್ತಾನೆ. ಇಲ್ಲಿ ಡಾ.ಸಿ.ಬಿ.ಹೊನ್ನಯ್ಯ ಅವರ ಅಭಿಪ್ರಾಯದಂತೆ "ಗೌಡ ಊಳಿಗಮಾನ್ಯ ವ್ಯವಸ್ಥೆಯ ಕ್ರೂರಿಗಳಲ್ಲಿ ಮಾನವೀಯತೆಯ ದಯೆ ಕರುಣೆ ಇರುವ ದೊಡ್ಡವರು ಆಗುತ್ತಾರೆ. ಬೀರ ಲಕ್ಷ್ಮಿಯು ಸಹ ಗೌಡನ ಉಪಕಾರಕ್ಕೆ ಪರೋಪಕಾರಿಗಳಾಗಿ ದುಡಿಯುತ್ತಾರೆ."(ಹೊನ್ನಯ್ಯ ಸಿ.ಬಿ. ೨೦೦೯, ಪು.೨೦೪) ಎಂಬ ಮಾತು ಗೌಡನ ಸಹಾಯದ ಗುಣವನ್ನು ಎತ್ತಿಹಿಡಿಯುತ್ತದೆ. ಹೀಗೆ ಗೌಡನ ಸಹಾಯ ದೊರೆತ ಮೇಲೆ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದ ಕುಟುಂಬಕ್ಕೆ ಗೌಡನ ಮಗ ಕಿಟಪ್ಪನೇ ಕಳನಾಯಕನಾಗುತ್ತಾನೆ. ಕಿಟ್ಟಪ್ಪನಿಗೆ ಲಕ್ಷ್ಮಿಯ ಮೇಲೆ ಕಣ್ಣು ಬಿದ್ದು ಲಕ್ಷ್ಮಿಯೊಂದಿಗೆ ಅನೈತಿಕ ಸಂಬಂಧವಿರಿಸಿಕೊಳ್ಳುತ್ತಾನೆ. ಈ ವಿಷಯ ಬೀರನಿಗೂ ಗೊತ್ತಿತ್ತು. ಆದರೆ ನೆಲೆಬಿಟ್ಟು ಬಂದವರಿಗೆ ಗೌಡ ಬದುಕಲು ದಾರಿ ಮಾಡಿಕೊಟ್ಟಿರುವ ಕೃತಜ್ಞತೆ ಬೀರನನ್ನು ತಡೆಯುತ್ತದೆ. ಆದರೂ ಒಳೊಳ್ಳಗೆ ನಡೆಯುವ ಸಿಟ್ಟು, ಆವೇಶ, ಸಂಕಟ ಎಲ್ಲವನ್ನು ಕುಡಿಯುವುದರ ಮೂಲಕ ಮರೆಯಲು ಪ್ರಯತ್ನಿಸುತ್ತಾನೆ. ಆದರೆ ಬೀರನ ಕುಡಿತದ ದೌರ್ಬಲ್ಯವೇ ಕಿಟ್ಟಪ್ಪನಿಗೆ ಅನುಕೂಲವಾಗುತ್ತದೆ. ಕುಡಿತದ ಮತ್ತಿನಲ್ಲಿಯೇ ಬೀರ ಲಕ್ಷ್ಮಿಯ ಮೇಲೆ ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾ, ಅಸಹಾಯಕತೆಯಿಂದ ನರಳುತ್ತಾನೆ.

ಡಾ.ಸಿ.ಬಿ.ಹೊನ್ನಯ್ಯನವರ ಸಂಬಂಧದ ಕುರಿತ ಮಾತುಗಳು ಅರ್ಥಪೂರ್ಣವಾಗಿವೆ. "ಲಕ್ಷ್ಮಿ ಕಿಟ್ಟಪ್ಪನ ಪ್ರೀತಿ ಪ್ರೇಮಕ್ಕೆ ಮಾರಿಕೊಂಡಿದ್ದಾಳೆ. ಕಿಟ್ಟಪ್ಪ ಲಕ್ಷ್ಮಿಗೆ ಮಾರಿಕೊಂಡಿಲ್ಲ. ಕಿಟ್ಟಪ್ಪನು ಶ್ರೀಮಂತ ಮೇಲಾಗಿ ಧಣಿಯ ಮಗ ರಸಿಕ ಇಂತಹ ಹೆಣ್ಣುಮಗಳು ಎಷ್ಟೋ ಅವನಿಗೆ ಕಿಟ್ಟಪ್ಪ ಕೊಟ್ಟಿರುವ ರಗ್ಗು ಲಚುಮಿನ ಕವಿಚಿಕೊಂಡಿದೆ. ಕಿಟ್ಟಪ್ಪ ಕಟ್ಟಿರುವ ಮನೆ ಇಬ್ಬರನ್ನು ಕವಿಚಿಕೊಂಡಿದೆ" (ಅದೇ, ಪು.೨೦೪) ಎಂಬ ಮಾತು ಕಿಟ್ಟಪ್ಪನ ಶ್ರೀಮಂತಿಕೆಯನ್ನು ಬೀರನ ಬಡತನವನ್ನು ಸ್ಪಷ್ಟವಾಗಿ ಗುರುತಿಸುತ್ತದೆ ಮತ್ತು ಬಡತನವನ್ನು ಬಂಡವಾಳವನ್ನಾಗಿಸಿಕೊಂಡ ಕಿಟ್ಟಪ್ಪ ಬೀರನ ಕುಟುಂಬಕ್ಕೆ ಸಹಾಯ ಮಾಡಿ ತನ್ನ ಆಸೆಗಳನ್ನು ಪೂರೈಸಿಕೊಳ್ಳುವ ತಂತ್ರ ಈತನದಾಗಿರುತ್ತದೆ. ಬೀರ ತನ್ನ ಅಸಹಾಯಕತೆಯನ್ನು ವೇದನೆಯನ್ನು ಕುಡಿಯುವುದರ ಮೂಲಕ ಮರೆಯುತ್ತಾನೆ. ಕುಡಿದಾಗ ಮಾತ್ರ ಲಕ್ಷ್ಮಿಯನ್ನು ಮನಬಂದಂತೆ ಬೈಯುತ್ತಾನೆ. ಪ್ರತಿಭಟಿಸುತ್ತಾನೆ. ಆದರೆ ಬೆಳಗಾಗುತ್ತ ಬಡವನ ಸಿಟ್ಟು ದವಡೆಗೆ ಮೂಲ ಎಂಬ ಮಾತಿನಿಂದ ಏನೂ ಗೊತ್ತಿಲ್ಲದಂತೆ ಸುಮ್ಮನಾಗಿ ಬಿಡುವ ಪರಿಸ್ಥಿತಿ ಬೀರನದಾಗುತ್ತದೆ..

ಕುಡಿದಾಗ ಹೆಂಡತಿಯ ಮೇಲೆ ತೋರಿಸುವ ಸಿಟ್ಟು ಬೀರನ ಒಳಗಿನ ಸಂಕಟ, ನೋವನ್ನು ಕಡಿಮೆಗೊಳಿಸುತ್ತದೆ. ಉದಾಹರಣೆಗೆ ಈ ಕತೆಯಲ್ಲಿನ ಸಂದರ್ಭದ ಮೂಲಕ ಉದಾಹರಿಸಬಹುದು.

"ಥ್ಥೆ, ಥ್ಥೆ, ಥ್ಥೆ ಗತಿ ಕಾಣಿಸ್ತೀನಿ ಬೆಳ್ಗಾಗಲಿ, ನೀನು, ಇಲ್ಲ ಅವ್ನೂ ಬಾಗಲಿಗೆ ಕಡದ್ ಕಡದ್ ಹಾಕ್ತೀನಿ ಬೆಳಗಾಗೋದೇ ಇಲ್ವಾ? ಬಂದೇ ಬತ್ತಾನೆ ಮಿಂಡಗಾತಿ ಮುಖನೋಡಕೆ ಹೆಚ್ಚಿಗೆ ಮಾತಾಡೋಕೆ"(ಅದೇ, ಪು.೨೦೪) ಅನ್ನಹಾಕಿದ ಧಣಿ ಎಂಬ ಪ್ರಜ್ಞೆ ಬೀರನನ್ನು ತಡೆಯುತ್ತದೆ ಹೀಗೆ ಬೀರ ಹೆಂಡತಿಯನ್ನು ಬೈದು ತನ್ನ ಮನಸ್ಸಿನ ನೋವನ್ನು ಕಡಿಮೆ ಮಾಡಿಕೊಳ್ಳುತ್ತಾನೆ. ಹೀಗೆ ಬಡತನದಿಂದ ಕೆಲಸವನ್ನು ಹುಡುಕಿಕೊಂಡು ಬದುಕನ್ನು ಕಂಡುಕೊಳ್ಳಲು ಬಂದ ಈ ಕುಟುಂಬಕ್ಕೆ ಗೌಡನ ಸಹಾಯ ದೊರೆತರೂ ಬದುಕು ನೆಮ್ಮದಿಯಿಂದ ಇರಲು ಸಾಧ್ಯವಾಗುವುದಿಲ್ಲ. ಗೌಡನ ಮಗನ ಶೋಷಣೆ ಅನೈತಿಕ ಸಂಬಂಧ ಗುಳೆ ಇವರ ಪಾಲಿಗೆ ದುಃಖವಾಗಿ ಪರಿಣಮಿಸಿ, ಪ್ರತಿಭಟಿಸಲು ಸಹ ಆಗದಂತಹ ಪರಿಸ್ಥಿತಿಗೆ ತಳ್ಳುತ್ತದೆ.

ಹೀಗೆ ಬಡತನದಿಂದ ಬದುಕನ್ನು ಅರಸಿ ವಲಸೆ ಬಂದ ಕುಟುಂಬಕ್ಕೆ ನೆಲೆ ದೊರಕಿಸಿಕೊಟ್ಟ ಗೌಡನ ಮಗನೆ ಶೋಷಿಸುವ ಮೂಲಕ ಬಡವರ ಬದುಕು ಹೇಗೆ ಬರಡಾಗುತ್ತದೆ ಮತ್ತು ಬದುಕಿನ ನಿರ್ವಹಣೆಯ ಅನಿವಾರ್ಯತೆಗೆ ಶೋಷಕನೊಂದಿಗೆ ರಾಜಿಯಾಗುವ ಬಡವನ ಅಸಹಾಯಕತೆಯನ್ನು ಪ್ರಮುಖವಾಗಿ ಈ ಕತೆ ಕಟ್ಟಿಕೊಡುತ್ತದೆ.

ಶಿವರಾಮ ಕಾರಂತರ ಚಿಗುರಿದ ಕನಸು ಕಾದಂಬರಿಯ ಮುನ್ನುಡಿಯಲ್ಲಿಯೇ ಲೇಖಕರು ಹೇಳುವಂತೆ "ಬರಿಯ ಕೃಷಿ ಜೀವನದ ಚಿತ್ರಣವೇ ಇಲ್ಲಿನ ಮುಖ್ಯ ವಸ್ತು"( ಶಿವರಾಮ ಕಾರಂತ, ೨೦೦೭, ಮುನ್ನುಡಿ) ಎಂದು ಹೇಳುತ್ತಾರೆ. ಲೇಖಕರೇ ಹೇಳುವಂತೆ ಈ ಕತೆಯ ವಸ್ತು ಕೃಷಿ ಜೀವನವೇ ಆದರೂ ಕೃಷಿ ಜೀವನವನ್ನು ಅರಿಸಿಕೊಂಡು ದೆಹಲಿ, ಮುಂಬಯಿಯಂತಹ ಪಟ್ಟಣದಲ್ಲಿ ಬೆಳೆದ ಎಲೆಕ್ಟ್ರಿಕಲ್ ಇಂಜನಿಯರ್ ಓದಿದ ಶಂಕರ ಪಟ್ಟಣ ಬಿಟ್ಟು ಹಳ್ಳಿಗೆ ವಲಸೆ ಬರುವಲ್ಲಿನ ಭಾವನಾತ್ಮಕತೆ, ತುಡಿತಗಳು ಇಲ್ಲಿ ಪ್ರಮುಖವಾಗಿ ಮೂಡಿಬರುತ್ತವೆ. ಜಾಗತೀಕರಣದಂತಹ ಇತ್ತೀಚಿನ ದಿನಗಳಲ್ಲಿ ಹಳ್ಳಿಯಿಂದ ನಗರಕ್ಕೆ ವಲಸೆ ಹೋಗುವ ವಿದ್ಯಾವಂತರ ಜನಸಂಖ್ಯೆ ಹೆಚ್ಚಾಗಿದ್ದಾಗಲೂ ನಗರದಲ್ಲಿಯೇ ಓದಿ, ಬೆಳೆದ ಶಂಕರನು ಮಾತ್ರ ತನ್ನ ಪೂರ್ವಜರ ಊರು, ಕೃಷಿ, ವ್ಯವಸಾಯ ಸಂಬಂಧಗಳಿಗೆ ಹೆಚ್ಚು ಒತ್ತು ಕೊಡುತ್ತಾನೆ. "ನೌಕರಿಯನ್ನು ಬೆನ್ನಟ್ಟಿಕೊಂಡು ಊರಿಂದ ಊರಿಗೆ ಅಲೆಯುವ ಜೀವನ ಸೊಗಸಲ್ಲ"(ಅದೇ, ಪು.೨) ಎಂಬ ನಿರ್ಧಾರಕ್ಕೆ ಬರುತ್ತಾನೆ.

'ನೌಕರಿಯ ಹಂಗಿಗಾಗಿ ನೆಲದ ಹಂಗು ತೊರೆದವರು ನಾವು"(ಅದೇ, ಪು.೨೩) ಎಂಬ ಮನಸ್ಥಿತಿ ಯುಳ್ಳವನಾಗಿದ್ದ ಶಂಕರ ತಾನು ಬೆಳೆಯುತ್ತ ಹೋದಂತೆಲ್ಲ ತನ್ನ ಮೂಲ ಊರು ತಿಳಿದುಕೊಳ್ಳುವ ಹಂಬಲ ಹೆಚ್ಚಾಗುತ್ತ ಸ್ನೇಹಿತನ ಸಹಾಯದಿಂದ ಬಂಗಾಡಿಯನ್ನು ನೋಡು ವಂತಾಗುತ್ತದೆ. ಇದು ನೋಡುವ ಹಂಬಲಕಷ್ಟೇ ಉಳಿಯದೇ ಅಲ್ಲಿಯ ಕೃಷಿಯನ್ನು ನೋಡಿ

ವ್ಯವಸಾಯ ಮಾಡಬೇಕೆಂಬ ಹುಚ್ಚು ತಂದೆ, ತಾಯಿ ತಮ್ಮ ಜೊತೆಗೆ ತಾನು ಪ್ರೀತಿಸಿದ ವರಲಕ್ಷ್ಮಿಯನ್ನು ಸಹ ಬಿಟ್ಟು ಎಲ್ಲರ ವಿರೋಧದ ನಡುವೆಯು ಬಂಗಾಡಿಗೆ ಬಂದು ಸೇರುತ್ತಾನೆ. ತನ್ನ ಅಜ್ಜನ ತಂಗಿಯಾದ ಅಜ್ಜಿ ಇನ್ನು ಜೀವಂತವಾಗಿರುವುದನ್ನು ಕಂಡು ರೋಮಂಚನಗೊಳ್ಳುತ್ತಾನೆ. ಆ ಅಜ್ಜಿಯು ಸಹ ದತ್ತುವಿನ ಮೊಮ್ಮಗನೆಂದು ತಿಳಿದು ತಾನು ಜೀವಂತವಾಗಿರುವುದು ಸಾರ್ಥಕ ವಾಯಿತೆಂದು ಆನಂದ ಪಡುತ್ತಾಳೆ.

ಲೇಖಕರು ಇಲ್ಲಿನ ಸಂಬಂಧಿಗಳ ನಡುವಿನ ಪ್ರೀತಿ ಬಾಂಧವ್ಯಕ್ಕೆ ಕೊಟ್ಟಿರುವ ಒತ್ತು ಈ ಸಾಲುಗಳಿಂದಲೇ ತಿಳಿದುಬರುತ್ತದೆ. "ಮಗು ಇನ್ನೊಂದು ಕ್ಷಣಕ್ಕೆ ನನ್ನ ಜೀವ ಹಾರಿ ಹೋದರೆ ನನಗಿಷ್ಟು ಬೇಸರವಾಗದು ಈ ಗಳಿಗೆಗಾಗಿಯೇ ದೇವರು ನನ್ನನ್ನು ಉಳಿಸಿಕೊಂಡು ಬಂದ ಎಂದು ತೋರುತ್ತದೆ. ಯಾಕೆ ಎಲೆ ಉದುರಿದ ಮರದ ಕೊರಡಿನಂತೆ ಇಷ್ಟು ಕಾಲ ಬದುಕಿದ್ದೇನೆ ಎಂದೆನಿಸುತ್ತಿತ್ತು. ಈ ತನಕ, ತಿಳಿಯಿತು ನಾನು ಬದುಕಿದ್ದೇ ಲಕ್ಷ್ಮಣನ ಮೊಮ್ಮಗುವಾದ ನಿನ್ನನ್ನು ಕಾಣುವ ಯೋಗ್ಯವಿದ್ದದ್ದಕ್ಕೆ"(ಅದೇ, ಪು.೭೫) ಎಂದು ಹರ್ಷಿತರಾಗುತ್ತಾರೆ.

ದೆಹಲಿಯಂತ ನಗರದಲ್ಲಿ ಎಲೆಕ್ಟ್ರಾನಿಕ್ ಇಂಜಿನಿಯರ್ ಆದವನಿಗೆ ನಾನಾ ಕಡೆ ಕೆಲಸಗಳ ಅವಕಾಶ ಸಿಕ್ಕಾಗಲೂ ಶಂಕರ ಎಲ್ಲವನ್ನು ತೊರೆದು ಕೃಷಿ ಜೀವನವೇ ನನ್ನ ಅಂತಿಮ ನಿರ್ಧಾರವೆಂದುಕೊಳ್ಳುತ್ತಾನೆ ಕುಳಿತು ಇನ್ನು ಮಹಾರಾಷ್ಟ್ರದಲ್ಲೇ ಹುಟ್ಟಿದ ಶಂಕರ ತಾಯಿ ಹಳ್ಳಿಯ ಜೀವನವನ್ನೇ ಅಲ್ಲೆಗಳೆಯುವ ಐಷರಾಮಿ ಜೀವನಕ್ಕೆ ಜೋತು ಬಿದ್ದವಳಿಗೆ ಶಂಕರನ ಈ ನಿರ್ಧಾರ ಮನಸ್ತಾಪವನ್ನು ಉಂಟು ಮಾಡಿತ್ತು. ತಮ್ಮನಂತು ಈಗಾಗಲೇ ಪೈಲಟ್ ಆಫೀಸರ್‌ಗೆ ನೌಕರಿ ಗಳಿಸಿದ್ದು ತಾಯಿಗೆ ಚಿಕ್ಕ ಮಗನ ಮೇಲಿನ ವ್ಯಾಮೋಹ ಹೆಚ್ಚಿತ್ತು.

ಆದರೆ ಶಂಕರನಿಗೆ ಮಾತ್ರ ಈ ಕೃಷಿಯ ಹುಚ್ಚು ಹಳ್ಳಿಯ ಬದುಕು ತಂದೆ ತಾಯಿಯನ್ನು ಕಂಗೆಡೆಸಿತ್ತು. ಈ ನಿರ್ಧಾರದಲ್ಲಿ ಹೆಚ್ಚು ಕಂಗಾಲದವರು ತಂದೆ ಸುಂದರರಾಯರು. "ಕೃಷಿಯನಾಗುವುದೇ ಗದ್ದೆ ಉಳುವ ಕೆಲಸವೇ ಹೆಚ್ಚಿಗೆ ಬೆಳೆಯಿರಿ ಎಂಬ ಸರಕಾರದ ಪೋಸ್ಟರ್‌ಗಳನ್ನು ನೋಡಿ ಈ ಹುಚ್ಚು ಹಿಡಿಯತೇ ನಿನಗೆ"(ಅದೇ, ಪು.೧೦೪) ಎಂದಾಗ ಶಂಕರ್ ನಾನು ಇಂಜನಿಯರ್ ಮಾಡುವಾಗ ಕಾಶಿಗೆ ಹೋದಾಗಲೇ ರೈತರ ಜೀವನವನ್ನು ಕಂಡು ಅಂಥ ಜೀವನವನ್ನು ಮಾಡಬೇಕೆಂದಾಸೆಯಾಗಿತ್ತು. ಆದರೆ ಬಂಗಾಡಿಗೆ ಹೋಗಿ ಹಿರಿಯರು ಬಾಳಿ ಬದುಕಿದ ಭೂಮಿಯನ್ನು ಕಂಡ ಮೇಲಂತು ಅಸ್ಪಷ್ಟವಾದ ಆಸೆ ಬಲವಾದ ನಿರ್ಧಾರವಾಗಿದೆ ಎಂದು ಸ್ಪಷ್ಟವಾಗಿ ಹೇಳಿದ್ದ. ಆದರೂ ಶಂಕರನ ತಂದೆಗೆ "ಹಳ್ಳಿಯನ್ನು ಕಂಡಿದ್ದು ಅಜ್ಜಿಯನ್ನು ಮಾತನಾಡಿಸಿದ್ದು ಎಲ್ಲವು ಪ್ರಶಂಸೆ ಆದರೂ, ಈ ಬದಲಿಸಿದ ಯುಗಕ್ಕೆ ಸಮನಾಗಿ ನಾವು ಬಾಳಬೇಕೇ ಹೊರತು ಓದು ಕಲಿತವರು ತಿರುಗಿ ಆದಿವಾಸಿಗಳಂತೆ ಬದುಕುತ್ತೇವೆ ಎಂದರೆ

ನಡೆಯದ ಮಾತು ನಮ್ಮ ಜೀವನ ತೀರ ಬೇರೆಯಾಗಿದೆ. ಪ್ರಪಂಚದ ಸ್ಥಿತಿಗತಿಗಳ ಬದಲಿಸಿವೆ. ಹಳ್ಳಿಯ ಕೊಂಪೆಯನ್ನು ಬಿಟ್ಟು ನಗರವನ್ನು ಸೇರಿದ ನಾವು ತಿರುಗಿ ಆ ಜೀವನ ಮಾಡುವುದು ಸಾಧ್ಯವಿಲ್ಲ ನೀನು ಇಷ್ಟೆಲ್ಲ ಓದಿ ತಿಳಿದು ಕಲಿತು ಅವುಗಳೆಲ್ಲ ಇದ್ದೂ ಇಲ್ಲದವರಂತೆ ವರ್ತಿಸುವುದು ಏನು ಚೆಂದ? ಎಂದು ಪರಿಪರಿಯಾಗಿ ಹೇಳಿದರೂ"(ಅದೇ, ಪು.೧೦೦) ಶಂಕರ ಯಾರ ಮಾತನ್ನು ಕೇಳದೆ ಬಂಗಾಡಿಗೆ ಹೋಗಿ ನೆಲೆಯಾಗಿ ಭೂಮಿ ತೆಗೆದು ವೈಜ್ಞಾನಿಕ ರೀತಿಯಲ್ಲಿ ಬೇಸಾಯ ಮಾಡಿಯೇ ಬಿಡುತ್ತಾನೆ.

ಕೃಷಿಯ ಜೊತೆಗೆ ಜಾನುವಾರುಗಳಿಲ್ಲದೆ ಕೃಷಿಯಿಲ್ಲ. ದನ ಬರಡಾದರೆ ನೆಲವೂ ಬರಡು, ಎಂಬುದನ್ನು ಅರಿಯುತ್ತಾನೆ. ಹಳ್ಳಿಯಲ್ಲಿನ ಅಜ್ಜಿ, ರಂಗರಾಯರ ಮಗಳು ಶ್ರೀಮತಿ ಹೇಗೆ ನಾನಾ ಸಂಬಂಧಗಳ ಪ್ರೀತಿಯೊಂದಿಗೆ ಬೆರೆಯುತ್ತಾನೆ. ನಂತರದಲ್ಲಿ ಉಂಟಾಗುವ ಕಾಯಿಲೆಯಿಂದ ಅಜ್ಜಿ, ಶ್ರೀಮತಿ, ರಂಗರಾಯರ ಸಾವು ಶಂಕರನನ್ನು ಮತ್ತೇ ಒಂಟಿಯನ್ನಾಗಿಸುತ್ತದೆ. ಕತೆಯ ಕೊನೆಯಲ್ಲಿ ಹಳ್ಳಿಯ ಜೀವನ ಮತ್ತು ಕೃಷಿಯನ್ನು ವಿರೋಧಿಸಿದ ತಂದೆ ಸುಂದರರಾಯರು ಮತ್ತು ಪ್ರೀತಿಸಿದ ವರಲಕ್ಷ್ಮಿ ಶಂಕರನೊಂದಿಗೆ ಹಳ್ಳಿಯಲ್ಲಿ ಬದುಕಲು ಬಂದು ಇಲ್ಲೇ ನೆಲೆಯಾಗುತ್ತಾರೆ. ತಂದೆ ಮಗನ ಕೆಲಸಗಳನ್ನು ಕಂಡು ಸಂತೋಷಪಡುತ್ತಾರೆ. ವರಲಕ್ಷ್ಮಿಯೂ ಸಹ ಶಂಕರನಿಗೆ ಸಹಾಯವಾಗಲೆಂದು ಒಂದಿಷ್ಟು ವೈದ್ಯಕೀಯ ವಿದ್ಯೆಯನ್ನು ಕಲಿತು ಹಳ್ಳಿಯ ಜನಕ್ಕೆ ನೆರವಾಗುತ್ತಾಳೆ. ಆದರೆ ಶಂಕರ ತಾಯಿ ಮಾತ್ರ ಭಿನ್ನ ಭಾವನೆಗಳುಳ್ಳ ಪಾತ್ರವಾಗಿ ಕಂಡುಬರುತ್ತಾಳೆ. ಕೊನೆಗೂ ನಗರವನ್ನು ಬಿಟ್ಟು ಹಳ್ಳಿಗೆ ಬರದೇ ಹೋಗುತ್ತಾಳೆ.

ಒಟ್ಟಾರೆಯಾಗಿ ಲೇಖಕರು ಈ ಕತೆಯಲ್ಲಿ ಸಂಬಂಧಗಳ ಮೌಲ್ಯಗಳಿಗೆ ಹೆಚ್ಚು ಒತ್ತುಕೊಟ್ಟಿದ್ದಾರೆ. ತನ್ನ ಓದನ್ನು ಹಳ್ಳಿಯ ವ್ಯವಸಾಯಕ್ಕೆ ಉಪಯೋಗಿಸಿಕೊಂಡು ಹಳ್ಳಿಯ ಜನರಿಗೆ ಸಹಾಯ ಮಾಡುವ ಮನೋಭಾವದ ಮೌಲ್ಯವನ್ನು ಎತ್ತಿ ಹಿಡಿಯುತ್ತಾರೆ. ಇಲ್ಲಿಯ ಮೂರು ತಲೆಮಾರಿನ ಮನೋಭಾವನೆಗಳು ಭಿನ್ನ ಭಿನ್ನವಾಗಿ ಕಾಣಿಸಿಕೊಳ್ಳುತ್ತಿದೆ. ಹಳ್ಳಿಯಿಂದ ನಗರಕ್ಕೆ ಉದ್ಯೋಗಕ್ಕಾಗಿಯೂ ವೈಷ್ಯಮಕ್ಕಾಗಿಯೂ ಬಂದ ತಾತನ ವಲಸೆ ಮೊಮ್ಮಗ ತಿರುಗಿ ತಾತನ ಹುಟ್ಟಿದ ಊರಿಗೆ ಎಳೆದುಕೊಂಡು ಹೋಗುವಲ್ಲಿಗೆ ಸಾಗುತ್ತದೆ.

ಶಂಕರನ ಮನಸ್ಸಿನಲ್ಲಿ ಸುಪ್ತವಾಗಿ ಬೆಳೆಯುತ್ತಿದ್ದ ತನ್ನ ಮೂಲ ನೆಲೆಯ ಶೋಧನೆಯ ಹಂಬಲ ಸಂವೇದನಾತ್ಮಕವಾಗಿ ಮೂಡಿಬಂದಿದೆ. ಲೇಖಕರು ವಲಸೆಯ ಹಿನ್ನೆಲೆ ಪರಿಣಾಮಗಳನ್ನು ಹೆಚ್ಚು ಚಿತ್ರಿಸಿರುವುದು ಕಂಡುಬರುತ್ತದೆ.

ಹೀಗೆ ಕತೆಯ ಅರ್ಧ ಭಾಗ ಶಂಕರ ದೆಹಲಿ, ಮಹಾರಾಷ್ಟ್ರ, ಮುಂಬಯಿ ನಗರಗಳಲ್ಲಿ ಬದುಕಿದ ಜಂಜಾಟ, ಗೊಂದಲ, ಆಂತಕಗಳು ಕಂಡು ಬರುತ್ತವೆ. ಈ ನಡುವೆ ತನ್ನ ಊರು

ತನ್ನ ಮನೆಯೆಂಬ ತುಡಿತ ಹಂಬಲಗಳೇ ಶಂಕರ ಹಳ್ಳಿಯ ಜೀವನಕ್ಕೆ ಕಾಲಿಡಲು ಪ್ರೇರಣೆಯಾಗುತ್ತವೆ. ಹಾಗೆಯೆ ಕೊನೆಗೆ ಚಿಗುರಿದ ಕನಸನ್ನು ಈಡೇರಿಸಲು ಹೊರಟ ಶಂಕರ ಹಳ್ಳಿಗೆ ಹೋಗಿ ಭೂಮಿಯಲ್ಲಿ ವೈಜ್ಞಾನಿಕವಾಗಿ ಬೇಸಾಯ ಮಾಡುತ್ತಾ ತನ್ನ ಓದಿನ ಗ್ರಹಿಕೆಯಿಂದಲೇ ಹಳ್ಳಿಯಲ್ಲಿಯೂ ಸಹ ತನ್ನ ಬುದ್ಧಿವಂತಿಕೆಯನ್ನು ಬೆಳೆಸಿಕೊಂಡು ವಿದ್ಯುತ್ ಉತ್ಪಾದನೆ, ಕಾಡಿನ ಮರಗಿಡಗಳ ರಕ್ಷಣೆ, ಜಾನುವಾರುಗಳ ಸಾಗಣಿಕೆಯಂತಹ ಕೆಲಸಗಳನ್ನು ಮಾಡುತ್ತಾ ಹಳ್ಳಿಯ ಜನರಿಗೆ ಮಾರ್ಗದರ್ಶಕ ನಾಗುತ್ತಾನೆ ಮತ್ತು ತಂದೆ, ವರಲಕ್ಷ್ಮಿಯನ್ನು ಹಳ್ಳಿಗೆ ಕರೆಸಿಕೊಳ್ಳುವಲ್ಲಿ ಕತೆ ಮುಕ್ತಾಯವಾಗುತ್ತದೆ.

ಇಂದಿನ ಆಧುನಿಕ ಜೀವನದಲ್ಲಿ ವ್ಯವಸಾಯವನ್ನು ತೊರೆದು ನಗರಗಳಿಗೆ ವಲಸೆ ಹೋಗಿ ಓದಿ ಉನ್ನತ ಉದ್ಯೋಗವನ್ನು ಪಡೆದುಕೊಳ್ಳುತ್ತಿರುವಂತಹ ಸಮಯದಲ್ಲಿ, ಕೃಷಿ, ವ್ಯವಸಾಯ ನಾಶವಾಗುತ್ತಿರುವ ಹಂತದಲ್ಲಿ ಈ ಕಾದಂಬರಿ ಹೆಚ್ಚು ಪ್ರಸ್ತುತವೆನಿಸುತ್ತದೆ ಮತ್ತು ಲೇಖಕರ ಆಶಯವೂ ಇದಾಗಿದೆ.

## ೫.೩. ಊರಿನ ವಲಸೆ

ಊರು ಹಲವು ಕುಟುಂಬಗಳ ಸಮೂಹ ಎಂದು ಕೊಂಡರೆ ಹಲವು ಕುಟುಂಬಗಳು ಏಕಕಾಲಕ್ಕೆ ಊರನ್ನು ತೊರೆಯಬೇಕಾದ ಸಂದರ್ಭವನ್ನು ಇಲ್ಲಿ ಕಾಣಬಹುದು ಒಂದೇ ಕಾಲಕ್ಕೆ ಒಂದೇ ಕಾರಣಕ್ಕೆ ಈ ಸಂದರ್ಭಗೋಚರಿಸಬಹುದು ಇಲ್ಲವೇ ತಂಡ ತಂಡಗಳಾಗಿ ಕುಟುಂಬಗಳು ವಲಸೆ ಹೋಗುವ ಪೂರ್ವಕ ಇಡೀ ಊರೇ ಖಾಲಿಯಾಗಬಹುದು ಇಂತಹ ಸಂದರ್ಭಕ್ಕೆ ಕಾರಣಿಭೂತವಾದ ವಿಭಿನ್ನ ಅಂಶಗಳು ತತ್ಪರಿಣಾಮವಾಗಿ ಉಂಟಾಗುವ ಪರಿಣಾಮಗಳು ಇವನ್ನೆಲ್ಲ ಊರಿನ ಸಾಂಧರ್ಭಿಕತೆಯೊಂದಿಗೆ ಹೆಣೆದುಕೊಂಡ ವಿಭಿನ್ನ ಕಥಾ ಹಂದರಗಳನ್ನು ಇಲ್ಲಿ ಪರಿಶೀಲಿಸಲಾಗುವುದು. ಮೊದಲಿಗೆ

ಡಾ.ರಂ.ಶ್ರೀ ಮುಗಳಿರವರ 'ಅನ್ನ' ಕಾದಂಬರಿ ಶೀರ್ಷಿಕೆಯೇ ಹೇಳುವಂತೆ ದೇಶದ ಲಕ್ಷಾಂತರ ಜನ ವಿಜಾಪುರ ಹಾಗೂ ಬಂಗಾಲದಲ್ಲಿ ಸಂಭವಿಸಿದ ಬರಗಾಲದ ಸಮಸ್ಯೆಯಿಂದಾಗಿ ತುತ್ತು ಅನ್ನವನ್ನು ಅರಸಿಕೊಂಡು ಗುಳೆ ಬಂದವರ ಯಾತನೆಯನ್ನು ಲೇಖಕರು ಈ ಕಾದಂಬರಿ ಮೂಲಕ ಕಟ್ಟಿಕೊಡುತ್ತಾರೆ. ಲೇಖಕರು ಮುನ್ನುಡಿಯಲ್ಲಿ ಹೇಳಿಕೊಳ್ಳುವಂತೆ ವಿಜಾಪುರ ಹಾಗೂ ಬಂಗಾಲದಲ್ಲಿಯ ಬರಗಾಲದ ಚಿತ್ರಣವು ಈ ಕಾದಂಬರಿಯ ಮಹತ್ವದ ಭಾಗವೇನು ನಿಜ. ಮುಖ್ಯವಾಗಿ ಅನ್ನದ ಆಪತ್ತಿ ನಾಡಿಗೆ ಬಂದಾಗ, ಬೇರೆ ಜನ ವರ್ಗಗಳು ವ್ಯಕ್ತಿಗಳು ತಳೆದ ಧೋರಣೆ ಮತ್ತು ನಡೆದ ರೀತಿ ಇದನ್ನು ಚಿತ್ರಿಸುವುದೇ ಇಲ್ಲಿ ಉದ್ದೇಶವಾಗಿದೆ ಎಂದು ಹೇಳಿ ಕೊಳ್ಳುತ್ತಾರೆ. ಇಲ್ಲಿ ಪ್ರಮುಖವಾಗಿ ಬಡತನ, ಹಸಿವು, ದೇಶಪ್ರೇಮ, ಕರುಣೆ, ಅನುಕಂಪ, ಗುಳೆ, ಲೈಂಗಿಕ ದೌರ್ಜನ್ಯ, ಸ್ವಾರ್ಥದಂತಹ ಹಲವು ಅಂಶಗಳು ಕಾದಂಬರಿಗೆ ವಸ್ತುವಾಗಿ ಮೂಡಿಬಂದಿದೆ.

ಈ ಕಾದಂಬರಿಯ ಕಥಾ ನಾಯಕ ಅಮೃತ್ ಒಂದು ಬಡ ಕುಟುಂಬದಲ್ಲಿ ಜನಿಸಿದಾತ. ತಂದೆ ಶಂಭುರಾಯರು ತಮ್ಮ ಕಷ್ಟವನ್ನೆಲ್ಲಾ ಬದಿಗಿಟ್ಟು ಇದ್ದ ಹೊಲ ಮಾರಿ ಅವನನ್ನು ಬೊಂಬಾಯಿನ ಗ್ರಾಂಟ್ ಮೆಡಿಕಲ್ ಕಾಲೇಜಿಗೆ ಕಳುಹಿಸುತ್ತಾರೆ. ಮಗ ಡಾಕ್ಟರಾಗಿ ಬಂದರೆ ಮನೆಯ ಕಷ್ಟವೆಲ್ಲಾ ತೀರಿ ಮಗಳ ಮದುವೆಯನ್ನು ಮಾಡಬಹುದೆಂಬ ಆಸೆ ಇವರದಾಗಿತ್ತು. ಆದರೆ ಮನೆಯ ಕಷ್ಟಕ್ಕಿಂತ ದೇಶದ ನೋವೆ ಹೆಚ್ಚು ಎಂದು ತಿಳಿದಂತ ಅಮೃತನಿಗೆ ಬಂಗಾಲ ಪ್ರಾಂತದ ಮಿದನಾಪುರ ಮತ್ತು ೨೪ ಪರಗಣ ಜಿಲ್ಲೆಗಳಲ್ಲಿ ಅಕ್ಟೋಬರ್ ತಿಂಗಳಲ್ಲಿ ಬೀಸಿದ ಭಯಂಕರ ಬಿರುಗಾಳಿಯ ಹಾವಳಿಯಿಂದ ಹತ್ತಾರು ಸಾವಿರ ಜನ, ಲಕ್ಷಾಂತರ ದನ ಸತ್ತಿದ್ದಲ್ಲದೆ ಅಸಂಖ್ಯ ಜನರು ಮನೆಯಿಲ್ಲದೆ ಕೂಳಿಲ್ಲದೆ, ನಿರಾಶ್ರಿತರಾಗಿದ್ದರೆ, ಮಲೇರಿಯಾ–ಮಾರಿಕಾ ಮುಂತಾದ ರೋಗಗಳಿಂದ ಬಳಲುತ್ತಿದ್ದಾರೆ. ಅವರ ಶುಶ್ರೂಷೆಗಾಗಿ ಸುಪ್ರಸಿದ್ಧವಾದ ರಾಮಕೃಷ್ಣ ಮಠದವರು ಹೊರಡಿಸಿದ ವೈದ್ಯಕೀಯ ಕೇಂದ್ರಗಳಲ್ಲಿ ಕೆಲಸ ಮಾಡಲು ಸೇವಾತತ್ವರಾದ ಡಾಕ್ಟರರು ಬೇಕಾಗಿದ್ದಾರೆ ಎಂಬ, ವಿಶೇಷವಾಗಿ ತರುಣರೂ ಉತ್ಸಾಹಿಗಳೂ ಕೂಡಲೇ ಹೊರಟು ಬರಬೇಕೆಂದು ಒಂದೊಂದು ದಿನ ತಡವಾದಂತೆ ನೂರಾರು ಜನರ ಪ್ರಾಣಕ್ಕೆ ಎರವಾಗಬಹುದೆಂಬ" (ಡಾ.ರಂ.ಶ್ರೀ ಮುಗಳಿ, ೨೦೦೯, ಪು.೧೩) ಪತ್ರಿಕೆಯಲ್ಲಿ ಬಂದ ಸುದ್ದಿಯನ್ನು ನೋಡಿ ಪರೀಕ್ಷೆ ಬರಿಯುವುದನ್ನೇ ತೊರೆದು ದೇಶದ ಸಂಸಾರದಲ್ಲಿ ಬೆರೆತವನೇ ನಿಜವಾದ ಮನುಷ್ಯನೆಂದು ತಿಳಿದು ಯಾರಿಗೂ ಹೇಳದೇ ಕಲ್ಕತಗೆ ಹೋಗಿ ಅಲ್ಲಿ ಅನಾರೋಗ್ಯದಿಂದ ನರಳುವ ಜನರ ಸೇವೆಗೆ ನಿಲ್ಲುತ್ತಾನೆ.

ಇದಷ್ಟೇ ಅಲ್ಲದೇ ಬರಗಾಲದಿಂದ ಮನೆ, ಹೊಲ ಎಲ್ಲವನ್ನು ಕಳೆದುಕೊಂಡು ವಯಸ್ಸಾದ ವರನ್ನು ಊರಲ್ಲಿಯೇ ಬಿಟ್ಟು ಹೊಟ್ಟೆಪಾಡಿಗಾಗಿ ಕೆಲಸವನ್ನು ಹುಡುಕಿಕೊಂಡು ಗುಳೆ ಬಂದ ಜನರ ಸಹಾಯಕ್ಕೆ ನಿಲ್ಲುತ್ತಾನೆ. ನೀವು ಗುಳೇ ಯಾಕೆ ಹೋದಿರಿ? ಎಲ್ಲೆಲ್ಲಿಗೆ ಹೋದಿರಿ? ಅಲ್ಲಿ ದಗದ ಇತ್ತೇನು?"(ಡಾ.ರಂ.ಶ್ರೀ ಮುಗಳಿ, ೨೦೦೯, ಪು.೧೦೬) ಎಂಬ ಪ್ರಶ್ನೆಗಳಿಗೆ ಒಂದೊಂದು ಕುಟುಂಬದ ಕತೆಯು ವ್ಯಥೆಯಾಗಿ ಮೂಡಿ ಬರುತ್ತದೆ. ಉದಾ: ಇಲ್ಲಿಯ ಒಂದು ಪಾತ್ರ ತಮ್ಮ ಗುಳೆ ಹೋದ ಕತೆಯನ್ನು ಹೇಳುವ ಸಂದರ್ಭವನ್ನು ನೋಡಬಹುದು. "ಅಮೃತಪ್ಪ ಏನ ಹೇಳಲಿ ನಮ್ಮ ಗೋಳು? ಮಾನಮ್ಮಿ ಹೊತು, ದೀಪಳಿಗೆ ಬಂತು, ಮಳೆ ಸುದ್ದಿ ಇಲ್ಲದಂಗಾತು, ಮನ್ಯಾಗಿನ ಓಟೂ ಕಾಳು ಕಡ್ಡಿ ತಿಂದು ಕೂತಿವಿ, ಹೊಲದಾಗ ದಗದಿಲ್ಲ, ಹ್ವಾರೇ ಇಲ್ಲಿ ಹೊಟ್ಟೇಗೇನು ಕೇರು ಹಕ್ಕೋದ್ಯೆತೆ? ಊರಾಗಿನ ಮಂದೆಲ್ಲಾ ಬಾಯಿ ಬಿಡಾಕ ಹತ್ಯಾರ, ದನಕರ, ಮೇವಿಲ್ಲದೆ, ನೀರಿಲ್ಲದೆ ಕಣ್ಣಾಗ ಜೀವ ಹಿಡಕೊಂಡು ನಿಂತವು. ಸತ್ತ ಹಳ್ಳಾಗ ಇರವಿ ಸಾಲಿನಂಗ ಮನಾರೆ ಜನ ಗುಳೆ ಹೊಂಟತಿ, ಮಲನಾಡ ಸೀಮ್ಯಾಗ ದಗದ ಸಿಗತತಿ, ಕಾಳ ಸಿಗತತಿ ಅಂತ ಹೇಳಿ ಊರೆಲ್ಲ ಎಬ್ಬಿಸಿದರೋ, ಎಪ್ಪ ಬ್ಯಾಟೆ ಎಬ್ಬಿಸುಗಲೆ, ದನಕರ ಕಟ್ಟಿಗೊಂಡ ಮುದಕರ್ನ, ತದಕರ್ನ

ಹಿಂದ ಬಿಟ್ಟು ಹೊರಟೇವು ಕುರುಡರ ಬೆನ್ನು ಹತ್ತಿ ಕುರುಡರು ಹೊಂಟಾಂಗ"(ಡಾ.ರಂ.ಶ್ರೀ ಮುಗಳಿ, ೨೦೦೯, ಪು.೧೦೬) ಎಂಬ ಮಾತು ಕೇಳಿಬರುತ್ತದೆ.

ದಾರಿಯಲ್ಲಂತೂ ಬಾಣಂತಿಯು ನಡೆಯಲು ಆಗದೇ ಹೊಟ್ಟೆಗೆ ಊಟವಿಲ್ಲದೆ ಸಂಕಟಪಡುತ್ತಿದ್ದರೆ ಚಿಕ್ಕಮಕ್ಕಳು ಸಣ್ಣ ಕೂಸುಗಳು ಕುಡಿಯಲು ಹಾಲಿಲ್ಲದೆ ಕಿರುಚುವ ದೃಶ್ಯಗಳು ಸಾಮಾನ್ಯವಾಗಿತ್ತು. ಹೀಗೆ ನಡೆದು ನಡೆದು ಹೊಟ್ಟೆಯಲ್ಲಿ ಊಟವಿಲ್ಲದೆ ಮೈಯಲ್ಲಿ ಶಕ್ತಿಯಿಲ್ಲದೆ ಕೂಲಿ ಇರುವ ಕಡೆ ದುಡಿದು ತಿನ್ನಬೇಕೆಂದು ರೈಲುಗಾಡಿಯಲ್ಲಿ ಟಿಕೇಟ್ ಇಲ್ಲದೆ ಪ್ರಯಾಣ ಮಾಡಿದ್ದಕ್ಕಾಗಿ ಪೊಲೀಸರು ಅಮಾನವೀಯತೆಯಿಂದ ನಡೆದುಕೊಳ್ಳುವ ರೀತಿ ಹೇಳತೀರದಾಗಿತ್ತು. ಸರ್ಕಾರ ಹೇಗೆ ಗುಳೆ ಬಂದ ಜನಕ್ಕೆಂದು ಬರಗಾಲ ಕಾಮಗಾರಿಯೆಂದು ಮಾಡಿ ಕೂಲಿ ಕೆಲಸವೇನು ಕೊಟ್ಟಿದ್ದರೂ ಆದರೆ ಅಲ್ಲಿಯ ಮೇಲ್ವಿಚಾರಕರಿಗೆ ನೋಡಿಕೊಳ್ಳುವ ವ್ಯಕ್ತಿಗಳಿಂದ ಇಲ್ಲಿಯ ಜನಕ್ಕೆ ಶೋಷಣೆ ತಪ್ಪಿರಲಿಲ್ಲ. ಕೆಲಸ ಮಾಡಿ ವಾರಗಟ್ಟಲೇ ಕಳೆದರೂ ಸರಿಯಾಗಿ ಕೂಲಿ ಕೊಡದೇ ಸತಾಯಿಸುತ್ತಿದ್ದರು. ಇದಷ್ಟೇ ಅಲ್ಲದೆ, ಬರಗಾಲದಿಂದಾಗಿ ಎಲ್ಲರನ್ನು ಕಳೆದುಕೊಂಡು ದುಡಿಯಲು ಬಂದ ಹೆಣ್ಣುಮಕ್ಕಳ ಮೇಲೆ ಲೈಂಗಿಕ ಶೋಷಣೆ ನಡೆಯುತ್ತಲೇ ಇತ್ತು. ಇದಕ್ಕೆ ಈ ಕತೆಯಲ್ಲಿ ಬರುವ ಗ್ಯಾಂಗರ ಶೋಷಣೆಗೆ ಒಳಗಾಗುವ ಸಂಗವ್ವ ಎನ್ನುವ ಪಾತ್ರ ಸಾಕ್ಷಿಯಾಗುತ್ತದೆ.

ಹೀಗೆ ವಲಸೆಯ ಪ್ರೇರಣೆ, ಪ್ರಕ್ರಿಯೆ, ಪರಿಣಾಮದಂತಹ ಸಂದರ್ಭವನ್ನು ಲೇಖಕರು ಸಂವೇದನಾತ್ಮಕವಾಗಿ ಕಟ್ಟಿಕೊಡುತ್ತಾರೆ. ಒಂದು ರೀತಿ ಪ್ರಾಕೃತಿಕ ವೈಪರಿತ್ಯದಿಂದಾಗಿ ಬರಗಾಲ ಬಂದು ಜನರು ಗುಳೆ ಎಬ್ಬಿಸುವಂತೆ ಮಾಡಿ ಶೋಷಣೆಗೈದರೆ, ಗುಳೆ ಬಂದ ನಂತರದಲ್ಲಿ ಶ್ರೀಮಂತರು, ಪೊಲೀಸರು, ಸರ್ಕಾರಿ ಅಧಿಕಾರಿಗಳು ತಮ್ಮ ಸ್ವಾರ್ಥ ಸಾಧನೆಗಾಗಿ, ಹಲವು ರೀತಿಯಲ್ಲಿ ಶೋಷಣೆಗೆ ಒಳಪಡಿಸುತ್ತಾರೆ. ಆದರೆ ಇಲ್ಲಿ ಬರುವ ರಾಮಕೃಷ್ಣ ಮಠದಂತಹ ಮಠಗಳು ಗುಳೆ ಬಂದ ಜನಕ್ಕೆ ಅನ್ನಛತ್ರವನ್ನು ಏರ್ಪಡಿಸಿ ಸಹಾಯ ಮಾಡುತ್ತವೆ. ಹೀಗೆ ಕಥಾನಾಯಕ ಅಮೃತ ತನ್ನ ಓದನ್ನು ಅರ್ಧಕ್ಕೆ ನಿಲ್ಲಿಸಿ ಜನರ ಸೇವೆಗೆಂದು ನಿಂತು ಹಲವು ರೀತಿಯ ಅನುಭವಗಳನ್ನು ಪಡೆಯುತ್ತಾನೆ. ಆದರೆ ತನ್ನ ಸಂಸಾರದಲ್ಲಿ ಹೊಟ್ಟೆಗೆ ಇಲ್ಲದೆ ಅನಾರೋಗ್ಯದಿಂದ ಸಾಯುತ್ತಿರುವವರ ಸಂಕಷ್ಟ ನೋಡಲಾಗಲಿಲ್ಲ ಎಂಬ ಕೊರಗಿದ್ದರೂ ಕೊನೆಗೆ ತಂದೆಯ ಇಚ್ಛೆಯಂತೆ ಶ್ರೀಮಂತ ಹುಡುಗಿಯನ್ನು ಮದುವೆಯಾಗಿ ತಂಗಿಯ ಮದುವೆ ಮಾಡಿ ಸಂಸಾರವನ್ನು ಒಂದು ಹಂತಕ್ಕೆ ತರುತ್ತಾನೆ. ಕೊನೆಗೆ ತಂದೆ ಏನೇ ಒತ್ತಾಯಿಸಿದರೂ ತನ್ನ ಶಿಕ್ಷಣ ವನ್ನು ಮುಂದುವರೆಸಲಾಗದೆ, ನೊಂದ ಜನಕ್ಕೆ ಆಸರೆಯಾಗಿ ತನ್ನ ಬದುಕನ್ನು ಮುಡುಪಾಗಿಡುತ್ತಾನೆ.

ಒಟ್ಟಾರೆಯಾಗಿ ಹೇಳುವುದಾದರೆ ಬರಗಾಲದಂತಹ ಸಮಸ್ಯೆಯಿಂದ ದೇಶದ ಲಕ್ಷಾಂತರ ಜನ ಹೊಟ್ಟೆಪಾಡಿಗಾಗಿ ತಮ್ಮ ಹಳ್ಳಿಗಳನ್ನು ತೊರೆದು ನಗರಗಳಿಗೆ ಅನಿವಾರ್ಯವಾಗಿ ವಲಸೆ

ಬಂದಾಗ ಉಂಟಾಗುವ ಹಲವು ಬಗೆಯ ಕಷ್ಟಗಳನ್ನು ಲೇಖಕರು ಸಂವೇದನಾತ್ಮಕವಾಗಿ ಚಿತ್ರಿಸಿದ್ದಾರೆ. ಹೀಗೆ ನೊಂದ ಜನಕ್ಕೆ ಕರುಣೆ, ಮಾನವೀಯತೆ ಇಲ್ಲವೇ ತಮ್ಮ ನೌಕರಿ, ಸಂಸಾರ, ಓದು ಎಂಬ ಸ್ವಾರ್ಥಕ್ಕೆ ಬದುಕುವ ಜನರನ್ನು ಈ ಕೃತಿ ಎಚ್ಚರಿಸುವಂತೆ ಮಾಡುತ್ತದೆ. ಅದರಲ್ಲೂ ಬದುಕನ್ನು ಅರಸಿ ವಲಸೆ ಬಂದವರ, ಬಡವರ ಬದುಕು ಇಲ್ಲಿ ಹೆಚ್ಚಾಗಿ ಶ್ರೀಮಂತರ, ಪೊಲೀಸರ, ಅಧಿಕಾರಿಗಳ ದರ್ಪ, ಅನ್ಯಾಯ, ವಂಚನೆಯಿಂದ ಹೇಗೆ ದುರಂತಕ್ಕೀಡಾಗುತ್ತದೆ ಎಂಬುದನ್ನು ನೋಡಬಹುದು. ಹಾಗೆಯೇ ಸರ್ಕಾರ ಪೋಷಿಸುವ ಬರಗಾಲ ಕಾಮಗಾರಿಗಳಂತಹ ಯೋಜನೆಗಳ ವೈಫಲ್ಯ ಮತ್ತು ಅಧಿಕಾರಿಗಳ ಭ್ರಷ್ಟತೆ, ನಿರ್ಲಕ್ಷ್ಯವನ್ನು ಈ ಕೃತಿ ಬಯಲಿಗೆಳೆಯುತ್ತದೆ. ಹಾಗೂ ನೊಂದು ಬಂದ ಜನಕ್ಕೆ ತುತ್ತು ಅನ್ನ ನೀಡುವ ಮೂಲಕ ಇಲ್ಲಿಯ ಮಠಗಳು ಮಾಡುವ ಕಾರ್ಯ ಸ್ಮರಣೀಯವಾಗಿ ಮೂಡಿಬರುತ್ತದೆ. ಬರಗಾಲದಿಂದಾಗಿ ಮನುಷ್ಯರ ಮೂಲಭೂತ ಅಂಶಗಳಾದ ಹೊಟ್ಟೆ, ಬಟ್ಟೆ, ವಸತಿಯನ್ನು ಅರಸಿ ಬಂದ ವಲಸಿಗರ ದುರಂತಮಯ ಬದುಕನ್ನು ಇಲ್ಲಿ ಕಾಣಬಹುದಾಗಿದೆ.

ಬರಗೂರು ರಾಮಚಂದ್ರಪ್ಪರವರ ಕ್ಷಾಮ ಕತೆಯನ್ನು ನೋಡುವುದಾದರೆ ಕತೆಯ ಶೀರ್ಷಿಕೆಯೇ ಹೇಳುವಂತೆ ಬರಗಾಲಕ್ಕೆ ತುತ್ತಾದ ಜನರ ಸ್ಥಿತಿಗತಿಯನ್ನು ತಿಳಿಸುತ್ತದೆ. ಇದರ ಜೊತೆಗೆ ಬರಗಾಲಕ್ಕೆ ತುತ್ತಾಗಿ ನಗರಕ್ಕೆ ಗುಳೆ ಹೋದವರ ಬವಣೆ, ಗುಳೆ ಹೋಗಲೂ ದುಡ್ಡಿಲ್ಲದವರ ಲೈಂಗಿಕ ಶೋಷಣೆ ಅಸಹಾಯಕತೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಈ ಕತೆಯ ಮುನ್ನುಡಿಯಲ್ಲಿ ಲೇಖಕರೇ ಹೇಳುವಂತೆ "ಗ್ರಾಮೀಣ ಬದುಕನ್ನು ವಿಶಿಷ್ಟ ರೀತಿಯಲ್ಲಿ ಶೋಧಿಸುತ್ತದೆ ಮತ್ತು ನಮ್ಮ ಹಳ್ಳಿಗಳು ಈಗ ನಿಂತ ನೀರಾಗಿಲ್ಲ ಬದಲಾಗುತ್ತಿರುವ ನೆಲೆಗಳಾಗಿವೆ. ಏಕಮುಖ ನೆಲೆಯಿಂದ ಮುಖಾಮುಖಿಗೆ ಒಳಗಾಗುತ್ತವೆ. ನನ್ನ ಗ್ರಾಮೀಣ ಸಂವೇದನೆ ಮತ್ತು ಚಿಂತನೆಗಳು ಒಗ್ಗೂಡಿನ ಕೃತಿಯಾಗಿದ್ದು ನನ್ನ ಕಥಾ ಸಾಹಿತ್ಯದ ಆಶಯ ಅಭಿವ್ಯಕ್ತಿ ವಿನ್ಯಾಸಗಳ ಪ್ರತಿನಿಧಿಕತೆ ಇಲ್ಲಿದೆಯೆಂದು" (ಬರಗೂರು ರಾಮಚಂದ್ರಪ್ಪ, ೨೦೦೧, ಮುನ್ನುಡಿ) ಹೇಳುವ ಲೇಖಕರ ಆಶಯ ಗ್ರಾಮೀಣ ಜನರ ಸಂವೇದನೆ ಮತ್ತು ಬದುಕಿನಲ್ಲಾದ ಬದಲಾವಣೆಯ ಅಂಶಗಳ ಚಿಂತನೆಗಳ ಪ್ರಸ್ತಾಪಿಸುವುದಾಗಿದೆ. ಕತೆಯ ನಾಯಕ ರಾಮನ ಕುಟುಂಬದ ಬದುಕಿನ ವೇದನೆ ಈ ಕತೆಯಲ್ಲಿ ಪ್ರಧಾನವಾಗಿ ಮೂಡಿ ಬರುತ್ತದೆ. ಮನೆಯ ಯಜಮಾನ ಅಸ್ತಮಾದಿಂದ ನರಳುತ್ತಿರುವಾಗ ದುಡಿಯಲಾಗದ ಸ್ಥಿತಿಯಲ್ಲಿ ಅನಾರೋಗ್ಯದಿಂದ ನರಳುವಂತಾದಾಗ ಆ ಮನೆಯ ಜವಾಬ್ದಾರಿಯನ್ನು ಹೆಂಡತಿ ಚೆನ್ನಿಯೇ ವಹಿಸಿಕೊಳ್ಳುತ್ತಾಳೆ.

ಆ ಕಡೆ ಕೆಲಸವೂ ಇಲ್ಲದೇ ಈ ಕಡೆ ಗುಳೆ ಹೋಗಲೂ ಆಗದೆ ಉಪವಾಸ, ವನವಾಸದಿಂದ ಕಾಲ ಕಳೆಯುವ ಘಟನೆಗಳು ದುಃಖತಪ್ತವಾಗಿದ್ದವು. ಈ ಸಮಸ್ಯೆಯ ಜೊತೆಗೆ ಮದುವೆಯಾಗಿ

ಸುಮಾರು ವರ್ಷಗಳೇ ಆದರೂ ಮಕ್ಕಳಗಲಿಲ್ಲವೆಂಬ ಕೊರಗು, ಕಿತ್ತು ತಿನ್ನುವ ಬಡತನ, ಬದುಕನ್ನು ಬರ್ಬರವನ್ನಾಗಿಸಿತ್ತು.

ಇನ್ನು ಗಂಡನ ಪರಿಸ್ಥಿತಿಯಂತೂ ಹೇಳತೀರದು. ಒಂದೊತ್ತಿನ ಊಟಕ್ಕೂ ಇದ್ದುದರಲ್ಲಿ ಗಂಡನಿಗೆ ಬಡಿಸಿ ತಾನು ಉಪವಾಸವೇ ಮಲಗುತ್ತಿದ್ದಾಗ ಹಳ್ಳಿಗಳಲ್ಲಿ ಬದುಕಲು ಕೃಷಿಯನ್ನೇ ನಂಬಿದ್ದ ಜನಕ್ಕೆ ಬರಗಾಲದಿಂದಾಗಿ ಕೂಲಿಗಿಟ್ಟದೆ ಹಾಗೂ ಕೂಲಿ ಸಿಗದೆ ಅನಿವಾರ್ಯವಾಗಿ ವಲಸೆ ಹೋಗುತ್ತಿದ್ದರು.

"ಈ ವರ್ಷ ಬಂದ ಕ್ಷಾಮ ಊರನ್ನೇ ಗಡಗಡ ನಡುಗಿಸಿ ಸುಖದ ತಲೆಯ ಮೇಲೆ ಗಥಾರಿಯಿಂದ ಒಡೆದಿತ್ತು ದನಕರು ಸತ್ತವು, ಹೊಲ ಒಣಗಿ ವ್ಯಥೆಯನ್ನು ಬರೆಯುತ್ತಿದ್ದವು. ಕೂಲಿಯೂ ಗಿಟ್ಟದಿದ್ದಾಗ ಕೆಲವು ಕುಟುಂಬಗಳು ಊರಬಿಟ್ಟವು."(ಅದೇ, ಪು.೪೪೬) ಎಂದು ಜನರ ಅನಿವಾರ್ಯತೆಯನ್ನು ಪ್ರಕೃತಿ ವಿಕೋಪವನ್ನು ವರ್ಣಿಸುತ್ತಾರೆ. ಆದರೆ ಕತೆಯ ನಾಯಕಿ ಚೆನ್ನಿ ಮಾತ್ರ ಹರಸಾಹಸ ಪಟ್ಟು ಹೇಗೂ ಉಪವಾಸವೊ, ವನವಾಸವೊ ಕಾಲ ತಳ್ಳುತ್ತಿದ್ದಳು. ಕಾರಣ ಗಂಡನಾದ ರಾಮನಿಗೆ ಇದ್ದ ಕೆಮ್ಮ ಅಸ್ತಮಾದಿಂದ ಗೊತ್ತಿಲ್ಲದ ಪ್ರದೇಶಕ್ಕೆ ಹೋಗಿ ನೆಲೆಸುವುದು ಒಂದು ರೀತಿ ದುಸ್ತರವಾಗುತ್ತದೆ.

ಹೀಗೆ ಮಳೆ ಬರದೇ ಬರಗಾಲದಿಂದ ತತ್ತರಿಸಿದ ಜನ ಸ್ವಲ್ಪ ದಿನಗಳ ನಂತರ ಸುರಿದ ರಭಸ ಮಳೆ ಇನ್ನೊಂದು ರೀತಿಯ ಸಮಸ್ಯೆಗೆ ಒಳಗಾಗಿತ್ತು. ಏಕೆಂದರೆ ಬರಗಾಲದ ಪ್ರದೇಶವೆಂದು ಗುರುತಿಸಿ. ಕಾಮಗಾರಿಗೆ ಮಂಜೂರು ಮಾಡಿದ್ದ ಸರ್ಕಾರ ಮಳೆ ಬಂದ ನೆಪವನ್ನು ಮುಂದಿಟ್ಟುಕೊಂಡು ಬಹಳಷ್ಟು ಕಾರ್ಯಗಳನ್ನು ನಿಲ್ಲಿಸಿತ್ತು. ಇದರಿಂದ ಎಷ್ಟೊ ಬಡ ಕುಟುಂಬಗಳು "ಹೊತ್ತಲ್ಲದ ಹೊತ್ನಾಗೆ ಮಳೆನಾದ್ರೂ ಯಕ್ ಬಂತೂ ಹಾಳದ್ದು"(ಅದೇ,ಪು.೪೪೭) ಎಂದು ಬೈದುಕೊಂಡವರೇ ಹೆಚ್ಚು.

ಇತರಹದ ಪ್ರಾಕೃತಿಕ ವೈಪರಿತ್ಯಗಳು ಗ್ರಾಮೀಣ ಜನರ ಬಡತನಕ್ಕೆ ಕಾರಣವಾಗಿ ಅವರ ಬದುಕಿನ ಮೇಲೆ ಆಗಾಧ ಪರಿಣಾಮವನ್ನು ಬೀರಿತ್ತು. ಇದಕ್ಕೆ ಉದಾಹರಣೆ ಎನ್ನುವಂತೆ ಈ ಕತೆಯ ನಾಯಕಿ ರಂಗಪ್ಪನ ಹೊಲದಲ್ಲಿ ಕೂಲಿಗೆಂದು ಹೋದಾಗ ರಂಗಪ್ಪನ ಅಸಭ್ಯ ನಡವಳಿಕೆಯನ್ನು ಕಂಡು ಅವನು ಕೆಲಸ ಕೊಟ್ಟ ಜಮೀನುದಾರನೆನ್ನುವುದನ್ನು ಮರೆತು ಅವನ ವಿರುದ್ಧ ಪ್ರತಿಭಟಿಸಿರುತ್ತಾಳೆ. ಆದರೆ ಬರುಬರುತ್ತಾ ಒಂದೊತ್ತಿನ ಊಟಕ್ಕೂ ಗತಿ ಇಲ್ಲದೇ ಮೂರು ಮೂರು ದಿನಗಳಟ್ಟಲೇ ಉಪವಾಸವಿರಬೇಕಾಗಿ ಬಂದಾಗ ಚೆನ್ನಿಯ ಹಸಿವು ರಂಗಪ್ಪನಲ್ಲಿಗೆ ಎಳೆದುಕೊಂಡು ಹೋಗುತ್ತದೆ. ಈ ಮೊದಲೇ ಚೆನ್ನಿಯ ಗಂಡ ರಂಗಪ್ಪನ ಹೆಣ್ಣುಮಕ್ಕಳೊಂದಿಗಿನ ಅಸಭ್ಯ ವರ್ತನೆ ತಿಳಿದು ಚೆನ್ನಿಗೆ ಎಚ್ಚರಿಸಿದ್ದರೂ ಚೆನ್ನಿಯ ಹಸಿವು, ಆ ಮಾತುಗಳನ್ನು ನೆನಪಿಗೆ ಬಾರದಾಗಿಸುತ್ತದೆ.

ಬರಗಾಲದಿಂದ ಎಲ್ಲಿಯೂ ಕೆಲಸವಿಲ್ಲದೆ ರಂಗಪ್ಪನ ಹೊಲವನ್ನೇ ಚೆನ್ನಿ ಆಶ್ರಯಿಸಬೇಕಾಗುತ್ತದೆ. ಇದು ಚೆನ್ನಿಯ ಕುಟುಂಬಕ್ಕಿರುವ ಅನಿವಾರ್ಯತೆಯ ತೋರಿಸುತ್ತದೆ. ಚೆನ್ನಿಯ ಅಸಹಾಯಕತೆಯಲ್ಲಿ ರಂಗಪ್ಪನ ತೋಟದ ಮನೆಗೆ ಹೋಗಿ ಮಾತಾನಾಡುವ ಮಾತುಗಳು ಬಡವರ ಬದುಕಿನ ಕರಾಳತೆಯನ್ನು, ಹಸಿವನ್ನು ಬಯಲು ಮಾಡುತ್ತವೆ.

"ನನ ನಾನು ನಿನ್ನ ವೊಲ್ದಾಕ್ ಬತ್ತೀನಿ ಅವತ್ತು ಕಾಲಿಕ್ಕಲ್ಲ ಅಂಬ್ತ ಹಟ ಮಾಡಿದ್ದು ತಪ್ಪಾತು ಕರಿಯಮ್'ದ್ಯಾವ್ರಾಣ್ಣು ಬತ್ತೀನಿ ಅದ್ಕೇ ನಾನ್ ಓಡೋಡ್ ಬಂದೆ ನಿನ್ತಾವೀಗ ನಿನ್ ವೋಲ್ದಾಗಿರೋ ಕಳೆಸಿಲ್ಲ ಒಬ್ಬೇ ಬೇಕಿದ್ರ ತಗೀತೀನಿ ಆ ಮ್ಯಾಲೆ ಯಾವಾಗ ಕರದ್ರೂ ಬತ್ತೀನಿ"(ಅದೇ, ಪು.೪೪೩) ಎನ್ನುತ್ತ ತನ್ನ ಮಾತನ್ನ ನಿಲ್ಲಿಸುತ್ತಾಳೆ. ಆದರೆ ರಂಗಪ್ಪ ಈ ಮಾತುಗಳನ್ನು ಕೇಳಿ ಅವಳ ತೋಳುಗಳನ್ನು ಹಿಡಿದು ತೋಳುಗಳು ಬರೀ ಮೂಳೆಯಿಂದ ತುಂಬಿದ್ದರಿಂದ ಹಿಂದಿನ ಚೆನ್ನಿಯನ್ನು ಚಿತ್ರಿಸಿಕೊಂಡು ಈಗ ಬಂದವ್ಳೆ ಈಗ ಮೂಳೆ ಮ್ಯಾಲೆ ಚರ್ಮಮೆತ್ಕಂಡು ಕೀಳಾಕಿಲ್ಲ ಇವ್ಳ ಸೆಡವು! ಈಗ ಮಹಾ ಬಂದ್ಬಿಟ್ಳು ಎನ್ನುತ್ತಾ ಬಾಗಿಲು ಹಾಕಿಕೊಂಡ ದೃಶ್ಯ ಕಣ್ಣು ಕಟ್ಟುತ್ತದೆ.

ಚೆನ್ನಿ ನೆಲಕ್ಕೆ ಬಿದ್ದು, ಬೀಳುತ್ತಿರುವ ಮಳೆಯಲ್ಲಿಯೇ ಭೂಮಿಯನ್ನು ತಡಕುತ್ತಿದ್ದಳು. ಎಂಬಲ್ಲಿಗೆ ಕತೆ ಕೊನೆಗೊಳ್ಳುತ್ತದೆ. ಇದು ಚೆನ್ನಿಯ ಕುಟುಂಬದ ಬದುಕಿನ ಅಂತ್ಯವೆಂದರೂ ತಪ್ಪಾಗಲಾರದು ಎನಿಸುತ್ತದೆ. ಮಾಂಸವಿಲ್ಲದೇ ಬರೀ ಮೂಳೆಗಳನ್ನು ಒಳಗೊಂಡ ಅವಳ ದೇಹದ ತಿರಸ್ಕಾರ ಹಸಿವಿನ ಚಿತ್ರಣವನ್ನು ಕಣ್ಣಮುಂದೆ ತರಿಸುತ್ತದೆ. ಏನೇ ಆದರೂ ಮಾನವೀಯ ಗುಣಗಳೇ ಇಲ್ಲದ ಸ್ವಾರ್ಥ ಜೀವನಕ್ಕೆ ಬಡವರನ್ನು ಬಳಸಿಕೊಳ್ಳುವ ಜಮೀನ್ದಾರರ ಶೋಷಣೆ ಈ ಕತೆಯ ಮುಖ್ಯ ಅಂಶವಾಗುತ್ತದೆ.

ಒಂದು ಕಡೆ ಪ್ರಕೃತಿ ಮನುಷ್ಯನನ್ನು ಕೆಳಮಟ್ಟಕ್ಕೆ ತಳ್ಳಿದರೆ ಇನ್ನೊಂದು ಕಡೆ ಶ್ರೀಮಂತ ವರ್ಗ ಶೋಷಣೆಯ ಮೂಲಕ ಬಡವರ ಬದುಕನ್ನು ಆಳಕ್ಕೆ ತಳ್ಳುತ್ತದೆ. ಬರಗಾಲದಿಂದ ಹೋದ ಹಳ್ಳಿಯ ಜನರ ಗುಳೆಯ ಪರಿಣಾಮಗಳ ಸ್ಥಿತಿಗತಿಗಳು ಇಲ್ಲಿ ಮೌನವಾಗುತ್ತವೆ. ಆದರೆ ಗುಳೆ ಹೋಗುವ ಮುಂಚಿನ ಹಿನ್ನೆಲೆಗಳು ಸಂವೇದನಾತ್ಮಕವಾಗಿ ಚಿತ್ರಿತವಾಗುತ್ತವೆ. ಈ ಮೂಲಕ ಲೇಖಕರ ಗ್ರಾಮೀಣ ಜನರ ಬದುಕನ್ನು ಚಿತ್ರಿಸುವ ಮೂಲಕ ಜಮೀನ್ದಾರರ ಶೋಷಣೆಯ ಸ್ವರೂಪವನ್ನು ಚಿತ್ರಿಸುವುದು ಲೇಖಕರ ಆಶಯವಾಗಿದೆ.

'ಮುಳುಗಡೆ' ನಾ.ಡಿಸೋಜರವರ ಈ ಕಾದಂಬರಿಯು ಊರಿಗೆ ಊರೇ ವಲಸೆ ಹೋಗುವುದರ ಹಿಂದಿನ ಬವಣೆಯನ್ನು ಸಂವೇದನಾತ್ಮಕವಾಗಿ ಚಿತ್ರಿಸುತ್ತದೆ. ಮುಳುಗಡೆ ಲೇಖಕರೆಂದೇ ಪ್ರಸಿದ್ಧಿಯಾಗಿರುವ ನಾ.ಡಿಸೋಜರವರ ಕಾದಂಬರಿಗಳಲ್ಲಿ ಮುಳುಗಡೆ ಸೇರಿದಂತೆ, ದ್ವೀಪ, ಗುಣವಂತೆ, ಒಡ್ಡು ಈ ನಾಲ್ಕು ಕಾದಂಬರಿಗಳ ವಸ್ತು ಹೆಚ್ಚು ಕಡಿಮೆ ಒಂದೇಯಾಗಿದೆ.

ರಾಷ್ಟ್ರದ ಅಭಿವೃದ್ಧಿ ಹೆಸರಿನಲ್ಲಿ ಅಣೆಕಟ್ಟುಗಳನ್ನು ಕಟ್ಟುವ ಸರ್ಕಾರದ ಯೋಜನೆಗಳಿಂದ ಹಳ್ಳಿಗಳು ಮುಳುಗಡೆಯಾಗಿ ಇಡೀ ಊರಿಗೆ ಊರೇ ವಲಸೆ ಹೋಗುವುದರ ಹಿಂದಿನ ಜನರ ನಿಟ್ಟುಸಿರು ಈ ಕತೆಗಳ ಮುಖ್ಯ ಅಂಶವಾಗಿ ಮೂಡಿಬರುತ್ತದೆ.

ಮೊದಲನೆಯದಾಗಿ ನಾ.ಡಿಸೋಜರವರ ಮುಳುಗಡೆ ಕಾದಂಬರಿಯ ನಾಯಕ ಒಬ್ಬ ಸಂಶೋಧಕ. ಮುಳುಗಡೆ ಹೊಂದಲಿರುವ ಹಳ್ಳಿಗಳಿಗೆ ಹೋಗಿ ಶಾಸನಗಳನ್ನು ಪ್ರತಿ ಮಾಡುವುದು ಸಂರಕ್ಷಿಸುವುದು ಇವನ ಕೆಲಸ. ಬರುವಾಗ ಉತ್ಸಾಹದಲ್ಲಿ ಬಂದವನಿಗೆ ಹಳ್ಳೀಯ ಜನರ ನೋವುಗಳು ಮನತಟ್ಟುತ್ತದೆ. ಇಡೀ ಕತೆ ಸಂಶೋಧಕನ ಮೂಲಕ ಮುಳುಗಡೆ ಹೊಂದಲಿರುವ ಹಳ್ಳಿಯ ಜನರ ಬದುಕಿನ ಬವಣೆಯನ್ನು ಚಿತ್ರಿಸುತ್ತ ಹೋಗುತ್ತದೆ.

ನಾ.ಡಿಸೋಜರವರೇ ಹೇಳುವಾಗೆ "ಇದೊಂದು ಲೇಖಕರ ಅನುಭವದ ಕಥೆಯಾಗಿದೆ." (ಡಿಸೋಜ ನಾ, ೨೦೧೧, ಮುನ್ನುಡಿ) ೧೯೫೬ ರಿಂದ ೧೯೬೬ರ ಸುಮಾರಿನಲ್ಲಿ ಶರಾವತಿ ನದಿಗೆ ಅಡ್ಡವಾಗಿ ಲಿಂಗನಮಕ್ಕಿಯ ಬಳಿ ನಿರ್ಮಾಣವಾದ ಒಂದು ದೊಡ್ಡ ಅಣೆಕಟ್ಟಿನಿಂದಾಗಿ ಸುಮಾರು ೧೫೨ ಹಳ್ಳಿಗಳು, ೪೮೪೬ ಕುಟುಂಬಗಳನ್ನು ಬೇರೆಡೆಗೆ ಸ್ಥಳಾಂತರ ಮಾಡಬೇಕಾದಾಗ ಅನುಭವಿಸಿದ ವೇದನೆ ಈ ಕತೆಯ ವಸ್ತು. ಲೇಖಕರ ಈ ಕೃತಿಯ ಹಿನ್ನೆಲೆ ಕುರಿತು ಹೇಳುವ ಅವರ ಮಾತುಗಳನ್ನು ಇಲ್ಲಿ ಉದಾಹರಿಸಬಹುದು. "ಮುಳುಗಡೆ ಅನ್ನುವ ಶಬ್ದವೇ ನನ್ನನ್ನು ಕಾಡತೊಡಗಿತು. ಅಣೆಕಟ್ಟು ಕಟ್ಟುತ್ತಾರೆ, ನೀರು ನಿಲ್ಲುತ್ತದೆ. ಆದರೆ ಮುಳುಗಡೆ ಆಗುವುದೇನು? ಹಳ್ಳಿಯೇ? ಜನಾಂಗವೇ? ಸಂಸ್ಕೃತಿಯೇ? ಒಂದು ಜೀವನ ವಿಧಾನವೇ? ಒಂದು ನಂಬಿಕೆಯೇ? ಮನುಷ್ಯನ ಕೀಳು ಕಾಮನೆಗಳೇ? ಅವನ ಪ್ರೀತಿ ವಾತ್ಸಲ್ಯವೇ? ಜನ ಹೊಸ ಪ್ರದೇಶಗಳಿಗೆ ಹೋಗುತ್ತಾರೆ. ಅವರ ಜೀವನ ಹಿಂದಿಗಿಂತಲೂ ಉತ್ತಮವಾಗುತ್ತದೆಯೇ? ಇಲ್ಲ ಹಾಳಾಗುತ್ತದೆಯೇ. ಮಡುಗಟ್ಟಿ ನಿಂತ ನೀರಿನಲ್ಲಿ ಅವರು ಏನನ್ನು ಬಿಟ್ಟು ಹೋಗುತ್ತಾರೆ? ಇಂತಹ ನೂರಾರು ವಿಚಾರಗಳು ನನ್ನನ್ನು ಮುತ್ತಿ ಚುಚ್ಚ ತೊಡಗಿದಾಗ ಅನಿವಾರ್ಯವಾಗಿ ನಾನು ಬರೆಯಲೇ ಬೇಕಾಯಿತು"(ಅದೇ, ಮುನ್ನುಡಿ) ಎಂದು ಕೃತಿ ರಚನೆಗೆ ಇರುವ ಪ್ರೇರಣೆಯನ್ನು ಹೇಳಿಕೊಳ್ಳುತ್ತಾರೆ.

ಪ್ರಾಚ್ಯವಸ್ತು ಸಂಶೋಧನಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಕಥಾನಾಯಕ ರಮೇಶ ಧಾರವಾಡದಿಂದ ಸಾಗರಕ್ಕೆ ಬರುತ್ತಾನೆ. ಸುತ್ತಮುತ್ತಲಿರುವ ಸುಮಾರು ೧೫೨ ಹಳ್ಳಿಗಳು ಮುಳುಗಡೆಯಾಗಲಿರುವ ಹಿನ್ನಲೆಯಲ್ಲಿ ಅಲ್ಲಿರುವಂತಹ ಶಿಲಾಶಾಸನಗಳಲ್ಲಿನ ಮಾಹಿತಿಯನ್ನು ಸಂರಕ್ಷಿಸುವ ಉದ್ದೇಶ ಮತ್ತು ಹೊಸದಾಗಿ ಮದುವೆಯಾಗಿದ್ದವನಿಗೆ ಸಾಗರದಲ್ಲೇ ಇರುವ ಹೆಂಡತಿಯೊಂದಿಗೆ ಸುಖವಾಗಿ ಕಾಲಕಳೆಯಲು ಬಂದವನಿಗೆ ಹಳ್ಳಿಯ ಜನರ ಯಾತನೆಯ ಜೊತೆಗೆ ತನ್ನ ವೈಯಕ್ತಿಕ ಸಮಸ್ಯೆಯು ಸೇರಿಕೊಂಡು ಮನಸ್ಸನ್ನು ಗೊಂದಲಕ್ಕೀಡು ಮಾಡಿ

ಕೊಳ್ಳುತ್ತಾನೆ. ಹಳ್ಳಿಗೆ ಕಾಲಿಟ್ಟ ಕೂಡಲೇ ಹಿಡಿತರಿ ಊರಿನ ಧನಪಾಲಯ್ಯ ಎಂಬ ಪಟೇಲನ ವೇದನೆ ರಮೇಶನನ್ನು ಅಲ್ಲೋಲ ಕಲ್ಲೋಲಕ್ಕೆ ಗುರಿ ಮಾಡಿಸುತ್ತಾನೆ. ಈ ಮೊದಲೇ ಹಳ್ಳಿಗಳಿಗೆ ಬರುವ ಮೊದಲೇ ಕಛೇರಿಯ ಮುಖ್ಯಧಿಕಾರಿಗಳು "ನೀವು ಮುಳುಗಡೆಯಾಗುವ ಹಳ್ಳಿಗೆ ಹೋಗುವವರು ಜನರ ಮಾತನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಡಿ, ನಿಮಗೆ ಏನು ಬೇಕು ಹೇಳಿ ಅನುಕೂಲ ಮಾಡಿಕೊಡೋ ಜವಾಬ್ದಾರಿ ನನಗಿರಲಿ"(ಅದೇ, ಪು.೧೦) ಎಂಬ ಎಚ್ಚರಿಕೆಯ ಮಾತು ಇಲ್ಲಿ ಹುಸಿಯಾಗುತ್ತದೆ.

ಧನಪಾಲಯ್ಯ, ಹಿಡಿತರಿ ಹಳ್ಳಿಗೆ ಪಟೇಲ ತನ್ನನ್ನು ಪರಿಚಯಿಸಿಕೊಳ್ಳುವ ರೀತಿಯಲ್ಲಿಯೇ ವೇದನೆಯನ್ನು ಕಾಣುತ್ತಾನೆ. "ಧನಪಾಲಯ್ಯ ಈ ಊರಿನ ಪಟೇಲ ಹಿಂದೆ ಆಗಿದ್ದೆ ಈಗ ಊರೇ ಮುಳುಗಿ ಹೋಗುತ್ತದಲ್ಲ, ಪಟೇಲಗಿರಿ ಕೂಡ ಹೋದ ಹಾಗೆ, ನೀವು ಯಾರೋ?"(ಅದೇ, ಪು.೧೩) ಎಂದು ಕೇಳುವ ಮಾತೀನ ಹಿಂದೆ ನೋವು ಕಾಣಿಸಿಕೊಳ್ಳುತ್ತದೆ.

"ಊರಿಗೆ ಊರನ್ನೇ ಮುಳುಗಿಸಲಿಕ್ಕೆ ಹೊರಟ ಸರಕಾರಕ್ಕೆ ಈ ಕಲ್ಬರಹ ಯಾಕೋ ಎಲ್ಲಾ ಮುಂಡಮೋಚಿದ ಮೇಲೆ ಇತಿಹಾಸ ತೊಕೊಂಡೆನು ಮಾಡಬೇಕು?"(ಅದೇ, ಪು.೧೩) ಎಂಬ ತನ್ನಲ್ಲಿರುವ ಸರ್ಕಾರದ ಯೋಜನೆ, ಉದ್ದೇಶಗಳನ್ನು ಟೀಕಿಸುತ್ತಾನೆ. ಜೊತೆಗೆ ಪಟೇಲ ಅವಿಭಕ್ತ ಕುಟುಂಬದಲ್ಲಿನ ತಮ್ಮಂದಿರು, ಮಕ್ಕಳು, ಮೊಮ್ಮಕ್ಕಳ ಅಗಲಿಕೆಯ ನೋವು ರಮೇಶನನ್ನು ಕಾಡುತ್ತದೆ.

ಇತ್ತೀಚಿನ ಆಧುನಿಕ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ನಶಿಸಿ ಅವರ ಅವರ ಸ್ವಾರ್ಥ ಸ್ವತಂತ್ರ್ಯಕ್ಕೆ ವಿಭಕ್ತ ಕುಟುಂಬಗಳು ಸಂಗತಿಗಳೇ ಹೆಚ್ಚು ಅಂತರದಲ್ಲಿ ಹಳ್ಳಿಯಲ್ಲಿ ಎಲ್ಲರೂ ಕೂಡಿ ಬಾಳುತ್ತಿದ್ದ ಕುಟುಂಬ ಹೊಡೆಯುವುದಕ್ಕೆ ಸರ್ಕಾರದ ಈ ಯೋಜನೆಗಳೆ ಮುಖ್ಯ ಕಾರಣವಾಗುತ್ತದೆ. ರಮೇಶ ಹಿಡಿತಿರಿಯ ನಂತರ ನಾಗೋಲಿ ಎಂಬ ಹಳ್ಳಿಯಲ್ಲಿನ ನಾಲ್ಕು ಶಾಸನಗಳನ್ನು ಆಧ್ಯಯನ ಮಾಡುತ್ತಾನೆ. ನಾಗೋಲಿಯಲ್ಲಿ ಪರಿಚಯವಾಗುವ ಪಾರ್ವತಮ್ಮ ತನ್ನ ಕಷ್ಟಗಳನ್ನು ಸಂಶೋಧಕನ ಮುಂದೆ ಹಂಚಿಕೊಳ್ಳುತ್ತಾಳೆ. ಪಾರ್ವತಮ್ಮ ಒಬ್ಬ ವಿಧವೆ. ಗಂಡನನ್ನು ಕಳೆದುಕೊಂಡು ತಾನೇ ಜಮೀನನ್ನು ನೋಡಿಕೊಳ್ಳುತ್ತಿರುತ್ತಾಳೆ. ಆದರೆ, ಹಳ್ಳಿಯ ಮುಳುಗಡೆಯಿಂದ ಈಗ ಮತ್ತೆ ಹೊಸದಾಗಿ ಹೊಸೂರಿನಲ್ಲಿ ಜಮೀನು ಮಾಡಬೇಕಾಗಿ ಬರುತ್ತದೆ. ಹೀಗಾಗಿ ಪಾರ್ವತಮ್ಮ ಒಂಟಿಯಾಗಿ ಎಲ್ಲವನ್ನು ನಿಬಾಯಿಸಬೇಕಾದ ಸನ್ನಿವೇಶಗಳು ಇಲ್ಲಿ ಕಾಣಿಸುತ್ತದೆ.

ಇದೇ ಸಮಯದಲ್ಲಿ ರಮೇಶನ ಹೆಂಡತಿಯ ಚಾರಿತ್ರ್ಯದ ಬಗ್ಗೆ ಕೆಟ್ಟದಾಗಿ ಬಿಂಬಿಸಿ ಬರೆದ ಪತ್ರಗಳು ರಮೇಶನಿಗೆ ಸಿಗುತ್ತವೆ. ಮೊದಲೇ ಹಳ್ಳಿಯ ಜನರ ವೇದನೆಗಳಿಂದ ಸಂಕಟಕ್ಕೆ ಗುರಿಯಾಗಿದ್ದವನಿಗೆ ಹೆಂಡತಿಯ ಬಗೆಗಿನ ಪತ್ರಗಳು ಮನಸ್ಸನ್ನು ಇನ್ನಷ್ಟು ಆತಂಕಕ್ಕೆ ಗುರಿ ಮಾಡುತ್ತದೆ. ಇದು ಬರೀ ಜನರಿಗಷ್ಟೇ ಆದ ನಷ್ಟವಲ್ಲ ನಾ.ಡಿಸೋಜರವರು ಹೇಳುವಂತೆ ಕಲೆ,

ಸಂಸ್ಕೃತಿಯ ನಾಶವು ಇದರಲ್ಲಿ ಸೇರುತ್ತದೆ. ಉದಾಹರಣೆಗೆ ಸಂಶೋಧಕ ಕೆರೆಕೋಡಿ ಎಂಬ ಹಳ್ಳಿಗೆ ಹೋದಾಗ ಮಹಾಬಲಯ್ಯ ಮಾತನ್ನು ಇಲ್ಲಿ ಉದಾಹರಿಸಬಹುದು "ಮುಳುಗಡೆ ಅಂದರೆ ಮನೆ, ಊರು ಮಾತ್ರ ಅಲ್ಲ, ಎಲ್ಲಾ ಮುಳುಗಡೆ ಆಗುತ್ತೆ. ಈಗ ನಮ್ಮ ಯಕ್ಷಗಾನ ಮಂಡಳಿ ಕೂಡ. ಇಲ್ಲಿ ಸುತ್ತ ಇದ್ದ ಹತ್ತು ಜನ ಕಲಾವಿದರನ್ನು ಸೇರಿಸಿಕೊಂಡು ಆಟ ಮಾಡ್‌ತಿದ್ವಿ... ಈಗ ಅವರೆಲ್ಲಾ ಒಂದೊಂದು ದಿಕ್ಕಿಗೆ ಹೊರಟು ಹೋಗುತ್ತಾರೆ. ಇನ್ನು ಆಟ ಆಡೋದು ಹ್ಯಾಗೆ? ಈ ಭುಜಕೀರ್ತಿ, ಕಾಂಚಿಧಾಮ, ಗೆಜ್ಜೆ, ತಾಳ, ಚಂಡೇನೆಲ್ಲಾ ಶರಾವತಿಗೆ ಹಾಕಿ ಕೈ ಮುಗಿಯೋದೆ ಸೈ."(ಅದೇ, ಪು.೬೮) ಎಂದು ಮಹಾಬಲಯ್ಯ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ.

ಹೀಗೆ ಒಂದು ಕಲೆ, ಸಂಸ್ಕೃತಿಯ ಜೊತೆ ಕಲಾವಿದರ ಬದುಕು ಸಹ ನಾಶವಾಗುತ್ತದೆ. ಹಳೆಯ ವಸ್ತುಗಳಿಗೆ ಬೆಲೆಕೊಡಬೇಕೆಂದು ಶಾಸನಗಳ ಸಂಗ್ರಹಿಸಲು ಹೊರಟ ಸರ್ಕಾರಕ್ಕೆ ಹಿರಿಯರ ಕಟ್ಟೆ ಕಾಣದಾಗುತ್ತದೆ. ಹಳ್ಳಿಯ ಹಿರಿಯರು ಕುಳಿತು ಹಳ್ಳಿಯ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದ ಜಾಗ ಮುಳುಗಿ ಹೋಗಿದ್ದ ಕಟ್ಟೆಯ ಜೊತೆಗೇನೆ ಒಂದು ಪದ್ಧತಿ, ಒಂದು ನಂಬಿಕೆಯೂ ಮುಳುಗಡೆಯಾಗಿ ಹಿರಿಯರ ಮಾತಿಗೆ ಬೆಲೆ ಕೊಡಬೇಕು ಎಂಬ ಮನೋಭಾವನೆ ಮಾಯಾ ವಾಗಿರುವ ವಿಷಾದವನ್ನು ಸಂಶೋಧಕ ವ್ಯಕ್ತಪಡಿಸುತ್ತಾನೆ. ಜೊತೆಗೆ ಈ ಸಮಸ್ಯೆಯಷ್ಟೇ ಅಲ್ಲದೆ ಮುಳುಗಡೆ ಕಛೇರಿಯ ಅಧಿಕಾರಿಗಳ ಲಂಚದ ಹಾವಳಿ ಜನರನ್ನು ಕಾಡುತ್ತದೆ. ಮುಳುಗಡೆ ಹೊಂದಲಿರುವ ಹಳ್ಳಿಯ ಜನರಿಗೆ ಕೊಡಬೇಕಾದ ಹಣದಲ್ಲಿ ಸರ್ವೇಯರ್ ಇಂಜಿನಿಯರುಗಳ ಪರಿಹಾರದ ಬಿಲ್ಲಿನಲ್ಲಿ ಮೋಸ ಮಾಡುತ್ತಾರೆ. ಉದಾಹರಣೆಗೆ ಈ ಕತೆಯಲ್ಲಿ ಬರುವ ಊರಿನ ಪಂಡಿತನಾದ ನಾರಾಯಣನ ಮಾತುಗಳನ್ನು ಇಲ್ಲಿ ಗಮನಿಸಬಹುದು.

"ನಮ್ಮನ್ನು ಮುಳುಗಿಸಲಿಕ್ಕೆ ಸರ್ವೇಯರ್ ಬಂದು ಜಮೀನು ಅಳತೆ ಮಾಡಿ ಹೋಗುತ್ತಾನೆ. ಲಂಚ ಕೊಡದಿದ್ರೆ ಅಳತೇಲಿ ಮೋಸ ಮಾಡ್ತಾನೆ. ಇಂಜಿನಿಯರು ಅವರು ಅಳೆದದ್ದನ್ನು ಬೆಲೆ ಕಟ್ಟಲಿಕ್ಕೆ ಬರ್ತಾನೆ. ಲಂಚ ಕೊಡದಿದ್ದರೆ ಹೊಸ ಮನೇನ ಹಳೇ ಮನೆ ಅಂತ ಬರಿತಾನೆ. ಗುಮಾಸ್ತ ಪರಿಹಾರದ ಬಿಲ್ಲು ಬಂದಿದೆ. ಕೊಡ್ತೀರ ಲಂಚ ಬಿಲ್ಲು ಪಾಸ್ ಮಾಡಲಿಕ್ಕೆ? ಅಂತಾನೆ. ಜವಾನ ಚೆಕ್ಕು ಬಂದಿರೋ ವಿಷಯ ಹೇಳಿ ಲಂಚ ಕೇಳ್ತಾನೆ ಥು ಥು ಸರಕಾರ ಹಾಗೇ ಮುಳುಗಿಸುತ್ತೆ ಈ ಲೌಡಿ ಮಕ್ಳು ಹೀಗೆ ಮುಳುಗಿಸ್ತಾರೆ"(ಅದೇ, ಪು.೩೧) ಎಂದು ತನ್ನ ಸಂಕಷ್ಟಗಳನ್ನು ಹೇಳಿಕೊಳ್ಳುತ್ತಾನೆ.

ಹೀಗೆ ಸರಕಾರ 'ಗಾಯದ ಮೇಲೆ ಬರೆ ಎಳೆದಂತೆ' ಮೊದಲೇ ಮುಳುಗಡೆಯಿಂದ ನೊಂದಂತಹ ಜನರಿಗೆ ಲಂಚ ಕೇಳಿ ಮತ್ತಷ್ಟು ಹಿಂಸಿಸುತ್ತಾರೆ. ಹೇಗೋ ಕಷ್ಟವೋ ಸುಖವೋ ಇದ್ದೆವು ಮುಂದೆ ಎಲ್ಲಿ ಹೋಗೋದೋ, ಏನು ಮಾಡೋದೋ ಎಂದು ಗೋಳಾಡುತ್ತಾ ವಲಸೆ ಹೋಗುತ್ತಿದ್ದವರ ಪಾಡು ಸಾಮಾನ್ಯವಾಗಿತ್ತು. ಇತ್ತೀಚಿನ ಯಾಂತ್ರಿಕ ಜೀವನದಲ್ಲಿ ಹಳ್ಳಿಗಳಲ್ಲಿ

ಅಲ್ಲಲ್ಲಿ ಉಳಿದ ಅಣ್ಣ ತಮ್ಮ ಅಕ್ಕ ತಂಗಿ ಎಂಬ ಸಂಬಂಧಗಳನ್ನು ಸರ್ಕಾರವೇ ಅಗಲಿಸುವಂತ ಕೆಲಸ ಮಾಡುತ್ತದೆ. "ಸ್ವಾಮಿ ಅಣ್ಣ ತಮ್ಮಂದಿರನ್ನು ಅಗಲಿಸಬೇಡಿ"(ಅದೇ, ಪು.೭೩) ಎಂದು ದೈನದಿಂದ ಐದು ಜನ ಅಣ್ಣತಮ್ಮಂದಿರು ಕೇಳುವ ಈ ಮಾತಿಗೆ ಸರ್ಕಾರ ವ್ಯಂಗ್ಯವಾಗಿ ನೋಡುತ್ತದೆ. "ಪಟೇಲರೇ ಸರಕಾರ, ಜಾತಿ ಕುಲ ಸಂಬಂಧ ಯಾವುದೂ ನೋಡುವುದಿಲ್ಲ. ನಿಮಗೆ ಅಷ್ಟೂ ಜನಕ್ಕೆ ಬೇಕಾಗುವಷ್ಟು ಜಮೀನು ಒಂದೇ ಕಡೆ ಎಲ್ಲಿದೆ ಹೇಳಿ, ನೀವು ತೋರ್ಸಿ"(ಅದೇ, ಪು.೭೩) ಎಂದು ಪ್ರತಿಕ್ರಿಯಿಸುವ ಅಧಿಕಾರಿಗಳು, ಸರ್ಕಾರದ ನಿರ್ಲಕ್ಷ್ಯ ತೋರಿಸುತ್ತದೆ.

ಇದರ ಜೊತೆಗೆ ಹಳ್ಳಿಗಳು ಮುಳುಗಡೆಯಾಗದಿರುವ ಮನೆಗಳ ಕುಟುಂಬದ ಕತೆಯ ಸಮಸ್ಯೆ ಬೇರೆ ತರಹದ್ದು ಮನೆ, ಜಮೀನು, ಮುಳುಗುವುದಿಲ್ಲವೆಂಬ ನಿರ್ಧಾರವಿದ್ದರೂ ಇವರಿಗೆ ಸರಿಯಾದ ಸೌಕರ್ಯಗಳ ಕೊರತೆ ಎದ್ದು ಕಾಣುತ್ತದೆ. ಇವರಿಗೆ ಏನಾದರೂ ಆದರೆ ಅಥವಾ ನಗರಕ್ಕೆ ಬಂದು ಏನಾದರೂ ಕೊಳ್ಳಬೇಕೆಂದರೆ ಸಾಧ್ಯವಾಗುವುದಿಲ್ಲ. ಏಕೆಂದರೆ ರಸ್ತೆಯಲ್ಲವೂ ಮುಳುಗಿ ವಾಹನ ಓಡಾಟ ರದ್ದಾಗಿರುತ್ತದೆ ಸಾಗರಕ್ಕೆ ಹೋಗಬೇಕೆಂದರೆ ಹತ್ತು ಮೈಲು ಸುತ್ತಿ ಹೋಗಬೇಕಾಗುತ್ತದೆ ಅದು ಅಷ್ಟು ಸುಲಭದ ಮಾತಲ್ಲ. ಹಾಗಾಗಿ ವಲಸೆ ಹೋಗುವವರ ಆತಂಕ ನೋವು ಒಂದು ಕಡೆಯಾದರೆ ಹೋಗದಿರುವವರ ಸಮಸ್ಯೆ ಇನ್ನೊಂದು ಕಡೆಯಿಂದ ಜನರನ್ನು ಕಾಡುತ್ತದೆ.

ಆದರೆ ಮುಳುಗಡೆಯಿಂದ ಎಲ್ಲರ ಬಾಳು ಬರಡಾಗುತ್ತದೆ. ಎಲ್ಲರೂ ನೋವಿನಿಂದಲೇ ವಲಸೆ ಹೋಗುತ್ತಾರೆ ಎಂದು ಹೇಳಲಾಗದು. ಕಾರಣ ಜನರ ಸಮಸ್ಯೆಗಳು, ಪರಿಸ್ಥಿತಿಗಳು ಭಿನ್ನವಾಗಿರುತ್ತವೆ. ಹಾಗಾಗಿ ಮುಳುಗಡೆ ಒಂದೇ ರೀತಿಯಲ್ಲಿ ಒಳ್ಳೆಯದನ್ನೇ ಮಾಡಿದೆ ಎಂದು ಖುಷಿಪಡುವವರು ಇದ್ದಾರೆ. ಉದಾಹರಣೆಗೆ ಈ ಕತೆಯಲ್ಲಿ ಬರುವ ರಂಗೇಗೌಡ, ಕಾಡು ಕಡಿಯುತ್ತ ಅಲ್ಲಿನ ಹೆಣ್ಣು ಮಕ್ಕಳನ್ನು ಲೈಂಗಿಕತೆಗೆ ಬಳಸಿಕೊಂಡು ಸುಖವಾಗಿದ್ದವನಿಗೆ ಮುಳುಗಡೆಯಿಂದಾಗುವ ಸ್ಥಳಾಂತರ ಹಿಂಸೆಯಾಗುತ್ತದೆ. ಆದರೆ ಆ ಹಿಂಸೆಯ ಶೋಷಣೆಯನ್ನು ಅನುಭವಿಸುತ್ತಿದ್ದ ನೊಂದ ಮಹಿಳೆಯರಿಗೆ ದೊಣ್ಣೆ ಮನೆ, ಮರಾಠಿ ಕೊಪ್ಪ, ದೇವರ ಮನೆಗಳ ಬಡ ರೈತರಿಗೆ ಸಂತೋಷವಾಗಿತ್ತು. ಹಾಗೆಯೇ ಹಳ್ಳಿಯ ಜನರಿಗೆ ಹೊಟ್ಟೆ ಮದ್ದಿಗೆ, ಬಾಲಗ್ರಹಕ್ಕೆ, ಪಾರ್ಶ್ವವಾಯುಗೆ, ಮೂಲವ್ಯಾಧಿ ಮೊಂತಾದ ಖಾಯಿಲೆಗಳಿಗೆ ಔಷಧಿ ಕೊಟ್ಟು ಕಾಲ ಕಳೆಯುತ್ತಿದ್ದ ನಾರಾಯಣ ಪಂಡಿತರು ಈ ಮುಳುಗಡೆ ಮಾರಿ ಬಂದದ್ದು ಒಳ್ಳೆಯದಾಗಿತ್ತು. ಶಿವಮೊಗ್ಗದಲ್ಲೇ ಒಂದು ಶಾಪು ತೆರೆಯಬೇಕು ಎಂದು ಖುಷಿಯಿಂದಲೇ ಹೊರಟಿದ್ದ. ಇನ್ನು ವಿಧವೆಯಾಗಿದ್ದ ಪಾರ್ವತಮ್ಮನಿಗೂ ಸಹ ಮುಳುಗಡೆ ಒಂದು ಅರ್ಥದಲ್ಲಿ ಒಳ್ಳೆಯದನ್ನೇ ಮಾಡಿತ್ತು.

ಇವರಷ್ಟೇ ಅಲ್ಲದೆ ಹಳ್ಳಿಯಲ್ಲಿ ಮಠಕ್ಕೆ ಬರುತ್ತಿದ್ದ ಭಕ್ತಾದಿಗಳು ಈ ಮುಳುಗಡೆಯಿಂದಾಗಿ ಈ ಮಠವೇ ನಾಶವಾಗುವುದರ ಜೊತೆಗೆ ಭಕ್ತರನ್ನು ಸಹ ಕಳೆದುಕೊಳ್ಳಬೇಕಲ್ಲ ಎಂಬ ಚಿಂತೆ ಸ್ವಾಮೀಜಿಗೆ ಇರಲಿಲ್ಲ. ಏಕೆಂದರೆ "ನಮ್ಮ ಮಠ ಇವರೆಗೂ ಹಳ್ಳಿಗಾಡಿನ ನಡುವೆ ಅಜ್ಞಾತ ಸ್ಥಳದಲ್ಲಿತ್ತು. ಶರಾವತಿ ಯೋಜನೆಯಿಂದಾಗಿ ನಾವು ನಗರಕ್ಕೆ ಬರುವಂತಾಗಿದೆ. ನಮ್ಮ ಈ ಪಲ್ಲಟದಿಂದಾಗಿ ಜನತೆಗೆ ಒಳ್ಳೆಯದನ್ನು ಮಾಡುವ ಅವಕಾಶ ನಮಗೆ ದೊರಕಿದೆ. ಧರ್ಮ ಸಂಪ್ರದಾಯಗಳ ಅಭಿವೃದ್ಧಿಗೆ ಭಕ್ತರ ಕಲ್ಯಾಣಕ್ಕೆ ಅವರ ಶಿಕ್ಷಣಕ್ಕೆ ನೆರವಾಗಲು ನಾನು ನಿರ್ಧರಿಸಿದ್ದೇನೆ" (ಅದೇ, ಪು.೧೬೩) ಎಂದು ಸ್ವಾಮೀಜಿ ಅಭಿಪ್ರಾಯ ಪಡುತ್ತಾರೆ.

ಈ ಅಣೆಕಟ್ಟಿನ ಯೋಜನೆ ಕೆಲವರಿಗೆ ಸುಖದಾಯಕವಾದರೆ ಇನ್ನು ಕೆಲವರಿಗೆ ಅನಾನುಕೂಲವಾಗುತ್ತದೆ. ಆದರೆ ಜನರಿಗೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು ಎಂಬುದನ್ನು ಪಾತ್ರಗಳ ವೇದನೆಯಲ್ಲಿ ಕಂಡುಬರುವುದು ಮುಖ್ಯವಾಗುತ್ತದೆ. ಹೀಗಾಗಿ ವಲಸೆಯ ಭಿನ್ನ ಮುಖಗಳನ್ನು ಮತ್ತು ಜನರ ಅನಿವಾರ್ಯತೆಗಳನ್ನು ಈ ಕೃತಿ ಪರಿಚಯಿಸುತ್ತದೆ. ಮತ್ತು ಜನರ ವಲಸೆಯಿಂದಾಗುವ ಪರಿಣಾಮಗಳನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಈ ಕತೆಯ ಇನ್ನೊಂದು ಮುಖ್ಯ ಅಂಗ ವಲಸೆ ಹೋಗಬೇಕೆಂಬ ಪ್ರೇರಣೆ, ಪ್ರಕ್ರಿಯೆ ಹೆಚ್ಚು ವ್ಯಕ್ತವಾಗುತ್ತದೆ. ಪರಿಣಾಮ ಹೆಚ್ಚು ಕಾಣಿಸುವುದಿಲ್ಲ. ಹೀಗೆ ಸರ್ಕಾರದ ನಿರ್ಲಕ್ಷ್ಯ ಜನರ ವಿವಿಧ ರೀತಿಯ ಸಮಸ್ಯೆಗಳ ವಿವರಣೆಯನ್ನು ಲೇಖಕರು ಕಲಾತ್ಮಕವಾಗಿ ಕಲ್ಪನೆ ಮತ್ತು ವಾಸ್ತವ ಎರಡನ್ನು ಒಳಗೊಂಡ ಪ್ರಮುಖ ಕೃತಿಯಾಗಿದೆ.

ನಾ.ಡಿಸೋಜರವರ ಇದೇ ವಸ್ತುವನ್ನು ಒಳಗೊಂಡ ಮತ್ತೊಂದು ಕಾದಂಬರಿ ದ್ವೀಪ. ಈ ಕತೆಯಲ್ಲೂ ಸಹ ಶರಾವತಿ ನದಿಗೆ ಕಟ್ಟಲಿರುವ ಅಣೆಕಟ್ಟಿನಿಂದಾಗಿ ಉಂಟಾದ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಜೊತೆಗೆ ಅಣೆಕಟ್ಟು ನಿರ್ಮಾಣದಿಂದ ಇಡೀ ಹಳ್ಳಿ ಜಲಾವೃತವಾಗುತ್ತದೆ ಎಂಬ ಮುನ್ಸೂಚನೆಯಿಂದ ಅಲ್ಲಿಯ ಇಡೀ ಊರಿಗೆ ಊರೇ ಸರ್ಕಾರಿ ಅಧಿಕಾರಿಗಳಿಗೆ ಲಂಚ ಕೊಟ್ಟು ಪರಿಹಾರದ ಹಣ ತೆಗೆದುಕೊಂಡು ಮನೆ ಖಾಲಿ ಮಾಡಿಕೊಂಡು ನಗರಗಳಿಗೆ ವಲಸೆ ಬರುತ್ತಾರೆ. ಆದರೆ ಆ ಹೊಸಮನೆ ಎಂಬ ಹಳ್ಳಿಯಲ್ಲಿ ಉಳಿದ ಒಂದೇ ಕುಟುಂಬವೆಂದರೆ ಅದು ಗಣಪಯ್ಯನ ಕುಟುಂಬ. ಇವರ ಮುಳುಗಡೆ ಕೃತಿಯಲ್ಲಿ ವಲಸೆ ಹೋಗುವುದರಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ಚರ್ಚಿಸಿದ್ದಾರೆ ಈ ಕೃತಿಯಲ್ಲಿ ವಲಸೆ, ಹೋಗದಿದ್ದರೇ ಉಂಟಾಗುವ ಪರಿಣಾಮದ ಬಗ್ಗೆ ಹೆಚ್ಚು ಚರ್ಚಿಸುತ್ತಾರೆ.

ಕತೆಯು ಆರಂಭದಲ್ಲಿ ವಲಸೆ ಹೊರಡುವ ಪಾತ್ರ ಹೇರಂಬ ಹೆಗಡೆ. ತನ್ನ ಹಳ್ಳಿಯಲ್ಲಿನ ಮನೆಯನ್ನು ತೊರೆದು ಸರಕಾರದ ಮೇರೆಗೆ ತಾಳುಗುಪ್ಪದಲ್ಲಿ ಮನೆ ಮಾಡಿ ಹಳ್ಳಿಯಿಂದ ನಗರಕ್ಕೆ

ಬರುತ್ತಾನೆ. ಇವನಂತೆ ಅಲ್ಲಿಯ ಕುಟುಂಬಗಳು ಸಹ ಸರ್ಕಾರ ಹೇಳಿದ ಜಾಗಗಳಿಗೆ ಪರಿಹಾರ ತೆಗೆದುಕೊಂಡು ಹೊರ ನಡೆಯುತ್ತಾರೆ. ಆದರೆ ಕೊನೆಗೆ ಉಳಿಯುವ ಒಂದೇ ಮನೆ ಗಣಪಯ್ಯನದು. ಗಣಪಯ್ಯನೂ ಸಹ ಮುಳುಗಡೆ ಕಛೇರಿ ಎಷ್ಟೇ ಅಲೆದರೂ ಅವನ ಪರಿಹಾರ ಹಣ ಸಿಗದಾಗುತ್ತದೆ. ಕಾರಣ ಲಂಚ ಕೊಡದಿದ್ದಕ್ಕಾಗಿ ಗಣಪಯ್ಯನನ್ನು ಅಲೆಯುವಂತೆ ಮಾಡಿರುತ್ತಾರೆ. ಇದೇ ಸಿಟ್ಟಿನಲ್ಲಿ ಗಣಪಯ್ಯ ಏನಾದರೂ ಆಗಲಿ ಇಲ್ಲೇ ಇರುವ ನಿರ್ಧಾರ ಮಾಡುತ್ತಾನೆ. ಜೊತೆಗೆ ಗಣಪಯ್ಯನ ವಯಸ್ಸಾದ ತಂದೆಯ ಹುಟ್ಟೂರಿನಲ್ಲಿ ಬದುಕಿ ಸಾಯಬೇಕೆಂಬ ಹಂಬಲ ಗಣಪಯ್ಯನ ನಿರ್ಧಾರವನ್ನು ಗಟ್ಟಿಗೊಳಿಸುತ್ತದೆ.

ಆದರೆ ಹೊಸಮನೆಯಿಂದ ಎಲ್ಲಾ ಕುಟುಂಬಗಳು ಹೊರಟು ಹೋದ ಮೇಲೆ ಉಳಿದ ಒಂದು ಕುಟುಂಬದಲ್ಲಿ ಇರುವುದು ಮೂರೇ ಜನ. ಗಣಪಯ್ಯ, ಹೆಂಡತಿ ನಾಗವೇಣಿ ಮತ್ತು ಗಣಪಯ್ಯನ ತಂದೆ. ಶರಾವತಿ ನದಿ ಮಳೆಗಾಲದಲ್ಲಿ ಉಕ್ಕಿ ಬಂದು ನಾವೆಲ್ಲ ಮುಳುಗುತ್ತೇವೆ ಎಂಬ ಭಯ ಮೂವರಲ್ಲೂ ಇತ್ತು, ಆದರೆ ಅನಿವಾರ್ಯ. ಪರಿಹಾರದ ಹಣ ಸಿಕ್ಕಿಲ್ಲ, ಹೋಗಿ ಇರಲು ಹಣ ಇಲ್ಲ, ಹೋಗಿ ಬದುಕುವುದಾದರೂ ಎಲ್ಲಿ ಎಂಬ ಪ್ರಶ್ನೆ ಕಾಡುತ್ತದೆ.

ಎಷ್ಟೋ ಸಾರಿ ಮುಳುಗಡೆ ಕಛೇರಿಗೆ ಹೋಗಿ "ನಾನೇನು ಪಾಪ ಮಾಡಿದ್ದೆ ಸ್ವಾಮಿ ನಾನು, ನನ್ನ ತಂದೆ, ಹೆಂಡತಿ ಈ ವರ್ಷದ ಮಳೆಗಾಲದಲ್ಲಿ ಜಲ ಸಮಾಧಿಯಾಗಲಿ ಅಂತ ನಿಮ್ಮಾಸೆಯೇ ಹೇಗೆ"(ಅದೇ, ಪು.೧೮) ಎಂದು ಜಗಳವಾಡುತ್ತಾನೆ. ತಾನು ಯಾವ ಪರಿಹಾರವೂ ಇಲ್ಲದೇ ಮುಳುಗಡೆಯಾಗಲಿರುವ ಈ ಹಳ್ಳಿಯಲ್ಲಿರಬೇಕಾಗಿ ಬಂದಿರುವ ನೋವನ್ನು ವ್ಯಕ್ತಪಡಿಸುತ್ತಾನೆ.

ಸರಕಾರ ಕೊಡುವ ಪರಿಹಾರವಂತೂ ಅದು ಯಾವ ಕಾಲಕ್ಕೆ ಸಿಗುತ್ತದೆ ಎಂಬ ನಂಬಿಕೆಯೇ ಇರಲಿಲ್ಲ. ಯಾರೋ ಸುಡಗಾಡಿನವರೆಲ್ಲ ಇಲ್ಲಿಗೆ ಬಂದು ತೋಟ ಅಳೆದು, ಹೊಲ ಅಳೆದು ಮನೆ ಕೊಟ್ಟಿಗೆ ಜಮೀನಿಗೆಲ್ಲ ಬೆಲೆಕಟ್ಟಿ, ನಿಮಗೆಲ್ಲಿ ಜಮೀನು ಬೇಕೆಂದು ವಿಚಾರಿಸಿಕೊಂಡು ಹೋಗಿ ಒಂದು ವರ್ಷವೇ ಆಗಿತ್ತು. ಇವರು ಬಂದು ಹೋದ ಮೇಲೆ ಚಳಿಗಾಲ, ಬೇಸಿಗೆಕಾಲ, ಮಳೆಗಾಲ ಬಂದು ಹೋಗಿ ಈಗ ಮತ್ತೇ ಮಳೆ ಮೋಡ ಗುಡುಗುತ್ತಿದೆ. ಹಳ್ಳಿಯ ಐದು ಕುಟುಂಬಗಳಲ್ಲಿ ಎರಡು ಕುಟುಂಬಗಳು ಹುಟ್ಟಾಳುಗಳು. ಅವರಿಗೆ ಪರಿಹಾರವೆನಿಲ್ಲ. ಉಳಿದ ಮೂರು ಕುಟುಂಬಗಳಿಗೆ ತಕ್ಕ ಪರಿಹಾರ ಸಿಗುತ್ತದೆಯೆಂದಿದ್ದರು. ಇದೆಲ್ಲವು ಸಹ ನಾಮಕಾವಸ್ಥೆ ಯಾಗಿತ್ತು. ಲಂಚಕೊಟ್ಟರೆ ಮಾತ್ರ ಪರಿಹಾರ ಹಣ ಸಿಗುತ್ತಿತ್ತು. ಹೀಗಾಗಿ ಗಣಪಯ್ಯ ಮನೆಯಿಂದ ಕಛೇರಿಗೆ, ಕಛೇರಿಯಿಂದ ಮನೆಗೆ ತಿರುಗಾಡಿ ಸಾಕಾಗಿ "ಸರಕಾರದೋರು ನನಗೆ ಜಮೀನು, ಪರಿಹಾರ ಕೊಟ್ಟು ಅದು ಈಗ ನಾನು ತೊಕೋಳಲ್ಲು ಸೈ ಅದೇನೋ ಬೇಕಾದ್ರು ಆಗಲಿ" (ಅದೇ, ಪು.೧೮)ಎಂದು ಕೊನೆಯ ಮಾಡಿಯೇ ಬಿಟ್ಟಿದ್ದ.

ಈಗ ನಿರ್ಧಾರಕ್ಕೆ ಹೆಚ್ಚು ಸಂತೋಷಗೊಂಡಿದ್ದ ಈತನ ತಂದೆ ದುಗ್ಗಜ್ಜ. ಏಕೆಂದರೆ "ಹೊಸ ಮನೆ, ಹಳ್ಳಿ ಬಿಟ್ಟು ಹೊರಡಬೇಕೆನ್ನುವ ವಿಚಾರ ಬಂದರೆ ಮುದುಕನ ಕೈಕಾಲು ಬಿದ್ದು ಹೋಗುತ್ತದೆ. ಆತ ನೆಲ ಹಿಡಿದು ಕುಳಿತು ಬಿಡುತ್ತಾನೆ. ಈ ತುಂಡು ನೆಲದ ಮೇಲೆ ಅದೇನೋ ಪ್ರೀತಿ, ವ್ಯಾಮೋಹ. ಹೆಣ್ಣು ತನ್ನ ತೌರಿಗಾಗಿ ಹಂಬಲಿಸುವಂತಹ ಮನೋಭಾವ. ಈ ಪ್ರದೇಶವನ್ನು ಬಿಟ್ಟು ಹೋಗಬಾರದೆನ್ನುವ ಛಲ. ಮುಳುಗಿದ ಮೇಲೂ ಇಲ್ಲಿ ನಿಲ್ಲಲು ಸಾಧ್ಯವಿಲ್ಲವೇ ಎಂದಾತ ಯೋಚಿಸಿದ್ದು ನೂರು ಸಲ. ಡ್ಯಾಮು ಇಂದೆ ಒಡೆದು ಹೋಗಲಿ ಎಂದು ಹಾರೈಸಿದ್ದು ಸಾವಿರ ಬಾರಿ."(ಅದೇ, ಪು.೧೭)

ಹೀಗೆ ಹಿರಿಯ ಪೀಳಿಗೆಯೊಂದು ತಲೆತಲಾಮಾರುಗಳಿಂದ ಬದುಕಿದ್ದ ಹಿರಿಯರು ಸತ್ತರೆ ತನ್ನ ಹುಟ್ಟೂರಲ್ಲೇ ಸಾಯಬೇಕು ಎಂಬ ಆಸೆ ಎದ್ದು ಕಾಣುತ್ತದೆ. ಕೊನೆಗೂ ದುಗ್ಗಜ್ಜನ ಆಸೆ ನೆರವೇರುತ್ತದೆ. ಕೆಲದಿನಗಳಲ್ಲಿ ಗಣಪಯ್ಯನ ತಂದೆ ಸಾಯುತ್ತಾನೆ. ನಂತರ ಉಳಿಯುವ ದಂಪತಿಗಳು ಮಳೆಗಾಲದಲ್ಲಿ ನೆರವಾಗಲೆಂದು ನಾಗವೇಣಿಯ ತವರು ಮನೆಯಿಂದ ಕೃಷ್ಣಯ್ಯ ಬಂದು ಇರುತ್ತಾನೆ. ಕೃಷ್ಣಯ್ಯ ಒಬ್ಬ ಅನಾಥ. ಚಿಕ್ಕವನಿಂದಲೇ ನಾಗವೇಣಿಯ ತವರಿನಲ್ಲಿ ಬೆಳದವನು. ಇಬ್ಬರಲ್ಲೂ ಒಂದು ರೀತಿಯ ಅಸೆ, ಆಕಾಂಕ್ಷೆಗಳಿವೆ. ಆದರೆ ಹೊರಗಿನ ಪ್ರಪಂಚಕ್ಕೆ ಅವರು ಅಣ್ಣ ತಂಗಿಯಂತೆ. ಆದರೆ ಈ ವಿಷಯ ಕೃಷ್ಣಯ್ಯ ಬಂದ ಕೆಲದಿನಗಳಲ್ಲಿ ಬಯಲಾಗುತ್ತದೆ. ಗಂಡ ಹೆಂಡತಿ ನಡುವೆ ಸಂಘರ್ಷಗಳು ಬೆಳೆಯುತ್ತವೆ. ಕೊನೆಗೆ ಕೃಷ್ಣಯ್ಯ ಇಲ್ಲಿಂದ ಹೊರಟು ಹೋಗಬೇಕೆಂದು ಹೊರಟಾಗ ಆವೃತವಾದ ನೀರಿನಲ್ಲಿ ಬೀಳುತ್ತಾನೆ. ಇವನ ಹಿಂದೆಯೇ ಹೋದ ನಾಗವೇಣಿ ನೀರಿನಲ್ಲಿ ಮುಳುಗಿ ಸಾಯುತ್ತಾಳೆ. ಆದರೆ ಗಂಡ ಗಣಪಯ್ಯ ಎಲ್ಲವನ್ನು ಮೂಕನಂತೆ ನೋಡಿ ಕೊನೆಗೆ ಕಾಡು ಕಡಿದು ಅಣೆಕಟ್ಟು ಕಟ್ಟಿದರ ಪರಿಣಾಮ ಕಾಡಿನ ಪ್ರಾಣಿಗಳು ಊರಿಗೆ ಬಂದಿದುರ ಪರಿಣಾಮ ಹುಲಿಯ ಬಾಯಿಗೆ ಸಿಕ್ಕು ಸಾಯುತ್ತಾನೆ. ಹಳ್ಳಿಯ ಮುಳುಗಡೆಯ ದುರಂತದ ಜೊತೆಗೆ ಗಣಪಯ್ಯನ ಕುಟುಂಬವೂ ಸಹ ದುರಂತಕ್ಕೀಡಾಗುತ್ತದೆ.

ನೀರಿನಿಂದ ಆವೃತವಾಗಿ ದ್ವೀಪದಂತಾಗಿರುವ ಹಳ್ಳಿಯಲ್ಲಿ ಬದುಕುತ್ತಿದ್ದ ಗಣಪಯ್ಯನ ಕುಟುಂಬಕ್ಕೆ ನಾನಾ ಕಷ್ಟಗಳು ಹೆದರಾಗುತ್ತದೆ. ನಾಟಿ ಮಾಡಲು ಕೂಲಿ ಆಳುಗಳು ಸಿಗದೇ ಒದ್ದಾಡುತ್ತಾನೆ. ಜೊತೆಗೆ ಹೊರಗಿನ ಸಂಪರ್ಕವೇ ಇಲ್ಲದಂತಾಗುತ್ತದೆ. ಜೊತೆಗೆ ಕಾಡಿನ ಪ್ರಾಣಿಗಳ ಭಯ.ಹೀಗೆ ಇಡೀ ಊರು ನೀರಿನಿಂದ ಮುಳುಗಿ ಸ್ಮಶಾನವಾಗುತ್ತದೆ. ಆದರೆ ನೀರು ಮಾತ್ರ ಶಾಂತವಾಗಿ ಹರಿಯುತ್ತಲೇ ಇರುತ್ತದೆ.ಒಂದು ಹಳ್ಳಿಯ ಜನರ ಜೀವನದಲ್ಲಿ ದೀಢರನೇ ಉಂಟಾಗುವ ಬಿರುಗಾಳಿ ಇಡೀ ಜೀವನವನ್ನೇ ಹಾಳು ಮಾಡಿಬಿಡುತ್ತದೆ. ಕೆಲವರು ಜೀವನಕ್ಕೆ ಹೆದರಿ

ಅನಿವಾರ್ಯವಾಗಿಯಾದರೂ ಗುಳೆ ಹೋಗಿ ಜಮೀನು, ಮನೆ, ಮಾಡಿಕೊಂಡರೆ ಗಣಪಯ್ಯ ಕುಟುಂಬ ಮಾತ್ರ ಅನಿವಾರ್ಯವಾಗಿ ಇಲ್ಲೇ ಉಳಿದು ದುರಂತಕ್ಕೀಡಾಗುತ್ತದೆ.

ಒಟ್ಟಾರೆ ಟಿ.ಪಿ.ಅಶೋಕರವರ ಅಭಿಪ್ರಾಯದಂತೆ "ಹಲವು ವರ್ಷಗಳಿಂದ ನಿಕಟವಾಗಿದ್ದ ಊರು, ಮನೆ, ಜಮೀನುಗಳನ್ನು ಅನಿವಾರ್ಯವಾಗಿ ತ್ಯಜಿಸಿ ಹೊಸದಾಗಿ ಬೇರೆ ಕಡೆ ಬೇರು ಬಿಡಬೇಕಾದ ಪರಿಸ್ಥಿತಿ, ಸರಕಾರಿ ಕಛೇರಿ, ಆಫೀಸರ್‌ಗಳ ನಡಾವಳಿ, ಮನೆಯ ಸುತ್ತ ನೀರು ನಿಂತು ದ್ವೀಪವಾಗಿ ಒಂಟಿಯಾಗಿ ನಿಂತ ಗಣಪಯ್ಯನ ಮನೆ. ಒಟ್ಟಿನಲ್ಲಿ ಮನುಷ್ಯ ಜೀವನದ ಮೇಲೆ ಪ್ರಕೃತಿಯ ಪ್ರಭಾವದ, ಮನುಷ್ಯ ಪ್ರಕೃತಿಗಳ ಸಂಬಂಧವನ್ನು ಚಿತ್ರಿಸುವ ಕತೆ" (ಜಾಕೋಬ್ ಲೋಬೋ, ಸಿ.ಹೆಚ್. ೧೯೯೩, ಪು.೭೮) ಎಂದು ಇಡೀ ಕತೆಯ ಆಶಯವನ್ನು ಹೇಳುತ್ತಾರೆ. ಮುಳುಗಡೆ ಇಡೀ ಹಳ್ಳಿಗಳ ಕುಟುಂಬದ ಸಮಸ್ಯೆಗಳನ್ನು ಪರಿಚಯಿಸಿದರೆ ದ್ವೀಪ ಹಲವು ಕುಟುಂಬಗಳು ಗೌಣ್ಯವಾಗಿ ಒಂದು ಕುಟುಂಬದ ಮೂಲಕ ಮುಳುಗಡೆಯಿಂದಾಗುವ ಸಮಸ್ಯೆಯನ್ನು ಹೆಣೆಯುತ್ತಾರೆ. ಇಲ್ಲಿ ಒಂದೇ ಹಳ್ಳಿ ಅದು ಹೊಸಮನೆ, ಹಳ್ಳಿ ಇಲ್ಲಿರುವವರು ಸಾವಿರಾರು ಜನವಲ್ಲ ಬರೀ ಐದು ಕುಟುಂಬಗಳ ಜೀವನವಷ್ಟೇ ಕಾಣಬಹುದು. ಅದರಲ್ಲೂ ಹೇರಂಬ ಕುಟುಂಬವನ್ನಷ್ಟೇ ಸ್ವಲ್ಪ ಮಟ್ಟಿನಲ್ಲಿ ವಿವರಿಸಲಾಗಿದೆ. ಆದರೆ ವಲಸೆ ಹೊಗದಿರುವವರ ಸಮಸ್ಯೆ ಇಲ್ಲಿ ಮುಖ್ಯವಾಗುತ್ತದೆ. ಆದರೂ ಹೋಗಬೇಕೆಂದು ಪರಿಹಾರ ಹಣಕ್ಕಾಗಿ ತಿರುಗಾಡಿ ವಿಫಲನಾಗುವ ಅಂಶ ಪ್ರಮುಖವಾದುದು.

ಒಡ್ಡು ನಾ.ಡಿಸೋಜರವರ ಮುಳುಗಡೆ ವಸ್ತುವಿಗೆ ಸಂಬಂಧಿಸಿದಂತೆ ಬರೆದ ಮೂರನೇ ಕಾದಂಬರಿ. ದ್ವೀಪ, ಮುಳುಗಡೆ ಕಾದಂಬರಿ ರಚನೆಯ ನಂತರ ೧೯೯೦ ರಲ್ಲಿ ಬರೆದ ಈ ಕೃತಿ ಹಿಂದಿನ ಆ ಎರಡು ಕೃತಿಯ ವಸ್ತು ಶರಾವತಿ ನದಿ ಅಣೆಕಟ್ಟಿನ ಹಿನ್ನಲೆಯನ್ನು ಒಳಗೊಂಡಿದ್ದರು. ಇದು ಇನ್ನು ಅಣೆಕಟ್ಟು ಕಟ್ಟುವ ಮುಂಚೆಯೇ ಜನರಲ್ಲಿದ್ದ ಆತಂಕಗಳ ಬಗೆಗಳನ್ನು ಇಲ್ಲಿ ಕಾಣಬಹುದು. ಇಲ್ಲಿಯೂ ಮುಳುಗಡೆಯ ಹಿನ್ನೆಲೆಯಲ್ಲಿ ಇಡೀ ಊರು ಜಾಗ ಖಾಲಿ ಮಾಡಿಕೊಂಡು ವಲಸೆ ಹೋಗುವ ಸಂದರ್ಭ ಬರುತ್ತದೆ. ಆದರೆ ದ್ವೀಪ ಕಾದಂಬರಿಯಂತೆ ಪರಿಹಾರದ ಹಣ ಪಡೆಯುವಲ್ಲಿ ಉಂಟಾದ ಸಮಸ್ಯೆಯ ಕಾರಣಕ್ಕಾಗಿ ಹನುಮಂತಪ್ಪನ ಕುಟುಂಬವೊಂದೇ ಇಲ್ಲೇ ನೆಲೆಯಾಗಬೇಕಾಗಿ ಬಂದಾಗ ಆಗುವಂತಹ ಸಮಸ್ಯೆಗಳು ಅನಾಹುತಗಳು ಯಾತನೆಗಳನ್ನು ಚಿತ್ರಿಸುತ್ತದೆ.

ಮುಖ್ಯವಾಗಿ ತನ್ನ ಮನೆ, ಜಮೀನು ಮುಳುಗಡೆಯಾಗುವುದೋ ಇಲ್ಲೋ ಎಂಬ ವಿಷಯ ತಿಳಿಯುವ ಹೊತ್ತಿಗೆ ಬೇಸತ್ತು ಹೋಗಿದ್ದ ಹನುಮಂತಪ್ಪ ಪರಿಹಾರದ ಹಣ ಪಡೆಯುವ ಹೊತ್ತಿಗೆ ಸಾವನ್ನಪ್ಪಿದ್ದ ದುರಂತ ಕತೆಯಾಗಿ ಮೂಡಿಬರುತ್ತದೆ. ಈ ಎರಡು ಅಂಶಗಳು ಸರ್ಕಾರದ

ಅಧಿಕಾರಿಗಳ ನಿರ್ಲಕ್ಷ್ಯ, ಲಂಚ, ಪ್ರಮುಖ ಕಾರಣವಾಗುತ್ತದೆ. ಕತೆ ಆರಂಭವಾಗುವುದೇ ಅಣೆಕಟ್ಟು ಕಟ್ಟುವ ಯೋಜನೆಯಡಿಯಲ್ಲಿ ಉಂಟಾಗುವ ಸಮಸ್ಯೆಗಳು ಮತ್ತು ಜನರ ಆತಂಕಗಳಿಂದ. ನೀರು ನಿಂತು ಹಳ್ಳಿಗಳೆಲ್ಲ ಮುಳುಗಡೆಯಾಗುತ್ತದೆ ಎಂಬ ಉದ್ವೇಗದಿಂದ ಇದರಲ್ಲಿ ಹೆಚ್ಚಿನ ಉದ್ವೇಗ ಹನುಮಂತಪ್ಪನದು. ಕಾರಣ ಹನುಮಂತಪ್ಪ ಹಳ್ಳಿ ಚಿತ್ತೋಡಿ, ಮುಳುಗಡೆಯಾಗುತ್ತದೆಯೋ ಇಲ್ಲವೋ ಎಂಬ ನಿಖರತೆ ಸರಕಾರಕ್ಕೆ ಇಲ್ಲದಿರುವುದು ಹನುಮಂತಪ್ಪನನ್ನು ಇನ್ನಷ್ಟು ಸಂಕಟಕ್ಕೆ ಗುರಿ ಮಾಡುತ್ತದೆ.

ಆದರೆ ದೊಂಬೆಕಲ್ ಗೌಡ್ರು ಕೇದಿಗೆ ಹಳ್ಳನ ಬಸಪ್ಪ ಕೂಡ್ಲಮನೆ ಹೇರಂಬ ಸೇರಿದಂತೆ ಹಲವು ಕುಟುಂಬಗಳು ತಮ್ಮ ತಮ್ಮ ಹಳ್ಳಿಗಳು ಮುಳುಗುತ್ತವೆ ಎಂದು ಖಾತ್ರಿಪಡಿಸಿಕೊಂಡು ಪರಿಹಾರ ತೆಗೆದುಕೊಂಡು ಸರಕಾರ ಹೇಳಿದ ಜಾಗಗಳಿಗೆ ವಲಸೆ ಹೋಗುತ್ತಾರೆ ಈ ಕಡೆ ಹನುಮಂತಪ್ಪನ ಹಳ್ಳಿ ಮುಳುಗಡೆಯಾಗುತ್ತದೆ ಎಂದರೆ ಬೇರೆ ಕಡೆ ಹೋಗಲು ಸಿದ್ಧತೆ ಮಾಡಿಕೊಳ್ಳಬಹುದು. ಇಲ್ಲ ಮುಳುಗುವುದಿಲ್ಲವೆಂದರೆ ಇಲ್ಲೇ ಇರಲು ಏನು ಬೇಕೋ ಅದನ್ನು ಮಾಡಿಕೊಳ್ಳಬಹುದು. ಆದರೆ ಈಗಿನ ಅತಂತ್ರ ಸ್ಥಿತಿ ಹನುಮಂತಪ್ಪನನ್ನು ಕಂಗೆಡಿಸುತ್ತಿತ್ತು.

ಏನಾದರೂ ಆಗಲಿ ಎಂದು ಮುಳುಗಡೆ ಆಫೀಸಿಗೆ ಹೋಗಿ ಅಧಿಕಾರಿಗಳನ್ನು ಬಿಟ್ಟು ಬಿಡದೆ ಸಂಪರ್ಕಿಸಿದಾಗ ಅಲ್ಲಿದ್ದ ಒಬ್ಬ ಅಧಿಕಾರಿ "ಏನೂ ಹೇಳಲಿಕ್ಕಾಗಲ್ಲ, ಹಳೇ ಸರ್ವೇ ಪ್ರಕಾರ ಚಿತ್ತೋಡಿ ಮುಳುಗುವುದಿಲ್ಲ. ಹೊಸ ಸರ್ವೇ ಪ್ರಕಾರ ಮುಳುಗುತ್ತೆ ಏಕೆಂದರೆ ತಳಕಳಲೆ ಒಡ್ಡಿನ ಎತ್ತರ ನೂರತೊಂಬತ್ತೈದು ಅಡಿ ಇರಬೇಕೋ ಇಲ್ಲ ಇನ್ನೂರು ಅಡಿ ಇರಬೇಕೋ ಎಂಬುದು ಇನ್ನು ತೀರ್ಮಾನವಾಗಿಲ್ಲ. ಅದರ ಎತ್ತರ ನೂರತೊಂಬತ್ತೈದು ಅಡಿ ಆದರೆ ಚಿತ್ತೋಡಿ ಮುಳುಗುವುದಿಲ್ಲ. ಇನ್ನೂರಾದರೆ ಮುಳುಗುತ್ತದೆ" (ಡಿಸೋಜ ನಾ, ೨೦೧೨, ಮುನ್ನುಡಿ) ಎಂದು ಅಂತಿಮ ನಿರ್ಧಾರ ಹೇಳುತ್ತಾರೆ.

ಸರಕಾರ ಒಂದು ದೊಡ್ಡ ಯೋಜನೆಯನ್ನು ರೂಪಿಸುವಾಗ ಹಿಂದಿರುವ ನಿರ್ಲಕ್ಷ್ಯ, ಆ ನಿರ್ಲಕ್ಷ್ಯದಿಂದ ಹಳ್ಳಿಯ ಜನರಿಗೆ ಉಂಟಾಗುವ ಸಮಸ್ಯೆಗಳನ್ನು ಈ ಸಂದರ್ಭ ಸೂಚಿಸುತ್ತದೆ. ಹಳ್ಳಿಯ ಮುಗ್ಧ ರೈತರು ತಮ್ಮ ಜೀವದಂತಿರುವ ಹೊಲ, ಮನೆಗಳನ್ನು ಕಳೆದುಕೊಳ್ಳುವುದರ ಜೊತೆಗೆ ಅದರ ಪರಿಹಾರಕ್ಕಾಗಿ ಓಡಾಡುವ ಹೋರಾಟ, ನೋವು ಸಂಕಟಗಳು ಭಾವನಾತ್ಮಕವಾಗಿ ಚಿತ್ರಿಸಿರುವ ಲೇಖಕರ ಬರವಣಿಗೆ ಮನವನ್ನು ತಟ್ಟುವಂತೆ ಮಾಡುತ್ತದೆ. ಜೊತೆಗೆ ಹಳ್ಳಿಯ ಜನರೆಂದರೆ ನಿರ್ಲಕ್ಷ್ಯದಿಂದ ನೋಡುವ ಭ್ರಷ್ಟ ಅಧಿಕಾರಿಗಳಿಗೆ ಪೂರ್ವನಿರ್ಧರಿತವಿಲ್ಲದೆ ಸರಕಾರದ ಅಲಕ್ಷ್ಯ ಇಂದಿನ ಸ್ವಾರ್ಥ ಆಡಳಿತ ಸ್ವರೂಪವನ್ನು ಈ ಕೃತಿ ತೆರೆದಿಡುತ್ತದೆ. ಈ ತರದ ಸರ್ಕಾರದ ಅರೆಬರೆಯ ತೀರ್ಮಾನಕ್ಕೆ ಕಂಗಾಲಾಗಿದ್ದ. ಆದರೂ ಜಂಬಿಡದೆ ಕಛೇರಿಯ ಅಧಿಕಾರಿಗಳ

ಬೆಂಬೆತ್ತಿದಾಗ ಸಿಕ್ಕ ಉತ್ತರ ಚಿತ್ತೋಡಿ ಮುಳುಗುವುದಿಲ್ಲವೆಂದು. ಇದರಿಂದ ಹೆಚ್ಚು ಸಂತೋಷ ಗೊಂಡಿದ್ದ.

ಕಾರಣ ಹನುಮಂತಪ್ಪನ ಅಜ್ಜ ಯಾವುದೋ ಹಳ್ಳಿಯಿಂದ ಬಂದು ಗುಡ್ಡ ಸವರಿ ಅಂಗೈ ಅಗಲ ನೆಲ ಮಾಡಿಕೊಂಡು ಇಲ್ಲೇ ಮನೆ ಕಟ್ಟಿ ಮದುವೆ ಮಾಡಿಕೊಂಡಿದ್ದ. ಅಜ್ಜ ಅಜ್ಜಿಯ ಮರಣದ ನಂತರ ತಂದೆ ಹೊಲವನ್ನು ವಿಸ್ತರಿಸಿದ್ದ ಹಾಗೆಯೆ ಸಾಯುವ ಸಮಯದಲ್ಲಿ "ಈ ನೆಲ ಒಳ್ಳೆದು ಎಂಥಾ ಪರಿಸ್ಥಿತಿ ಬಂದ್ರೂ ಈ ಹೊಲ ಬಿಡಬೇಡ"(ಅದೇ, ಪು.೨೩) ಎಂದು ಹೇಳಿದ ಮಾತು ಹನುಮಂತನನ್ನು ಕಾಡುತ್ತಿತ್ತು. ಈಗ ಚಿತ್ತೋಡಿ ಮುಳುಗುವುದಿಲ್ಲವೆಂದಾಗ ಸಂತೋಷ ಹೆಚ್ಚಾಗಿತ್ತು.

ಈಗ ಹನುಮಂತಪ್ಪನಿಗೆ ಒಂದು ಹಂತದ ಸಮಸ್ಯೆಯಿಂದ ಪಾರಾಗಿದ್ದ. ಆದರೆ ಚಿತ್ತೋಡಿಯಿಂದ ಸಾಗರಕ್ಕೆ ರಸ್ತೆ ಇಲ್ಲದೇ ರಸ್ತೆ ಮಾಡಿಕೊಡುವುದಾಗಿ ಆಫೀಸಿಗೆ ಮತ್ತೇ ಅಲೆಯುವ ಸ್ಥಿತಿ ಉಂಟಾಗುತ್ತದೆ. ಸರಕಾರ ಈ ಸಮಸ್ಯೆಯನ್ನು ಬಗೆಹರಿಸುವ ಆಲೋಚನೆಯೂ ಸಹ ಮಾಡದೇ ತಟಸ್ಥವಾಗಿರುವುದರಿಂದ ಹಳ್ಳಿಗೂ, ನಗರಕ್ಕೂ ಸಂಪರ್ಕ ತಪ್ಪಿ ಕಾಡು ಮೃಗಗಳ ಜೊತೆ ಒಂಟಿಯಾಗಿ ವಾಸಮಾಡುವಂತಾಗುತ್ತದೆ.

ಮಗ ಸಿದ್ರಾಮ ಮದುವೆ ಮಾಡಿಕೊಂಡು ಚಿತ್ತೋಡಿಯಲ್ಲಿರದೇ ತನ್ನ ಹೆಂಡತಿ ಮನೆಗೆ ಹೊರಟು ಹೋಗುತ್ತಾನೆ. ಹೆಂಡತಿಯಾದ ಲಿಂಗಮ್ಮ ಖಾಯಿಲೆ ಬಿದ್ದು ಸಾವನ್ನಪ್ಪುತ್ತಾಳೆ. ಹಾಗಾಗಿ ಒಂಟಿಯಾಗಿ ಬಾಳು ನಡೆಸುವ ಸ್ಥಿತಿ ಒದಗುತ್ತದೆ. ಮೊದಲೇ ಹಳ್ಳಿಯಲ್ಲಿ ಯಾರು ಇಲ್ಲದ ಒಂಟಿ ಬದುಕು, ತನ್ನ ವೇದನೆಯನ್ನು ಹೇಳಿಕೊಳ್ಳಲು ಯಾರು ಇಲ್ಲದ ಸಂದರ್ಭದಿಂದ ಸುಮಾರು ಹದಿನೈದು ವರ್ಷಗಳಿಂದ ಮಾನಸಿಕ ತಳಮಳಕ್ಕೆ ಒಳಗಾಗಿದ್ದ. ಅತ್ತ ಮುಳುಗಡೆಯಾಗದೆ ಇತ್ತ ನೆಮ್ಮದಿಯೂ ಇಲ್ಲದೆ ತೊಳಲಾಡುತ್ತ ಒಂದು ದಿನ ಮನೆಯಲ್ಲಿಯೇ ತೀರಿಕೊಳ್ಳುತ್ತಾನೆ. ಅವನ ಸಾವಿನ ನಂತರ ಬಂದ ಪರಿಹಾರದ ಹಣ ವಿಫಲವಾಗುತ್ತದೆ. ಸುಬ್ರಾಯ ಚೊಕ್ಕಾಡಿರವರ ಅಭಿಪ್ರಾಯದಂತೆ "ಒಡ್ಡು ಅಭಿವೃದ್ಧಿಗೆ, ಬದಲಾವಣೆಗೆ, ಆಧುನಿಕತೆಯ ಭೋಗ ಜೀವನಕ್ಕೆ ಒಡ್ಡಿಕೊಂಡು, ತನಗರಿಯದೇನೇ ಪತನದತ್ತ ಸಾಗುತ್ತಿರುವ ಸ್ವತಂತ್ರ ಭಾರತದ ಕಠೋರ ವಾಸ್ತವದ ನುಡಿಚಿತ್ರವಾಗಿದೆ"(ಸಿ.ಹೆಚ್. ಜಾಕೋಬ್ ಲೋಬೋ ,೧೯೯೩, ಪು.೧೮) ಎಂದು ಹೇಳುವ ಅಭಿಪ್ರಾಯ ಇಲ್ಲಿ ಪೂರಕವಾಗುತ್ತದೆ.

ಒಟ್ಟಾರೆ ನಾ.ಡಿಸೋಜರವರ ವಿವರಣಾತ್ಮಕ ಬರವಣಿಗೆ ಅಣೆಕಟ್ಟಿನಿಂದ ಸಮಸ್ಯೆಗಳಿಗೆ ಒಳಗಾದವರ ಸಂವೇದನೆಗಳನ್ನು ಮನಮಿಡಿಯುವಂತೆ ಚಿತ್ರಿಸುವ ಕೌಶಲ್ಯ ಲೇಖಕರದು ಎಂದರೆ ತಪ್ಪಾಗಲಾರದು. ದ್ವೀಪ ಕಾದಂಬರಿಯಲ್ಲಿನ ಗಣಪಯ್ಯನ ಕುಟುಂಬಕ್ಕೂ ಒಡ್ಡುವಿನ ಹನುಮಂತಪ್ಪನ

ಕುಟುಂಬಕ್ಕೂ ಇರುವ ಸಮಸ್ಯೆಗಳು ಹೆಚ್ಚು ಕಡಿಮೆ ಒಂದೇ ತರನಾದವು. ಈ ಎರಡು ಕುಟುಂಬಗಳು ದುರಂತಕೊಳಗಾಗುತ್ತದೆ. ಹನುಮಂತಪ್ಪನಿಗೆ ಪರಿಸರದ ಜೊತೆಗೆ ಸರಕಾರ ಮತ್ತು ತನ್ನ ಮಗನ ಅಗಲಿಕೆ ಇನ್ನಷ್ಟು ಆಳಕ್ಕೆ ತಳ್ಳುತ್ತದೆ. ಇದು ಕೇವಲ ಒಂದು ಕುಟುಂಬದ ಕತೆಯಾಗದೆ ಈ ಸಮಸ್ಯೆಯಿಂದ ಬಳುಕುತ್ತಾ, ಬಳಲುತ್ತಿರುವ ಹಲವು ಕುಟುಂಬಗಳ ದಾರುಣ ಕತೆಯಾಗಿ ಮೂಡಿಬಂದಿದೆ.

ಮನುಷ್ಯನ ಅಭಿವೃದ್ಧಿಗಾಗಿ ಅಣೆಕಟ್ಟುಗಳ ನಿರ್ಮಾಣವಾಗುತ್ತದೆ. ಆದರೆ ಅದರಿಂದಾಗಿ ಮುಳುಗಡೆಯಾಗುವ ಸ್ಥಳದಲ್ಲಿ ವಾಸಿಸುವವರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ತಮ್ಮ ನೆಲೆಯನ್ನು ತೊರೆದು ಅವರು ಬೇರೆ ನೆಲೆಯನ್ನು ಕಂಡುಕೊಂಡು ಹೊಸ ಬದುಕನ್ನು ಆರಂಭಿಸಬೇಕಾಗುತ್ತದೆ. ತಲಕಳಲೆ ಒಡ್ಡು ನಿರ್ಮಾಣದಿಂದಾಗಿ ಅನೇಕ ಪ್ರದೇಶಗಳು ಮುಳುಗಡೆ ಯಾಗುತ್ತೆ. ಇದರಿಂದಾಗಿ ಆ ಪ್ರದೇಶದಲ್ಲಿ ವಾಸಿಸುತ್ತಿದ್ದ ರೈತರು ತಾವು ಹುಟ್ಟಿ ಬೆಳೆದ ಪ್ರೀತಿಸಿದ ಭೂಮಿಯಿಂದ ದೂರವಾಗಬೇಕಾದ ನೋವು ಅವರನ್ನು ತಟ್ಟಿ ಅವರು ಕಂಗಾಲಾಗುತ್ತಾರೆ. ಆದರೂ, ಅವರೆಲ್ಲ ಬದಲಾದ ಪರಿಸ್ಥಿತಿಯೊಂದಿಗೆ ಸುಲಭವಾಗಿ ಹೊಂದಾಣಿಕೆ ಮಾಡಿಕೊಂಡು, ಆ ಸ್ಥಳವನ್ನು ಬಿಟ್ಟು, ಸರಕಾರ ನೀಡಿದ ಹೊಸ ಸ್ಥಳದಲ್ಲಿ ಹೊಸ ಬದುಕನ್ನು ಆರಂಭಿಸುತ್ತಾರೆ.

ಹನುಮಂತಪ್ಪನ ಹೋರಾಟ ಹಾಗೂ ನೋವನ್ನು ಇನ್ನಷ್ಟು ಆಳಗೊಳಿಸುವುದು ಇನ್ನಾವ ಜತೆಯಲ್ಲೇ ಇದ್ದ ಇತರರು ಈ ಬದಲಾವಣೆಯನ್ನು ಎದುರಿಸಿ ಯಶಸ್ವಿಯಾದ ರೀತಿ ಅವನ ಜತೆಯವರೇ ಆದ ಬೀರನಾಯ್ಕ, ಸುಬ್ರಾಯ ಹೆಗ್ಡೆ ಮೊದಲಾದವರೆಲ್ಲ ಹೊಸದಾಗಿ ಸಿಕ್ಕಿದ ಭೂಮಿಯಲ್ಲೂ ಕೃಷಿ ಮಾಡಿ ಒಳ್ಳೆಯ ಬೆಳೆ ತೆಗೆದಿದ್ದರು. ಹೊಸ ಮನೆ ಕಟ್ಟಿಸಿಕೊಂಡು, ಆಧುನಿಕ ಬದುಕಿನ ಎಲ್ಲ ಸೌಲಭ್ಯಗಳನ್ನು ಹೊಂದಿ ಸುಖವಾಗಿ ಬಾಳತೊಡಗಿದ್ದರು. ನಾ.ಡಿಸೋಜರವರ ಮುಳುಗಡೆ ಕುರಿತಂತೆ ಬರೆದ ಕಾದಂಬರಿಗಳಲ್ಲಿ ಗುಣವಂತೆ ನಾಲ್ಕನೇಯ ಕಾದಂಬರಿ ಮೂರು ಕಾದಂಬರಿಗಳ ವಸ್ತುವಿನ ನಂತರದ ಪರಿಣಾಮ ಅಥವಾ ಬೆಳವಣಿಗೆ ಈ ಕತೆಯಲ್ಲಿ ಕಾಣಿಸಿ ಕೊಳ್ಳುತ್ತದೆ. ಲೇಖಕರೇ ತಮ್ಮ ಕತೆಯ ಮುನ್ನುಡಿಯಲ್ಲಿ ಹೇಳಿಕೊಳ್ಳುವಂತೆ "ಒಂದು ಊರು ಮುಳುಗಡೆಯಾಗುವುದನ್ನು ಹೋರಾಟದ ಮೂಲಕ ತಡೆದ ಜನರ ಕತೆ" (ನಾ.ಡಿಸೋಜ.೨೦೧೨, ಮುನ್ನುಡಿ)ಎನ್ನುತ್ತಾರೆ.

ಬರವಣಿಗೆಯನ್ನು ಒಂದು ಹವ್ಯಾಸವಾಗಿಟ್ಟುಕೊಂಡು ಒಂದು ಶಾಲೆಯಲ್ಲಿ ಪ್ರಾಧ್ಯಾಪಕನಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಕತೆಯ ನಾಯಕನಿಗೆ ಬಂದ ಪತ್ರದ ವಿಷಯ ತಿಳಿದುಕೊಳ್ಳುವ ಕುತುಹಲಕ್ಕಾಗಿ ಬಂದು ಗುಣವಂತೆ ಎಂಬ ಊರಿನಲ್ಲಿ ಒಂದು ಒಡ್ಡ ಹೋರಾಟದ ನಾಯಕನಾಗು ತ್ತಾನೆ. ಇಲ್ಲಿಯೂ ಕಥಾ ವಸ್ತು ಈಗಾಗಲೇ ಹೇಳಿದಂತೆ ಮುಳುಗಡೆಯಾಗುವುದನ್ನು ಅಂದರೆ

ಅಣೆಕಟ್ಟು ನಿರ್ಮಾಣವಾಗುವುದನ್ನೇ ಹೋರಾಟದ ಮೂಲಕ ಗುಣವಂತೆಯ ಜನ ತಡೆಯುವ ಕೆಲಸದ ಹಿಂದಿರುವ ಶ್ರಮ, ಭಾವನಾತ್ಮಕ ಸಂಬಂಧ ಎದ್ದು ಕಾಣುತ್ತದೆ.

ಹಾಗೆಯೆ ಗುಣವಂತೆ ಎಂಬ ಊರು ನಿರ್ಮಾಣವಾಗುವಲ್ಲಿ ಇದ್ದ ಜನರ ಶ್ರಮವನ್ನು ಲೇಖಕರು ಚಿತ್ರಿಸುತ್ತಾರೆ. "ಎಲ್ಲಿಂದಲೋ ಬಂದ ಜನ ಕಟ್ಟಿಕೊಂಡ ಊರು. ಆದರೂ, ಊರು ಹಳೆಯದಾಗಿದೆ. ಮನೆಗಳಿಗೆ ಸಾಕಷ್ಟು ಮರಗಳಿವೆ. ಮರಗಳು ಬೆಳೆದು ನಿಂತು ತಾವು ಅಲ್ಲಿಯೇ ಇದ್ದವುಗಳು ಎಂಬಂತೆ ಕೊಂಬೆಗಳು ಬೀಸುತ್ತಿವೆ. ಮನೆ ಜನ, ದನಕರುಗಳ ಕೂಡ ಈ ನೆಲಕ್ಕೆ ಮಣ್ಣಿಗೆ ಅಂಟಿಕೊಂಡಿವೆ. ಹೊಂದಿಕೊಂಡಿವೆ. ಯಾರಾದರೂ ಹೇಳಿದರಷ್ಟೇ ಗುಣವಂತೆ ಬೇರೊಂದು ಕಡೆಯಿಂದ ಇಲ್ಲಿಗೆ ಬಂದ ಹಳ್ಳಿ ಎಂಬುದು ನೆನಪಾಗುತ್ತದೆ. ಇಲ್ಲದಿದ್ದರೆ ಇದನ್ನು ಕಲ್ಪಿಸಿಕೊಳ್ಳಲು ಇಲ್ಲಿ ಬೇರೆ ಯಾವುದೇ ಆಧಾರ ಕುರುಹು ದೊರೆಯುವುದಿಲ್ಲ."(ಡಿಸೋಜ.ನಾ, ೨೦೧೨, ಪು.೧೨೧) ಎಂದು ಒಂದು ಊರಿನ ನಿರ್ಮಾಣದ ಹಿಂದಿರುವ ಕತೆಯನ್ನು ಹೇಳುತ್ತಾರೆ. ಹೀಗೆ ಹಲವು ಜನರ ಶ್ರಮದಿಂದ ಆದ ಹಳ್ಳಿಯನ್ನು ಅಣೆಕಟ್ಟು ಕಟ್ಟಿ ಮುಳುಗಡೆ ಪ್ರದೇಶವೆಂದು ಗುರುತಿಸಿ ಇಲ್ಲಿಂದ ಜಾಗ ಖಾಲಿ ಮಾಡಬೇಕೆಂದು ಹೇಳುವ ಸರ್ಕಾರಕ್ಕೆ ಹೋರಾಟದ ಮೂಲಕ ಉತ್ತರ ಕೊಡುವ ಈ ಹಳ್ಳಿಗರ ದಿಟ್ಟತನ ಎದ್ದು ಕಾಣುತ್ತದೆ. ಈ ಹಿಂದೆಯು ಸಹ ಈ ಗುಣವಂತೆಯ ಜನ ಅಣೆಕಟ್ಟು ಕಟ್ಟುವ ಕಾರಣಕ್ಕಾಗಿಯೇ ಗುಣವಂತೆಗೆ ಬಂದು ನೆಲೆಯಾಗಿ ಈಗ ಮತ್ತೆ ಅದೇ ಸಮಸ್ಯೆಗೆ ಮತ್ತೊಂದೆಡೆ ಹೋಗಬೇಕೆಂದಾಗ ಅವರ ನೋವುಗಳು ಪ್ರತಿಭಟಿಸಿ ಬಂಡಾಯವೇಳುತ್ತಾರೆ. ಇದಕ್ಕೆ ನಗರದಲ್ಲಿ ಬೆಳೆದ ಕಥಾನಾಯಕ ಮಂಜಣ್ಣ ಮಾರ್ಗದರ್ಶಕನಾಗುತ್ತಾನೆ.

ಮುಳುಗಡೆ ಕತೆಯ ನಾಯಕ ರಮೇಶನಂತೆ ಈ ಕತೆಯ ನಾಯಕ ಕತೆಗಾರ ಸಮಸ್ಯೆಯನ್ನು ಸೂಕ್ಷ್ಮವಾಗಿ ಅರ್ಥೈಸಿಕೊಳ್ಳುತ್ತಾನೆ. ಕತೆಯ ಪ್ರಮುಖ ಪಾತ್ರ 'ಮಂಜಣ್ಣ' ಕಥಾನಾಯಕಿಯ ಅಣ್ಣ ಮತ್ತು ಕಥೆಗಾರನಿಗೆ ಪತ್ರ ಬರೆದು ಕರೆಸಿಕೊಂಡಾಗ "ಹಿಂದಿನ ಗುಣವಂತೆ ಮುಳುಗಡೆ ಆಯ್ತು ನಾವೆಲ್ಲ ಸುಮಾರು ಹತ್ತು ಬಕ್ಲು ಇಲ್ಲಿಗೆ ಬಂದು ಊರು ಕಟ್ಟಿದ್ವಿ, ನಾನು ಅಪ್ಪ ಅಮ್ಮನ ಜತೆ ಇಲ್ಲಿಗೆ ಬಂದಾಗ ಮೀಸೆ ಮೂಡಿದ ಹುಡುಗ. ಮನೆತನದೋರು ಗುಣವಂತೆ ಅಮ್ಮನ ಒಕ್ಕಲು ಇವನ ಅಜ್ಜ ಅಮ್ಮನ್ನ ತೊಕೊಂಡೇ ಬಂದ ನಾವೆಲ್ಲ ಬಂದ್ವಿ, ಬಸ್ಸಿಲ್ಲ ಗಾಡಿ ಮೇಲೆ ಸಾಮಾನು ಹೇರಿಕೊಂಡು ಬಂದ್ವಿ, ಜನಕ್ಕೆ ಒಳ್ಳೆಯದಾಗುತ್ತೆ ಅಂದ್ರು ಮಹಾರಾಜರ ಸರ್ಕಾರ ಕೈತುಂಬ ಹಣಕೊಡ್ತು, ಜಮೀನು ಕೊಡ್ತು ಬಂದ್ವಿ, ಮನೆ ಕಟ್ಟಿದ್ವಿ ಊರು ಕಟ್ಟಿದ್ವೆ"(ಅದೇ, ಪು.೧೫೮) ಎಂದು ತಮ್ಮ ಹಿಂದಿನ ಬದುಕಿನ ಕತೆಯನ್ನು ಬಿಚ್ಚಿಡುತ್ತಾನೆ. ಈಗಾಗಲೇ ಮುಳುಗಡೆ ಸಮಸ್ಯೆಯನ್ನು ಅನುಭವಿಸಿ ಬಂದವರಿಗೆ ಮತ್ತೇ ಅದೇ ಸಮಸ್ಯೆ ಎದುರಾಗುತ್ತದೆ. ಅವರ ಹಿಂದಿನ ಊರಿನ ಅಭಿಮಾನ ಪ್ರೀತಿ ಎಷ್ಟು ಇತ್ತೆಂದರೆ ಬಿಟ್ಟು ಬಂದ ಗುಣವಂತೆ ಎಂಬ ಊರಿನ

ಹೆಸರನ್ನೇ ತಾವು ಕಟ್ಟಿದ ಊರಿಗೆ ಗುಣವಂತೆ ಎಂದು ಕರೆಯುತ್ತಾರೆ. ಜೊತೆಗೆ "ಜನಕ್ಕೆ ಒಳ್ಳೆದಾಗುತ್ತೆ ಅದ್ರು ಮಹಾರಾಜರ ಸರ್ಕಾರ ಕೈತುಂಬ ಹಣಕೊಡ್ತು, ಜಮೀನು ಕೊಡ್ತು ಬಂದ್ವಿ"(ಅದೇ, ಪು.೧೩೦) ಎನ್ನುವ ಮಾತು ಹಿಂದಿನ ರಾಜಪ್ರಭುತ್ವದಲ್ಲಿನ ಆಡಳಿತ ವ್ಯವಸ್ಥೆ ಉತ್ತಮವಾಗಿತ್ತು ಅಥವಾ ಸಹಾಯ ಮಾಡಿತ್ತು ಎನ್ನುವ ದೈನಗುಣ ಕಾಣಿಸುತ್ತದೆ.

ಜೊತೆಗೆ ವಲಸೆ ಬಂದ ನಂತರ ಜನರ ಬದುಕಿನ ಪರಿಣಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. "ಒಂದು ಹಳ್ಳಿ ಮುಳುಗುತ್ತೆ ಅಂದರೆ ಅದರ ಜೊತೆಲಿ ಒಂದು ನಂಬಿಕೆ, ಜೀವನ ಶ್ರದ್ಧೆ, ಆಸಕ್ತಿ ಎಲ್ಲ ಮುಳುಗಿ ಹೋಗುತ್ತೆ. ಮುಳುಗಿದ ಮನೆ ಜಮೀನಿಗೆ ಸರ್ಕಾರ ಲಕ್ಷಾಂತರ ರೂಪಾಯಿ ಕೊಟ್ಟಾಗ ಜನ ಆಧುನೀಕರಾಗಿರಲು ಬಯಸುತ್ತಾರೆ. ನಗರಗಳಿಗೆ ಬಂದು ಮನೆಕಟ್ಟಿ ನಗರವಾಸಿಗಳಾಗಿ ಕೃತಕವಾದ ಬದುಕಿಗೆ ಶರಣರಾಗ್ತಾರೆ. ಈ ಕಾರಣಕ್ಕಾಗಿ ಹಳ್ಳಿಗಳು ಮುಳುಗಬಾರದು ಆ ಜನರ ಆಸಕ್ತಿ ಉಳಿಬೇಕು"(ಅದೇ, ಪು.೨೦೦) ಎಂದು ಅಭಿಪ್ರಾಯ ಲೇಖಕರ ಆಶಯ ಸಹ ಆಗಿದೆ.

ಹಳ್ಳಿಯಿಂದ ನಗರಕ್ಕೆ ಹೋಗುವುದರಿಂದ ಉಂಟಾಗುವ ಸಮಸ್ಯೆಯ ಮೇಲೆ ಈ ಸಂದರ್ಭ ಹೆಚ್ಚು ವಿವರಿಸುತ್ತದೆ. ಹಳ್ಳಿಗಳು ನಾಶವಾಗಿ ನಗರಗಳಲ್ಲಿ ಆಧುನಿಕರಾಗಿ ಇರಲು ಬರುವ ಇಂದಿನ ಪೀಳಿಗೆಯಿಂದ ಹಳ್ಳಿಗಳು ಖಾಲಿಯಾಗುತ್ತವೆ ಅಥವಾ ಮುಳುಗಡೆಯಾಗುತ್ತವೆ. ಇದರಿಂದ ಹಳ್ಳಿಯ ನಂಬಿಕೆ, ಪ್ರೀತಿ, ಎಲ್ಲವೂ ನಶಿಸುತ್ತವೆ ಎಂಬುದು ಈ ವಾಕ್ಯಗಳಲ್ಲಿ ಕಾಣಬಹುದು. ಇದರ ಜೊತೆಗೆ ಪರಿಸರದ ನಾಶ ಆ ಮೂಲಕ ಕಾಡಿನ ಪ್ರಾಣಿ ಪಕ್ಷಿಗಳ ಗಿಡಮೂಲಿಕೆ ಔಷಧಗಳ ನಾಶವಾಗುವುದರ ಕಾಳಜಿ ಲೇಖಕರನ್ನು ಕಾಡುತ್ತದೆ. ಸರ್ಕಾರ ಅಣೆಕಟ್ಟು ಕಟ್ಟುವುದರಿಂದ ವಿದ್ಯುತ್ ತಯಾರಿಸಬಹುದು, ನೀರಾವರಿ ಮಾಡಬಹುದು ಮತ್ತು ಅದರಿಂದ ದೇಶದ ಪ್ರಗತಿ ಹೆಚ್ಚುತ್ತದೆ ಎಂಬುದನ್ನು ಅಷ್ಟೇ ಆಲೋಚಿಸುತ್ತಾರೆ. ಆದರೆ "ಮುಳುಗಡೆಯಾದ ಜನರ ಸುಖ ನೆಮ್ಮದಿಯನ್ನು ಏಕೆ ಯಾರು ಕಟ್ಟುತ್ತಿಲ್ಲ. ಈ ಶ್ರೀಮಂತ ಮಣ್ಣಿನ ಮುಳುಗಡೆಯಿಂದಾಗುವ ಕೊರತೆಯ ಬಗ್ಗೆ ಏಕೆ ಯಾರಿಗೂ ಚಿಂತೆ ಇಲ್ಲ. ಬಹಳ ಮುಖ್ಯವಾಗಿ ಈ ಹಲವು ಸಾವಿರ ಜನರನ್ನು ಕೇಳದೇ ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೇ ಅವರನ್ನು ಆತಂಕದ ಹಳ್ಳಕ್ಕೆ ತಳ್ಳಿ ನಾಳಿನ ಅವರ ಬದುಕನ್ನು ಅತಂತ್ರಗೊಳಿಸಿ ಸರಕಾರ ಏನು ಮಾಡಲು ಹೊರಟಿದೆ'(ಅದೇ, ಪು.೧೯೨) ಎಂದು ಚಿಂತೆಗೊಳಗಾಗುತ್ತಾರೆ.

ಈ ವಿವರಣೆಯಲ್ಲಿ ಲೇಖಕರ ಪರಿಸರ ಕಾಳಜಿ ಮಣ್ಣು, ನೆಲ, ಮನೆ, ಊರು ಎಂಬ ಹಲವು ಸೂಕ್ಷ್ಮ ವಸ್ತುಗಳಲ್ಲಿಯು ಮೌಲ್ಯಗಳನ್ನು ಗ್ರಹಿಸುವಿಕೆ ಕಾಣಿಸುತ್ತದೆ. ಹಲವು ಜನರ ಉದ್ಧಾರಕ್ಕಾಗಿ ಕೆಲವರ ಬಾಳು ಹಾಳಾಗುವುದು ನ್ಯಾಯವಲ್ಲ ಎಂಬ ವಾದವಿದೆ. ಸರ್ಕಾರ

ಅಣೆಕಟ್ಟಿನ ಒಳಿತುಗಳನ್ನು ಮಾತ್ರ ಯೋಚಿಸುತ್ತದೆಯೇ ಹೊರತು ಅದರಿಂದಾಗುವ ಕೆಡಕುಗಳ ಬಗ್ಗೆ ತಲೆಕೆಡಿಸಿಕೊಳ್ಳದಿರುವ ಅಂಶವೇ ಈ ಕತೆಗಳ ಮೂಲ ಅಂಶವೆಂದು ಹೇಳಬಹುದು.

ಇಲ್ಲಿಯ ಪಾತ್ರಗಳು ಭಾವನಾತ್ಮಕತೆಯನ್ನು ತುಂಬಿ ಮಾತನಾಡುವಂತಹ ಪಾತ್ರಗಳು. ಹಿರಿಯ ತಲೆಮಾರಿನ ಪರಸಜ್ಜ ದೀಪ ನಿಟ್ಟಸಿರು ಬಿಟ್ಟು ಸೀಮೆಯಲ್ಲಿ ನಮ್ಮದೇ ಮೊದಲನೇ ಹಳ್ಳಿ. ಆಮೇಲೆ ಹಂದಿಗೂಡು ಸೀಗೆಮನೆ, ಕುದುರೆ ಬಿದರೊತ್ತ, ಸಂಕದ ಮನೆ, ಕಳಲೆ ಮಾವಿನಕೊಪ್ಪ ಅಂತ ಐದಾರು ಹಳ್ಳಿಗಳು ಇವೆ. ನಾವು ರೈತಾಪಿ ಜನ ಕಷ್ಟದಲ್ಲಿ ಬದುಕಿರೋದು ಒಂದು ವರ್ಷ ಮಳೆ ಬರಲಿಲ್ಲ. ಮತ್ತೊಂದು ವರ್ಷ ಮಳೆ ಹೆಚ್ಚಾಯ್ತು. ಬೆಳೆ ಕೈಗೆ ಬರಲಿಲ್ಲ. ಮನೆಗೆ ಬೆಂಕಿ ಬಿತ್ತು, ಜಾನುವಾರುಗಳಿಗೆ ರೋಗ ಬಂತು, ಅಂತ ಒಂದಲ್ಲ ಒಂದು ನಮಗೆ ಇದ್ದವು. ಇವರ ಜೊತೆಲೀ ನಾವು ಹೇಗೋ ಬದುಕ್ತೀವಿ. ನಾವು ನಿಂತ ನೆಲ ಗಟ್ಟಿಯಾಗಿರುತ್ತೆ. ಆದರೆ ಈಗ ಆ ನೆಲವೇ ಅಲ್ಲಾಡ್ತೀರುವಾಗ ನಾವು ಬದುಕೋದು ಹೆಂಗೆ ಯಾವ ಆಧಾರದ ಮೇಲೆ"(ಅದೇ, ಪು.೬೧) ಎಂದು ಮನೋವೇದನೆಯನ್ನು ಹೊರಹಾಕುತ್ತಾನೆ.

ಹಳ್ಳಿಯಲ್ಲಿನ ರೈತರಿಗೆ ನಾನಾ ಬಗೆಯ ಕಷ್ಟಗಳು, ನೋವುಗಳು ಇರುತ್ತವೆ. ಅವುಗಳು ತಮ್ಮ ಬದುಕಿನ ಭಾಗವಾಗಿ ಸಹಿಸಿಕೊಂಡು ಹೊಂದಾಣಿಕೆಯಲ್ಲಿ ಬದುಕುತ್ತಿದ್ದವರಿಗೆ ಊರೇ ಬಿಡಬೇಕೆಂಬ ಬಹುದೊಡ್ಡ ಸಮಸ್ಯೆ ಎದುರಾದಾಗ ಅವರಲ್ಲಿ ಆಗುವ ಉದ್ವೇಗ ಪರಸಜ್ಜನ ಮೂಲಕ ಹೊರಬರುತ್ತದೆ. ಕರೆಂಟು ತಯಾರಿಸಲಿಕ್ಕೆ ಇಂತಹ ನೂರಾರು ಹಳ್ಳಿಗಳನ್ನು ಮುಳುಗಿಸುತ್ತಿದ್ದಾರೆ. ಹಳ್ಳಿ ಮುಳುಗಿಸದೆ ಜನಕ್ಕೆ ತೊಂದರೆ ಕೊಡದೆ ಬೇರೆ ರೀತಿಯಲ್ಲಿ ಕರೆಂಟು ತಯಾರು ಮಾಡಲಿಕ್ಕೆ ಬರೋದಿಲ್ಲವೇನು? ಎಂಬ ಮಾತಿಗೆ "ಬರುತ್ತೆ ಆದರೆ ಅದು ದುಬಾರಿ ಎಂದಾಗ ಮತ್ತೆ ಇದು ದುಬಾರಿ ಅಲ್ವೇ ಜನರ ಕಷ್ಟ ತಾಪತ್ರಾಯಕ್ಕೆ ಬೆಲೆ ಇಲ್ವೆ, ಜನರ ಭಾವನೆಗಳು ಅಷ್ಟು ಹಗುರವಾಗಿ ಬಿಡ್ತೆ"(ಅದೇ, ಪು.೧೯೮) ಎನ್ನುವ ಮಾತಿನಿಂದ ಜನರ ಆಲೋಚನೆಗಳು ಪ್ರಶ್ನೆ ಮಾಡುವ ಹಂತಕ್ಕೆ ತಲುಪಿದ್ದವು. ಅವಿದ್ಯಾವಂತರಾಗಿದ್ದರೂ ಕಥಾಗಾರನ ತಿಳಿವಳಿಕೆ ಹೋರಾಟ, ಚಳುವಳಿ ಜನರನ್ನು ಎಚ್ಚರಿಸಿದ್ದವು.

ಹಾಗಾಗಿ ರಾಷ್ಟ್ರಕ್ಕಾಗಿ ಊರನ್ನು ಊರಿಗಾಗಿ ಮನೆಯನ್ನು ತ್ಯಾಗ ಮಾಡು ಎಂದು ಅರ್ಥ ಕೊಡುವ ಮಾತುಗಳು ಬರೀ ಓದಲು ಚೆಂದ. ಆದರೆ ನಿಜವಾಗಲೂ ಅನುಭವಿಸುವವರ ಕಷ್ಟ ದೊಡ್ಡದು ಎಂದೆನಿಸಿತ್ತು. ಇನ್ನು ೧೯೯೦ರಲ್ಲಿ ಬಂದ ಒಡ್ಡುವಿನಲ್ಲಿ ದ್ವೀಪ ಕಾದಂಬರಿಯಂತೆ ಹನುಮಂತಪ್ಪನ ಕುಟುಂಬ ದುರಂತಕ್ಕೀಡಾಗುತ್ತದೆ. ಇಲ್ಲಿಯೂ ಸರ್ಕಾರ ನಿರ್ಲಕ್ಷ ಮಾನವೀಯ ಸಂಬಂಧಗಳಿಗೆ ಬೆಲೆಕೊಡಲು ಹೋಗಿ ಸಾವಿಗೀಡಾಗುತ್ತದೆ. ದ್ವೀಪದಲ್ಲಿ ಗಣಪಯ್ಯ ಪರಿಸರದ

ನಾಶದಿಂದ ಪ್ರಾಣಿಗೆ ಬಲಿಯಾದರೆ ಹನುಮಂತಪ್ಪ ಜೀವನದಲ್ಲಿ ಎಲ್ಲರಿಂದ ನೊಂದು ಬೇಸತ್ತು ಸಾಯುತ್ತಾನೆ.

ಈ ಮೂರು ಕಾದಂಬರಿಗಳ ವಸ್ತು ಶರಾವತಿ ನದಿಗೆ ಕಟ್ಟಿದ ಅಣೆಕಟ್ಟಿನ ಪರಿಣಾಮ ಬೀರುತ್ತದೆ. ಒಡ್ಡುವಿನಲ್ಲಿ ಕಟ್ಟುವ ಮುಂಚೆಯೇ ಆರಂಭವಾದ ಕತೆ ದ್ವೀಪ ಮುಳುಗಡೆಯಲ್ಲಿ ಕಟ್ಟಿದ ನಂತರದ ಪರಿಣಾಮ ಕಾಣಿಸುತ್ತದೆ. ಆದರೆ ಗುಣವಂತೆಯಲ್ಲಿ ಮಾತ್ರ ಈ ಮೂರು ಕಾದಂಬರಿಗಳ ವಸ್ತುವಿಗಿಂತ ಸ್ವಲ್ಪ ಮಟ್ಟಿನ ಬದಲಾವಣೆಗಳು ಜನರಲ್ಲಿ ಮೂಡಿದ ಜಾಗ್ರತೆ ಕಾಣುತ್ತದೆ. ಹಾಗಾಗಿ ಅಣೆಕಟ್ಟು ನಿರ್ಮಾಣವನ್ನು ತಡೆಯುವಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಈ ಚಳುವಳಿಯಲ್ಲಿಯೂ ನೂರಾರು ಜನ ಸಾವು ನೋವಿಗೆ ಶರಣರಾಗುತ್ತಾರೆ. ಆದರೆ ಕೊನೆಗೆ ಜಯ ದೊರಕಿತು ಎಂಬುದು ಸಂತೋಷದಾಯಕವಾಗುತ್ತದೆ.

ಹೀಗೆ ಇಡೀ ಊರಿಗೆ ಊರೇ ಹೋದ ವಲಸೆಯಲ್ಲಿ ಲೇಖಕರೇ ಹೇಳುವಂತೆ "ಸಂಸ್ಕೃತಿ, ಕಲೆ, ಸಂಬಂಧ, ಊರು, ನಂಬಿಕೆ, ಜೀವನ ವಿಧಾನ, ಪ್ರೀತಿ, ವಾತ್ಸಲ್ಯ ಎಲ್ಲವೂ ನಾಶವಾಗುತ್ತದೆ. (ಡಿಸೋಜ.ನಾ, ೨೦೧೧, ಪು.೧೭೮) ಇಲ್ಲಿ ಅಲ್ಲಿ ಕೆಲವು ಪಾತ್ರಗಳ ಸ್ವ ಇಚ್ಛೆಯಿಂದಲೇ ಹೊರಡುವ ಪಾತ್ರಗಳು ಕಡಿಮೆ ಅಂದರು. ಅವುಗಳನ್ನು ಇಲ್ಲಿ ಮುಖ್ಯವಾಗಿರುತ್ತವೆ. ಅಂದರೆ ವಲಸೆ ಭಿನ್ನ ಸ್ವರೂಪ, ಭಿನ್ನ ದೃಷ್ಟಿಕೋನಗಳಾಗಿ ನೋಡಬಹುದಾಗಿದೆ. ಆದರೂ ಲೇಖಕರು ಕೊಡುವ ಹೆಚ್ಚಿನ ಪ್ರಾಧ್ಯಾನತೆ ನೋವು ಉಂಡ ವಲಸಿಗರಿಗೆ ಅಥವಾ ವಲಸೆ ಹೋಗಲಾಗದೆ ಉಳಿದ ಕುಟುಂಬಗಳ ವೇದನೆಗೆ ಎಂಬುದು ಇಲ್ಲಿ ಗಮನಾರ್ಹವಾದುದು. ಹಾಗಾಗಿ ಸಮಾಜ ಬದಲಾವಣೆಯಾದಂತೆ ಲೇಖಕರು ಒಂದೇ ವಸ್ತುವಿನಲ್ಲಿನ ಅಭಿಪ್ರಾಯಗಳು ಕಾಲಾನಂತರ ಬದಲಾದ ಅಂಶಗಳು ಗಮನಿಸ ಬಹುದು.

ಕೊನೆಯಲ್ಲಿ ಕಥಾನಾಯಕ ಹಳ್ಳಿಜನಕ್ಕೆ ಇದರಿಂದಾಗುವ ಅನಾನುಕೂಲ, ಸಮಸ್ಯೆಗಳ ಕುರಿತು ವಿವರಿಸಿ ಸರ್ಕಾರದ ಯೋಜನೆ ವಿರುದ್ಧ ಚಳುವಳಿ ಆರಂಭಿಸುತ್ತಾ ಇಡೀ ಸುತ್ತಮುತ್ತಲಿನ ಹಳ್ಳಿಯ ಜನರನ್ನು ಒಗ್ಗೂಡಿಸಿ ಹೋರಾಟ ಆರಂಭಿಸುತ್ತಾನೆ. ಈ ಹೋರಾಟದಲ್ಲಿ ಹಲವರು ಬಲಿಯಾಗುತ್ತಾರೆ. ಸಾವು ನೋವುಗಳನ್ನು ಅನುಭವಿಸುತ್ತಾರೆ. ಇದರ ಪರಿಣಾಮವಾಗಿ ಸರಕಾರ ಚಿಕ್ಕ ಡ್ಯಾಂಗಳನ್ನು ಕಟ್ಟುವುದರಿಂದ ಯಾವುದೇ ತರಹದ ತೊಂದರೆಗಳು ಆಗಲಾರದೆಂಬ ಭರವಸೆಯೊಂದಿಗೆ ಜನರಿಗೆ ಸ್ಪಂದಿಸಿತ್ತು.

ಒಟ್ಟಾರೆಯಾಗಿ ಸರಕಾರದ ಬಲವಂತದ ವಲಸೆಗೆ ಹಳ್ಳಿಯ ಜನ ಅನಿವಾರ್ಯವಾಗಿ ಬಲಿಯಾಗುತ್ತಾರೆ. ಇದರಿಂದ ಸಂಬಂಧಗಳು ಕಳಚಿಕೊಳ್ಳುತ್ತವೆ. ಪರಿಸರ ನಾಶವಾಗುತ್ತದೆ. ಹೀಗಾಗಲೇ ಒಂದು ಕಡೆಯಿಂದ ವಲಸೆ ಬಂದ ಜನಕ್ಕೆ ಊರು ಕಟ್ಟಿಕೊಂಡು ನೆಮ್ಮದಿಯಿಂದ ಬದುಕುತ್ತಿದ್ದವರಿಗೆ

ಮತ್ತೇ ಅದೇ ಸಮಸ್ಯೆ ಎದುರಾದಾಗ ಉಂಟಾಗುವ ಆತಂಕವನ್ನು ಲೇಖಕರು ಸಂವೇದನಾತ್ಮಕವಾಗಿ ವಿವರಿಸುತ್ತಾರೆ. ಇಡೀ ಊರಿಗೆ ಊರೇ ವಲಸೆ ಬರುವವರ ಸಮಸ್ಯೆ, ನೋವು, ಆತಂಕಗಳಿಗೆ ನಾ.ಡಿಸೋಜರವರ ನಾಲ್ಕು ಕತೆಗಳು ಉದಾಹರಣೆಯಾಗುತ್ತವೆ. ೧೯೭೮ರಲ್ಲಿ ರಚನೆಯಾದ ದ್ವೀಪ ಕಾದಂಬರಿಯಲ್ಲಿ ಒಂದು ಕುಟುಂಬ ಅನಿವಾರ್ಯವಾಗಿ ಅಲ್ಲೇ ನೆಲೆಯಾಗಿ ಉಳಿದ ಕುಟುಂಬಗಳು ಸ್ಥಳಾಂತರಗೊಳ್ಳುವಾಗ, ಅಲ್ಲಿಯ ಜನ ಸರ್ಕಾರಕ್ಕೆ ಜೀವಕ್ಕೆ ಬೆದರಿ ಲಂಚ ಕೊಟ್ಟು ಪರಿಹಾರ ಹಣ ಕೊಟ್ಟು ಬೇರೆ ಕಡೆ ಹೋಗಿ ನೆಲೆಯಾಗಿ ಬದುಕು ಕಂಡುಕೊಂಡರೆ ಗಣಪಯ್ಯ ಮಾತ್ರ ಅಧಿಕಾರಿಗಳಿಗೆ ಪ್ರತಿಭಟಿಸುವ ಅಂಶ ಕಾಣುವುದಿಲ್ಲ ಬಂದಿದ್ದನ್ನು ಅನುಭವಿಸಿ ದುರಂತಕ್ಕೆ ಒಳಗಾಗುತ್ತಾನೆ. ಇನ್ನು ೧೯೮೮ರಲ್ಲಿ ಬಂದ ಮುಳುಗಡೆ ಅತಿ ಹೆಚ್ಚು ಪಾತ್ರಗಳ ವೇದನೆ ಎದ್ದು ಕಾಣುತ್ತದೆ. ಕತೆಯ ನಿರೂಪಣೆಗೆ ಮತ್ತು ಕೆಲಸಕ್ಕೆ ಬಂದ ಸಂಶೋಧಕನ ಮೂಲಕ ಇಲ್ಲಿಯ ಪಾತ್ರಗಳು ತಮ್ಮ ವೇದನೆ ಹಂಚಿಕೊಳ್ಳುತ್ತಾರೆ. ಗುಣವಂತೆಯಲ್ಲಿಯೂ ಸಹ ಕಥಾಗಾರನಿಗೆ ಹಳ್ಳಿಯ ಜನ ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳುವುದನ್ನು ಗಮನಿಸಬಹುದು.

ಒಟ್ಟಾರೆ ಇಲ್ಲಿ ಬರುವ ಊರಿನ ವಲಸೆ ಕುರಿತ ಕತೆ ಕಾದಂಬರಿಗಳು ಬರೀ ವಲಸೆಯನ್ನು ಮಾತ್ರ ಚಿತ್ರಿಸದೇ ಇನ್ನಿತರ ಆನುಷಂಗಿಕ ವಿವರಗಳನ್ನು ಸಹ ನೋಡಬಹುದಾಗಿದೆ. ಉದಾಹರಣೆಗೆ ಮುಳುಗಡೆ ಕಾದಂಬರಿಯಲ್ಲಿ ಕೌಟುಂಬಿಕ ಕಲಹ, ವಿಧವಾ ಸಮಸ್ಯೆ, ಗೌಡರ ಲೈಂಗಿಕ ಶೋಷಣೆಗಳು ಸಹ ಕಾಣಿಸಿಕೊಳ್ಳುತ್ತವೆ. ಕತೆಯ ನಾಯಕ ಅಥವಾ ಸಂಶೋಧಕನು ಆದ ರಮೇಶನ ಕುಟುಂಬದಲ್ಲಿ ಕಾಣಿಸಿಕೊಳ್ಳುವ ಗಂಡ, ಹೆಂಡತಿಯ ಮನಸ್ತಾಪಗಳು ಕುಟುಂಬವೇ ಹೊಡೆಯುವ ಹಂತ ತಲುಪಿ ಕೊನೆಗೆ ಸರಿಹೋಗುತ್ತದೆ. ಅದೇ ರೀತಿ ವಿಧವೆಯಾಗಿದ್ದ ಪಾರ್ವತಮ್ಮನಿಗಿದ್ದ ಸಾಮಾಜಿಕ ಕಟ್ಟುಪಾಡುಗಳು ರಂಗೇಗೌಡ ಕೂಲಿ ಆಳುಗಳ ಮೇಲೆ ಮಾಡುತ್ತಿದ್ದ ಲೈಂಗಿಕ ಶೋಷಣೆಗಳು, ಜೊತೆಗೆ ಸರ್ಕಾರಿ ಅಧಿಕಾರಿಗಳ ಲಂಚದ ಹಾವಳಿಗಳು ಇವತ್ತಿನ ಸಾಮಾಜಿಕ ಸ್ಥಿತಿಗತಿಗಳನ್ನು ಚಿತ್ರಿಸುತ್ತದೆ.

ಹಾಗೆಯೆ ನಾ.ಡಿಸೋಜರವರ ಮುಳುಗಡೆ ಕಾದಂಬರಿಯಂತೆ ಇನ್ನು ಉಳಿದ ಒಡ್ಡು, ಗುಣವಂತೆ, ದ್ವೀಪ ಕಾದಂಬರಿಯಲ್ಲಿಯೂ ಅಧಿಕಾರಿಗಳಿಗಿದ್ದ ಹಳ್ಳಿಯ ಜನರ ಮೇಲಿನ ನಿರ್ಲಕ್ಷ್ಯ ಪ್ರಮುಖವಾಗಿದೆ. ಜೊತೆಗೆ ಗುಣವಂತೆ ಕಾದಂಬರಿಯಲ್ಲಿ ಇಡೀ ಹಳ್ಳಿಯ ಜನ ಅಣೆಕಟ್ಟು ಕಟ್ಟುವುದನ್ನು ತಡೆಗಟ್ಟುವ ಮೂಲಕ ತೋರಿಸುವ ಒಗ್ಗಟ್ಟು ಪರಿಸರ ಕಾಳಜಿ, ಮರಗಿಡಗಳ ಸಂರಕ್ಷಣೆ ಎದ್ದು ಕಾಣುತ್ತದೆ. ಅದೇ ರೀತಿ ದ್ವೀಪ ಕಾದಂಬರಿಯಲ್ಲಿ ಹಳೆಯ ತಲೆಮಾರಿನವನಾದ ದುಗ್ಗಜ್ಜನ ಮನೆ, ಜಮೀನಿನ ಮೇಲಿನ ವ್ಯಾಮೋಹ ಅತಿಯಾದ ಪ್ರೀತಿ, ನಂಬಿಕೆ ಕಾಣಿಸುತ್ತದೆ. ಹೀಗೆ ವಲಸೆ ಪ್ರಕ್ರಿಯೆ, ಕಾರಣ, ಪರಿಣಾಮಗಳ ಜೊತೆ ಜೊತೆಯೇ ಲೇಖಕರ ಇನ್ನಿತರ

ಹಲವಾರು ಅಂಶಗಳು ಪಾತ್ರಗಳ ಮೂಲಕ ಸಂವೇದನೆಯ ರೂಪದಲ್ಲಿ ಕಲಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ.

**೫.೪. ಸಮುದಾಯ ವಲಸೆ**

ಸಮುದಾಯ ಒಂದೇ ರೀತಿಯ ಆಚಾರ–ವಿಚಾರ, ಜೀವನ ಕ್ರಮವುಳ್ಳ ಕೆಲವು ನಿರ್ದಿಷ್ಟ ಕುಟುಂಬಗಳ ಸಮೂಹ ಎನ್ನಬಹುದು. ಇಂತಹ ಆಚಾರ–ವಿಚಾರ, ಸಂಸ್ಕೃತಿಗಳಿಗೆ ಧಕ್ಕೆ ಒದಗಿದಾಗ ಸಮುದಾಯದ ಅಸ್ತಿತ್ವದ ಚಿಂತನೆ, ಉಳಿವುಗಳು ಬಹುಶಃ ಈ ರೀತಿಯ ಚಲನಾತ್ಮಕ ಪ್ರಕ್ರಿಯೆಗೆ ದಾರಿಯಾಗುತ್ತವೆ. ಅದರಲ್ಲೂ ಅಲೆಮಾರಿ ಹಿನ್ನೆಲೆಯಿಂದ ಬಂದ ಸಮುದಾಯಗಳಂತೂ ಅಕಸ್ಮಾತಾಗಿ ಒಂದು ಕಡೆ ನೆಲೆ ಊರಿದ್ದರೆ, ಒದಗಿ ಬರುವ ಇಂತಹ ಸಂದರ್ಭಗಳನ್ನು ಹಿಂದು ಮುಂದು ನೋಡದೇ ಕಡೇ ಪಕ್ಷ ಸದ್ಯದ ಸ್ಥಿತಿಯನ್ನು ನಿಭಾಯಿಸಲು ಗುಳೆ ಹೋಗುವ ಪರಿಸ್ಥಿತಿಯನ್ನಂತೂ ಒಪ್ಪಿಕೊಳ್ಳುತ್ತದೆ.

ಈ ಹಿನ್ನೆಲೆಯಲ್ಲಿ ನೇಮಿಚಂದ್ರರವರ 'ಯಾದ್‌ವಶೇಮ್' ಕಾದಂಬರಿ ಶೀರ್ಷಿಕೆಯಲ್ಲಿ ಅವರೇ ಸೂಚಿಸುವಂತೆ ನೂರು ಸಾವಿರ ನೆನಪು ಇದೊಂದು ಚಾರಿತ್ರಿಕ ಜನಾಂಗೀಕ ವಿಷಯಗಳನ್ನೊಳಗೊಂಡ ಕಾದಂಬರಿ ನಾಜಿ ಯುದ್ಧದಲ್ಲಿ ಜರ್ಮನಿಯನ್ನು ಬಿಟ್ಟು ಭಾರತಕ್ಕೆ ಬರುವ ಯಾನಾ ಪಾತ್ರ ಒಂದು ಸ್ಪಷ್ಟವಾಗಿ ಭೂತದಲ್ಲಿ ಬದುಕುತ್ತಿರುತ್ತಾಳೆ. ಸಾಮಾನ್ಯವಾಗಿ ವಲಸೆ ಎನ್ನುವುದು ಒಂದು ಹಂತದಲ್ಲಿ ನೆನಪಿನ ಕೊಂಡಿಗಳೊಂದಿಗೆ ವಾಸ್ತವದ ನಂಟನ್ನು ಬೆಸೆದು ಸ್ಥಿರವಾಸ್ತವ್ಯದೆಡೆಗೆ ಸಾಗುವ ಒಂದು ಪ್ರಯತ್ನವಾಗಿರುತ್ತದೆ. ಆದರೆ, ಈ ವಲಸೆ ಮತ್ತೇ ತನ್ನ ಮೂಲನೆಲೆಯನ್ನು ಹುಡುಕಿ ಪ್ರದೇಶದಿಂದ ಪ್ರದೇಶವಷ್ಟೇಯಲ್ಲ ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರದೆಡೆಗೆ ಅಲೆಯುವ ಒಂದು ಭಿನ್ನ ಪ್ರಯತ್ನವಾಗಿ ಕಾಣುತ್ತದೆ. ಸ್ವಪ್ನಸಾರಸ್ವತದಂತಹ ಕಾದಂಬರಿಯಲ್ಲಿ ಸಮುದಾಯವೊಂದು ನಾಲ್ಕು ನೂರು ವರ್ಷಗಳ ನಂತರ ಮತ್ತೇ ಗೋವೆಯನ್ನು ಮತ್ತೇ ಕಾಣಬಹುದು ಎಂದು ಹಂಬಲಿಸುವ ಕನಸಿನೊಂದಿಗೆ ಮುಕ್ತಾಯಗೊಂಡರೆ ೬೦ ವರ್ಷಗಳ ನಂತರದಲ್ಲಿ ತನ್ನ ಮೂಲನೆಲೆಯನ್ನು ಪಾತ್ರವೊಂದು ಹುಡುಕುತ್ತ ಹೋಗುವ ಒಂದು ವಿಭಿನ್ನ ಪ್ರಯತ್ನ ಇಲ್ಲಿದೆ. ಚಾರಿತ್ರಿಕ ಘಟನಾವಳಿಯೊಂದರಲ್ಲಿ ತನ್ನವರನ್ನು ಎಲ್ಲರನ್ನು ಕಳೆದುಕೊಂಡು ಭಾರತಕ್ಕೆ ಬರುವ ಯಾನಾ, ನಂತರದಲ್ಲಿ ೬೦ ವರ್ಷಗಳ ಮನದಾಳದ ನೋವಿನಲ್ಲಿ ಕ್ಷಣ ಕ್ಷಣದ ಘಟನೆಗಳನ್ನು ತನ್ನ ಮತ್ತು ತನ್ನವರೊಂದಿಗೆ ಕಾಲ ಕಳೆಯಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಾಳೆ. ಕಾಲಗರ್ಭದಲ್ಲಿ ಆ ಘಟನೆಗಳು ಕಳೆದು ಹೋಗಿವೆ, ಎಂಬ ಹೊತ್ತಿಗೆ ಸುಮಾರು ೬೦ ವರ್ಷಗಳ ನಂತರ ಆಕೆಗೆ ತನ್ನ ನೆಲ ತನ್ನ ಜನ ತನ್ನ ಮೂಲ ಬೇರನ್ನು ಹುಡುಕಿ ಹೊರಡುವ ಸಂದರ್ಭವೊಂದು ಆಕಸ್ಮಾತಾಗಿ ಎದುರಾಗುತ್ತದೆ.

ಹೀಗೆ ಮೊದಲಿನಿಂದಲೂ ಅದೇ ನೋವಿನೊಂದಿಗೆ ಪರದಾಡುವ ಆ ಜೀವ ಕೊನೆಗೆ ತಕ್ಕ ಮಟ್ಟಿನ ಒಂದು ಉತ್ತರ ಕಂಡುಕೊಳ್ಳುತ್ತರಾದರೂ ನಂತರ ಅಲ್ಲಿ ಕಂಡಂತಹ ಪ್ಯಾಲೆಸ್ಟೈನ್, ಇಸ್ರೇಲ್ ದಾಳಿಗಳನ್ನು ಹಾಗೂ ಮುಂದುವರೆಯುತ್ತಿರುವ ಜನಾಂಗೀಯ ಸಂಘರ್ಷಗಳನ್ನು ಆಕೆ ಅರ್ಥೈಸುವ ಪರಿ ಹೀಗಿದೆ. "ಹಿಟ್ಲರ್ ಸತ್ತ. ಆದರೆ ಮಕ್ಕಳು ಮೊಮ್ಮಕ್ಕಳನ್ನು ಬಿಟ್ಟು ಹೋದ. ಜನಾಂಗವಾದ ಇತಿಹಾಸದ ಪುಟಗಳಲ್ಲಿ ಮುಚ್ಚಿ ಹೋಗಲಿಲ್ಲ. ಮತ್ತೆ ಮತ್ತೆ ತೆರದ ಪುಟಗಳು ನೆತ್ತರದಲ್ಲಿ ಬರೆದ ಪುಟಗಳು ನಿಜಕ್ಕೂ ಹಿಟ್ಲರ್ ಎಲ್ಲಿ ಸತ್ತ? ಎಲ್ಲೆಲ್ಲೂ ಹುಟ್ಟಿದ."(ನೇಮಿಚಂದ್ರ, ೨೦೦೭, ಪು.೨೫೩) ಹೀಗೆ ಜರ್ಮನಿಯಲ್ಲಿನ ಹಿಟ್ಲರ್‌ನ ಅಟ್ಟಹಾಸದಿಂದ ಜೀವ ಉಳಿಸಿಕೊಳ್ಳಲೆಂದು ಬರ್ಲಿನ್‌ನಿಂದ ತಪ್ಪಿಸಿಕೊಂಡು ಅಮ್‌ಸ್ಟರ್‌ಡ್ಯಾಮಿಗೆ, ಅಮ್‌ಸ್ಟರ್‌ಡ್ಯಾಮಿನಿಂದ ಭಾರತಕ್ಕೆ ಬಂದ ಯಾಹೂದಿಗಳಾದ ಯಾನ ಮತ್ತು ತಂದೆಯ ವಲಸೆಯಿಂದ ಆರಂಭವಾದ ಕತೆ ಬಿಟ್ಟು ಬಂದ ತನ್ನ ತಾಯಿ ನೆಲದ ಕರಾಳ ದಿನಗಳನ್ನು ನೆನಪಿಸುತ್ತದೆ. ಯುರೋಪಿನ ಇತಿಹಾಸ ಹಿಟ್ಲರ್ ಅಧಿಕಾರಕ್ಕೆ ಬಂದಿದ್ದು ಎರಡನೇಯ ಜಾಗತೀಕ ಯುದ್ಧ ಇಸ್ರೇಲ್ ಸ್ಥಾಪನೆ ಪ್ಯಾಲೆಸ್ಟೈನ್‌ದಂತಹ ಹಲವು ಚರಿತ್ರೆಯ ಅಂಶಗಳನ್ನು ಕತೆ ಬಿಚ್ಚಿಡುತ್ತದೆ.

ನಾಜಿ ಪಕ್ಷದ ಕ್ರೌರ್ಯದಿಂದ ಜೀವ ಬಿಗಿಹಿಡಿದು ಬದುಕು ನಡೆಸುತ್ತಿದ್ದ ಲಕ್ಷಾಂತರ ಯಾಹೂದಿಗಳು ಹಿಟ್ಲರ್ ದಾಳಿಯನ್ನು ತಡೆಯಲಾಗದೆ ಜೀವಕ್ಕೆ ಹೆದರಿ ಅಮೆರಿಕಾ, ಕ್ಯೂಬಾ, ಇಂಗ್ಲೆಂಡ್ ಪ್ಯಾಲೆಸ್ಟೈನ್ ದಕ್ಷಿಣ ಆಫ್ರಿಕಾ, ಯಾವ ದೇಶವಾದರೂ ಸರಿ ಇಲ್ಲಿಂದ ಹೊರಗೆ ಹೋಗಬೇಕೆಂದು ಹಂಬಲಿಸುತ್ತಿದ್ದರು. ಹೀಗೆ ಹಂಬಲಿಸುತ್ತಿದ್ದವರ ಕುಟುಂಬಗಳಲ್ಲಿ ಯಾನಾದು ಒಂದು ಕುಟುಂಬವಾಗಿತ್ತು. ತಂದೆ ವಿಜ್ಞಾನಿಯಾಗಿದ್ದರು ಯಾಹೂದಿಗಳ ವಿರುದ್ಧ ಕಾನೂನುಗಳು ಸೃಷ್ಟಿಸಿ ಸಮಾಜದಲ್ಲಿ ಯಾವ ಕ್ಷೇತ್ರದಲ್ಲಿಯೂ ಅವರು ದುಡಿಯುವಂತಿಲ್ಲವೆಂದು ಹೊರ ಹಾಕಲಾಗಿತ್ತು. ಇದಷ್ಟೇ ಅಲ್ಲದೇ ಯಾವ ಮನೆಯಲ್ಲೂ ಯಾಹೂದಿಗಳು ಇರಕೂಡದು ಎಂಬ ಹಿಟ್ಲರ್ ಆದೇಶದಿಂದ ಎಲ್ಲರನ್ನು ಜೀವ ಸಹಿತ ಕೊಲೆ ಮಾಡಲಾಗುತ್ತಿತ್ತು. ಇದರಿಂದ ಯಾನಾಳ ತಂದೆ ರಾತ್ರೋ ರಾತ್ರಿ ಜೀವಕ್ಕೆ ಹೆದರಿ ಬರ್ಲಿನ್‌ನಿಂದ ಪಾರಾಗಬೇಕೆಂದು ತಯಾರಾಗುತ್ತಾರೆ. ಮನೆಯ ವಸ್ತುಗಳೆಲ್ಲವನ್ನು ಕಟ್ಟುವಾಗ ದುಃಖ ಉಕ್ಕಿ ಬರುತ್ತದೆ. "ಏನನ್ನು ಕಟ್ಟುವುದು ಯಾವಯಾವುದನ್ನು? ಬದುಕಿ ಬಾಳಿದ ನೆಲದ ನೆನಪುಗಳನ್ನೆಲ್ಲ ಮೂಟೆಕಟ್ಟಿ ಹೊತ್ತೊಯ್ಯಲು ಸಾಧ್ಯವೆ? ಈ ಮನೆಯ ಒಂದೊಂದು ವಸ್ತುವಿನೊಡನೆಯೂ ನಂಟಿತ್ತು, ನೆನಪಿತ್ತು, ಇತಿಹಾಸವಿತ್ತು. ಇದು ಅಜ್ಜಿ ಕೊಟ್ಟ ಅಡುಗೆಯ ಸಾಮಾನು, ಇದು ಪ್ರೀತಿಯ ಮಾವ ಕೊಟ್ಟ ನೆಲದ ಹಾಸು, ಈ ಪೆಟ್ಟಿಗೆಯಲ್ಲಿ ನನ್ನ ಮದುವೆಯ ಬಿಳಿಯ ಲೇಸಿನ ಗೌನು, ಇದು ನಾನು ಆರಿಸಿಕೊಂಡ ಹೂದಾನಿ ಆ ಆಲ್ಬಮ್‌ಗಳ ತುಂಬಾ ನೆನಪುಗಳು"(ನೇಮಿಚಂದ್ರ, ೨೦೦೭, ಪು.೧೧೫) ಎಂದು ಚಡಪಡಿಸುತ್ತಾಳೆ.

'ಬರ್ಲಿನ್‌ನಲ್ಲಿ ತಮ್ಮ ಬೇರುಗಳಿತ್ತು ಮೂರು ತಲೆಮಾರಿನಿಂದ ಅಲ್ಲಿ ನೆಲೆಯೂರಿದ್ದೆವು. ಅದು ನಮ್ಮ ನೆಲವಾಗಿತ್ತು, ನಮ್ಮ ತಾಯ್ನಾಡು"(ನೇಮಿಚಂದ್ರ, ೨೦೦೭, ಪು.೧೦೩) ಎಂದು ಹಂಬಲಿಸುತ್ತಿದ್ದ ಜನಕ್ಕೆ ಹಿಟ್ಲರ್‌ನ ಈ ಕ್ರೌರ್ಯ ತಮ್ಮ ಬೇರುಗಳನ್ನು ಕಳಚುವಂತೆ ಮಾಡಿತ್ತು. ಇಂಥ ಒಂದು ಭಾವನಾತ್ಮಕ ಸಂಬಂಧ ಹೊಂದಿದ್ದ ಜಾಗವನ್ನು ತಲೆಮಾರುಗಳ ಬೇರಿಳಿಸಿ ಬೆಳೆದ ನೆಲವಿದು. ನಾವು ನಿಂತ ನೆಲವನ್ನೆ ಕಸಿದು, ಬುಡಸಮೇತ ನಮ್ಮನ್ನು ಕಿತ್ತು ಒಗೆಯುವ ರಕ್ಕಸ ಯೋಜನೆ ಸಿದ್ಧವಾಗುತ್ತಿದೆ ಎಂದು ಊಹಿಸಲು ಕಷ್ಟವಿದ್ದ ಜನಕ್ಕೆ ದೀಢಿರನೇ ಹೊರಡುವ ಈ ವಲಸೆ ಎಲ್ಲರಿಗೂ ಆಘಾತವಾಗಿತ್ತು. ಆದರೂ ಅನಿವಾರ್ಯತೆ ಇತ್ತು. ಹೀಗೆ ಅನಿವಾರ್ಯತೆಯಿಂದ ಬಂದ ಯಾನಾ ಕುಟುಂಬ ಅಮ್‌ಸ್ಪರ್‌ಡ್ಯಾಮ್‌ನಲ್ಲಿ ಅಕ್ಕ, ತಾಯಿ, ತಮ್ಮನನ್ನು ಕಳೆದುಕೊಂಡು, ತಂದೆ, ಮಗಳು ಭಾರತಕ್ಕೆ ಬಂದು ಇಳಿಯುತ್ತಾರೆ. ಭಾರತದ ಸಂಸ್ಕೃತಿ, ಸಂಪ್ರದಾಯವನ್ನೆಲ್ಲಾವನ್ನು ಅಚ್ಚರಿಯಿಂದ ಗಮನಿಸುತ್ತಾರೆ. ತಾವು ಯಾಹೂದಿ ಎಂದು ತಿಳಿದರೆ ಮತ್ತೇ ತನ್ನ ಬದುಕನ್ನು ಕಸಿದುಕೊಳ್ಳುತ್ತಾರೆ ಎಂಬ ಭಯದಲ್ಲಿ ತನ್ನ ಧರ್ಮವನ್ನು ಬಚ್ಚಿಟ್ಟು ತಂದೆ ತೀರಿದ ನಂತರ ವಿವೇಕನ ಕುಟುಂಬದಲ್ಲಿ, ಕಳೆದುಕೊಂಡ ತಾಯಿ, ಅಕ್ಕಂದಿರ ಪ್ರೀತಿಯನ್ನು ಕಾಣುತ್ತಾಳೆ. ತಾನು ಭಾರತೀಯ ನಾರಿಯಂತೆ ಕುಂಕುಮ, ಬಳೆ, ಹೂ, ಸೀರೆ ತೊಟ್ಟು ಹೆಂಜಿರಪ್ಪನನ್ನು ಪೂಜಿಸುತ್ತಾಳೆ. ತನ್ನ ದೇಶದಲ್ಲಿ ಇದ್ದ ಧರ್ಮಗಳ ಘರ್ಮಗಳ ಸಂಘರ್ಷಗಳಿಗೆ ಬಲಿಯಾದ ಜನಾಂಗವನ್ನು ನೋಡಿದವಳಿಗೆ ಹಲವು ಧರ್ಮಗಳು ಬೆಸೆದು ಬಾಳುತ್ತಿರುವ ಭಾರತವನ್ನು ಪ್ರೀತಿಸುತ್ತಾಳೆ.

ಆದರೆ "ನಾಜಿ ಕ್ರೌರ್ಯದಿಂದ ಬದುಕುಳಿದರು ಎಂಬ ಒಂದು ಸುದ್ದಿಗಾಗಿ ತಾನು ದಶಕದಶಗಳು ಹಂಬಲಿಸಿದ್ದೇನೆ. ನನ್ನವರ ಕುರಿತು ಒಂದು ತುಂಡು ಸುದ್ದಿಗಾಗಿ"[ನೇಮಿಚಂದ್ರ, ೨೦೦೭, ಪ.೨೩೨] ಎಂದು ಹಂಬಲಿಸುತ್ತಾಳೆ. ಕೊನೆಗೂ ತನ್ನ ಮಗ ಇಂಜಿನಿಯರಾಗುವ ಮೂಲಕ ತನ್ನ ತಾಯಿ ನೆಲವನ್ನು ತನ್ನವರನ್ನು ಹುಡುಕಲು ಹೊರಡುತ್ತಾಳೆ. ಡಕಾವ್‌ದಲ್ಲಿ ಯಾಹೂದಿಗಳನ್ನು ಬಂಧಿಸಿ ಹಿಂಸಿಸಲ್ಪಟ್ಟ ಎಲ್ಲ ಆ ಸ್ಥಳಗಳನ್ನು ಕಂಡು ಬೆರಗಾಗುತ್ತಾಳೆ. ಒಂದು ದಿನದ ಊಟಕ್ಕೆ ಒಂದು ತುಂಡು ಬ್ರೇಡನ್ನು ನೀಡಿ ಹಿಂಸಿಸುತ್ತಿದ್ದ ಘಟನೆಗಳನ್ನು ಕೇಳಿ ಮರುಗುತ್ತಾಳೆ. ವಯಸ್ಸಾದವರು, ಮಕ್ಕಳು ಕೆಲಸಕ್ಕೆ ಬಾರದವರೆಂದು ವರ್ಗೀಕರಿಸಿ ಜೀವ ಸಮೇತ ಸಾಯಿಸುವ ಕೃತ್ಯಕ್ಕೆ ಇಳಿಯುವ ಈ ನಾಜಿ ಪಕ್ಷದ ವಿರುದ್ಧ ಕಿಡಿ ಕಾರುತ್ತಾಳೆ. ಇಂತಹ ನರಕದಲ್ಲಿ ತನ್ನ ತಾಯಿ, ತಮ್ಮ ಸಾವಿಗಿಡಾದರಲ್ಲ ಎಂಬ ಸುದ್ದಿ ಕೇಳಿ ದುಃಖಿತಳಾಗುತ್ತಾಳೆ. ಆದರೆ ಕೊನೆಗೂ ಹೇಗೋ ಅಷ್ಟು ಹಿಂಸೆ ಅತ್ಯಾಚಾರದ ನಡುವೆಯೂ ತಪ್ಪಿಸಿಕೊಂಡು ಬದುಕಿದ ತನ್ನ ಅಕ್ಕ ಕಿಚಿತ್ಸಾಳನ್ನು ಹುಡುಕುವ ಮೂಲಕ ತನ್ನ ಹುಡುಕಾಟಕ್ಕೆ ಉತ್ತರವನ್ನು ಕಂಡುಕೊಳ್ಳುತ್ತಾಳೆ.

"ನಾವು ಯಹೂದಿಗಳು, ಪ್ರಪಂಚದ ಯಾವ ಯಾವ ಮೂಲೆಗಳಿಂದಲೂ ಬಂದಿಳಿದವರು. ನೂರಾರು ವರ್ಷಗಳಿಂದ ಬೇರ್ಪಟ್ಟವರು, ಸಾವಿರ ಸಾವಿರ ವರ್ಷಗಳಿಂದ ಅಲೆದಾಡಿದವರು.

ಯುರೋಪ್, ಅಮೇರಿಕ, ಆಫ್ರಿಕಾ, ಏಷಿಯಾ ಎಲ್ಲೆಲ್ಲಿಂದ ಬಂದವರು ಕರಿಯರು, ಬಿಳಿಯರು, ಕಂದುಬಣ್ಣದವರು ಯಾವುದಾದವುದೋ ಸಂಸ್ಕೃತಿ, ಸಂಪ್ರದಾಯಗಳ ಗಂಧ ಗಾಳಿಯನ್ನು ಹೊತ್ತು ತಂದವರು. ಆದರೂ ನಾವೆಲ್ಲ ಯಾಹೂದಿಗಳೆಂದು, ಇಸ್ರೇಲಿಯರೆಂದೂ, ಹೀಬ್ರೂ ಜನರೆಂದು ತಬ್ಬಿ ಕಲೆತು ಒಂದಾದೆವು" ಎಂದು ತನ್ನ ಜನಾಂಗದವರ ಕುರಿತು ಹೆಮ್ಮೆ ಪಡುತ್ತಾಳೆ. "(ನೇಮಿಚಂದ್ರ, ೨೦೦೭, ಪು.೨೩೬)

ಹೀಗೆ ಎರಡು ರಾಷ್ಟ್ರಗಳಲ್ಲಿ ಬದುಕು ನಡೆಸಬೇಕಾಗಿ ಬಂದ ಯಾನಾಗೆ ಎರಡು ಸಂಸ್ಕೃತಿಗಳ ಮಧ್ಯೆ ಬದುಕುತ್ತಾಳೆ. ಅದರಲ್ಲೂ ಬ್ರಿಟಿಷರ ಕೈಯಿಂದ ಸ್ವಾತಂತ್ರ್ಯ ಪಡೆಯಬೇಕೆಂದು ಹಾತೊರಿಯುತ್ತಿದ್ದಂತಹ ಕಾಲದಲ್ಲಿ ನಾಜಿಗಳ ಕೈಯಿಂದ ತಪ್ಪಿಸಿಕೊಂಡು ಬಂದ ಯಾನಾಗೆ ಭಾರತದಲ್ಲಿ ಇದ್ದ ಅಂದಿನ ಸ್ಥಿತಿಗತಿ ಎಲ್ಲವೂ ದ್ವಂದ್ವವಾಗಿ ಕಾಣಿಸುತ್ತದೆ. "ಅಮ್‌ಸ್ಟರ್‌ಡ್ಯಾಮಿನಲ್ಲಿ ನಮ್ಮನ್ನು ನಾಜಿ ಕೈಯಿಂದ ಬಚಾವು ಮಾಡಲು ಬ್ರಿಟಿಷರಿಗಾಗಿ ಹಾತೊರಿಯುತ್ತಿದ್ದೆವು. ಇಲ್ಲಿ ಅದೇ ಬ್ರಿಟಿಷರನ್ನು ಹೊರಗೊಡಿಸುವ ಪ್ರಯತ್ನ ನಡೆಯುತ್ತಿದೆ. ಬ್ರಿಟಿಷರನ್ನು ಬನ್ನಿ ಕಾಪಾಡಿ ಎಂದು ಸ್ವಾಗತಿಸಿದ ನೆಲವಿದು. ತೊಲಗಿ ಇಲ್ಲಿಂದ ಎಂದು ಬಿಡುಗಡೆಯ ಹಾದಿಯಲ್ಲಿ ಬೇಡಿಯನ್ನು ಕಳಚಿ ಹೊರಟ ದೇಶವಿದು. ನಾನು ಯಾವ ಮಣ್ಣಿಗೆ ಸೇರಿದವಳು? ಬಿಟ್ಟು ಬಂದ ಆ ನೆಲದ ಮಗಳೂ ಆಗದೇ ನೆಲೆನಿಂತ ಈ ಮಣ್ಣಿಗೂ ಸೇರದೆ ನಡುವೆ ನಿಂತಿರುವ ಅನಾಥ ಪ್ರಜ್ಞೆಯಲ್ಲಿ"(ನೇಮಿಚಂದ್ರ, ೨೦೦೭, ಪು.೬೭) ಎಂದು ಗೊಂದಲಕ್ಕೀಡಾಗುತ್ತಾಳೆ.

ಹೀಗೆ ಕತೆಯ ಕೊನೆಯವರೆಗೂ ತನ್ನ ಮೂಲನೆಲೆಯನ್ನು ಮತ್ತೆ ಕಾಣಬೇಕೆಂದು ಹಂಬಲಿಸುವ ಯಾನಾ ತನ್ನ ಜನಾಂಗ ಎಲ್ಲೆ ಹೋದರೂ ಅಲ್ಲಿ ಆ ಮಣ್ಣಿನೊಂದಿಗೆ ಬೆರೆತು ಬದುಕುವ ತಾಕತ್ತು ಯಾಹೂದಿಗಳಿಗಿದೆ ಎಂಬುದನ್ನು ಮತ್ತೇ ಮತ್ತೇ ಹೇಳುತ್ತಾಳೆ. ಇಲ್ಲಿಯ ಒಂದು ಸಂದರ್ಭದ ಮೂಲಕ ಇದನ್ನು ಸ್ಪಷ್ಟಪಡಿಸುವುದಾದರೆ, "ಎಲ್ಲಿ ಎಸೆದರಲ್ಲಿ ಬೇರಿಳಿಸಿ ಚಿಗುರಬಲ್ಲ ತಾಕತ್ತು ಯಹೂದಿಗಳಿಗಿದೆ. ತಮ್ಮ ತಾಯ್ನಾಡಿನಿಂದ ಸಾವಿರ ಸಾವಿರ ವರ್ಷಗಳು ಹೊರಗಟ್ಟಿ ಅಲೆದಾಡಿದ ಜನಾಂಗಕ್ಕೆ ಎಲ್ಲೆಂದರಲ್ಲಿ ಬೇರು ಬಿಟ್ಟು ನೆಲದ ಸತ್ವವನ್ನು ಹೀರಿ ಬೆಳೆಯುವ ತಾಕತ್ತಿದೆ. ಅಮರ್‌ಸ್ಟರ್‌ಡ್ಯಾಮ್ ಬಿಟ್ಟು ಓಡುವಾಗ ಮನದ ಮೂಲೆಯಲ್ಲಿ ಮತ್ತದೇ ಬತ್ತದ ಆಸೆ, ಯುದ್ಧ ಮುಗಿಯುತ್ತದೆ, ಜಗತ್ತು ಜರ್ಮನಿಯಲ್ಲಾಗುತ್ತಿರುವ ಅನ್ಯಾಯವನ್ನು ನಿಂತು ನೋಡುವುದಿಲ್ಲ, ಈ ಆಪತ್ಕಾಲಕ್ಕೆ ಆಸರೆ ಕೊಟ್ಟು ಭಾರತದಲ್ಲಿ ಹೆಚ್ಚೆಂದರೆ ಒಂದೆರಡು ವರ್ಷ ಕಳೆಯಬೇಕಾಗುತ್ತದೆ"(ನೇಮಿಚಂದ್ರ, ೨೦೦೭, ಪು.) ಎಂಬ ತುಡಿತ ತನ್ನ ಮೂಲನೆಲೆಗೆ ಹೋಗೆ ಹೋಗುತ್ತೇವೆ ಎಂಬ ಹಂಬಲ ಹೆಚ್ಚಾಗಿ ಕಾಡುತ್ತದೆ. ಅದರಿಂದ ಇಲ್ಲಿ ಬರುವ ಯಾನಾ ಪಾತ್ರ ಮತ್ತೇ ತನ್ನ ಮೂಲನೆಲೆಯನ್ನು ಹುಡುಕಿಕೊಂಡು ತನ್ನವರು ಏನಾದರೂ ಎಂದು ಅಲೆದು ಉತ್ತರ ಕಂಡುಕೊಳ್ಳುತ್ತಾಳೆ.

ಹಾಗೆಯೆ ಇಂದಿಗೂ ಜನಾಂಗದ ಸಂಘರ್ಷಗಳು ನಡೆಯುತ್ತಿರುವ ಹಿನ್ನೆಲೆಯಲ್ಲಿ ಇಲ್ಲಿ ಬರುವ ಪ್ಯಾಲೆಸ್ಟೈನ್, ಇಸ್ರೇಲ್ ನಡುವೆ ನಡೆಯುವ ಕದನಗಳು ಕೂಡ ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. "ಸಾವಿರ ಸಾವಿರ ವರ್ಷಗಳು ತಾಯ್ನಾಡಿನಿಂದ ದೂರವಾಗಿ ಅಲೆದವರು ಮತ್ತೊಂದು ಜನಾಂಗವನ್ನು ಅವರ ನೆಲೆದಿಂದ ಗುಳೆಯೆಬ್ಬಿಸಿದನು. ಪ್ಯಾಲೆಸ್ಟೈನಿನ ಶೇಕಡಾ ೮೦ ರಷ್ಟು ಭಾಗವನ್ನು ಆವರಿಸಿ, ಇಸ್ರೇಲ್ ಆಗಿಸಿದೆವು. ಅಂದು ಅರಬರು 'ಇಸ್ರೇಲ್'ನ ಅಸಿತ್ವವನ್ನು ಒಪ್ಪಿಕೊಳ್ಳಲಿಲ್ಲ. ಇಂದು ನಾವು ಪ್ಯಾಲೆಸ್ಟೈನ್ ಎಂಬುದಿಲ್ಲ ಎನ್ನುತ್ತಿದ್ದೇವೆ. ಉಳಿದ ೧೦ ರಷ್ಟು ಭಾಗವನ್ನು ಕೂಡಲು ನಾವು ಸಿದ್ಧವಿಲ್ಲ" "(ನೇಮಿಚಂದ್ರ, ೨೦೦೭, ಪು.೨೩೨) ಎಂಬ ಮಾತುಗಳು ಇಂದಿಗೂ ಈ ಜನಾಂಗೀಯ ಸಂಘರ್ಷಗಳು ನಡೆಯುತ್ತಿರುವ ಕುರಿತು ಮಾತನಾಡಿರುವುದರ ಜೊತೆಗೆ ಒಂದು ಜನಾಂಗ, ಇನ್ನೊಂದು ಜನಾಂಗವನ್ನು ಗುಳೆಯೆಬ್ಬಿಸುವ ಮೂಲಕ ತಾವೇ ಮೂಲ ನೆಲದವರು ಎಂದು ಸಾರುವ ಸ್ವಾಧೀನತೆ ಇಲ್ಲಿ ನೋಡಬಹುದು. ಹೀಗಾಗಿ ಪ್ರತಿಯೊಂದು ಜನಾಂಗವೂ ವಲಸೆ ಬಂದ ಜನಾಂಗವೇ ಆಗಿರುತ್ತದೆ ಎಂಬುದಕ್ಕೆ ಈ ಸಂದರ್ಭ ಸಾಕ್ಷಿಯಾಗುತ್ತದೆ.

ಒಟ್ಟಾರೆ ಯುದ್ಧ ಆಕ್ರಮಣಗಳು ಒಂದು ಜನಾಂಗದ ವಲಸೆಗೆ ಹೇಗೆ ಕಾರಣವಾಗುತ್ತದೆ ಮತ್ತು ಅದರಿಂದ ಆ ಒಂದು ಜನಾಂಗ ಹೇಗೆ ಸಾವು, ನೋವುಗಳಿಗೆ ಗುರಿಯಾಗುತ್ತದೆ ಎಂಬುದನ್ನು ಈ ಕೃತಿಯಲ್ಲಿ ನೋಡಬಹುದು. ಹಾಗೆಯೆ ಬಿಟ್ಟು ಬಂದ ನೆಲದ ಹಂಬಲ, ಮತ್ತೆ ಕಾಣಬೇಕೆಂಬ ತುಡಿತ, ಬಿಟ್ಟು ಬರುವಾಗಿನ ದುಃಖ, ದುಮ್ಮಾನಗಳು, ಬಿಟ್ಟು ಬಂದು ಸೇರಿದ ದೇಶದ ಜೊತೆಗಿನ ಹೊಂದಾಣಿಕೆ, ಭಿನ್ನ ಆಚಾರ, ಸಂಪ್ರದಾಯ ಎಲ್ಲವನ್ನು ಅನಿವಾರ್ಯತೆಯಿಂದ ತನ್ನದಾಗಿಸಿಕೊಳ್ಳುವ ಸ್ಥಿತಿ. ತಾನು ಪೂಜಿಸುವ  ದೇವರನ್ನು ಬಚ್ಚಿಡುವ ಬದುಕಿನ ಒತ್ತಡಗಳು ಇಂತಹ ವಲಸಿಗರಲ್ಲಿ ಇರುವುದನ್ನು ಕಾಣಬಹುದು. ಹಾಗೂ ಸಾವು, ನೋವು, ಮೂಲ ನೆಲ, ಬೇರು, ರಕ್ತ ಸಂಬಂಧಗಳ ಅಗಲಿಕೆಯಂತಹ ಭಾವನಾತ್ಮಕ ಸಂಬಂಧಗಳು ಮನುಷ್ಯರಲ್ಲಿ ಅದರಲ್ಲೂ ತಮ್ಮ ತಾಯಿ ನೆಲವನ್ನು ಬಿಟ್ಟು ಬಂದ ವಲಸಿಗರಲ್ಲಿ ಕಾಡುವ ಭಾವನಾತ್ಮಕ ಸಂಬಂಧಗಳನ್ನು ಪದೇ ಪದೇ ಚಿತ್ರಿಸುತ್ತದೆ. ಇಡೀ ಒಂದು ಜನಾಂಗದ ನಾಶಕ್ಕೆ ಹಾಗೂ ವಲಸೆಗೆ ಯುದ್ಧದ ಭೀಕರ ಪರಿಣಾಮ ಹೇಗೆ ಕಾರಣವಾಗುತ್ತದೆ ಎಂಬುದನ್ನು ಚಾರಿತ್ರಿಕ ದಾಖಲೆಗಳ ಮೂಲಕ ಯಾವುದೇ ಜನಾಂಗದ ಬದುಕನ್ನು ಚಿತ್ರಿಸುತ್ತದೆ. ಹೀಗಾಗಿ ಇದೊಂದು ಚಾರಿತ್ರಿಕ, ಜನಾಂಗಿಕ ಕೃತಿಯಾಗಿ ಮೂಡಿಬಂದಿದೆ ಎಂದು ಹೇಳಬಹುದು. ಲೇಖಕರೇ ಬೆನ್ನುಡಿಯಲ್ಲಿ ಹೇಳುವಾಗೇ ೬೦ ಲಕ್ಷ ಜನ ಯಹೂದಿಗಳನ್ನು ಕೊಂದು ಮುಗಿಸಿದ ಕರಾಳ ಚರಿತ್ರೆ ಇದಾಗಿದೆ.

ಬೆನಕನಹಳ್ಳಿ ಜಿ.ನಾಯಕ್‌ರವರ 'ವಲಸೆ' ಮತ್ತು ಗೋಪಾಲಕೃಷ್ಣ ಪೈ ರವರ ಸ್ವಪ್ನ ಸಾರಸ್ವತ ಕಾದಂಬರಿಗಳ ಸಮುದಾಯ ವಲಸೆಗೆ ಉದಾಹರಣೆಯಾಗಿದೆ. ಹಾಗಾಗಿ ಈ ಮೊದಲಿಗೆ

'ವಲಸೆ' ಕಾದಂಬರಿಯನ್ನು ನೋಡುವುದಾದರೆ, ಬೆನಕನಹಳ್ಳಿ ಜಿ. ನಾಯಕ್ 'ವಲಸೆ' ಇದೊಂದು ಸಾಮಾಜಿಕ ಕಾದಂಬರಿಯಾಗಿದೆ. ಪ್ರಾಕೃತಿಕ ವೈಪರೀತ್ಯದಿಂದಾಗಿ ಬರಗಾಲ ಉಂಟಾಗಿ ಲಂಬಾಣಿ ಜನರ ಸಮುದಾಯ ಹೊಟ್ಟೆ ಪಾಡಿಗಾಗಿ ತಮ್ಮ ಮೂಲ ನೆಲೆಯನ್ನು ಬಿಟ್ಟು ಮಲೆನಾಡಿನ ನಾಡಿಗೆ ದುಡಿಯಲು ಹೊರಡುವ ಜನರ ಬಡತನದ ಚಿತ್ರಣವನ್ನು ಕೊಡುತ್ತಾರೆ. ಒಟ್ಟಾರೆ ಇದೊಂದು ಸಮುದಾಯದ ವಲಸೆಯನ್ನು ಅಭಿವ್ಯಕ್ತಿಸುವ ಕೃತಿಯಾಗಿದೆ.

ಈ ಕಾದಂಬರಿಯ ಲೇಖಕರಾದ ಜಿ.ನಾಯಕ್ ರವರು ಲಂಬಾಣಿಗರ ಜೀವನ ಶೈಲಿ ಕುರಿತಂತೆ ಮುನ್ನುಡಿಯಲ್ಲಿ ಒಂದಿಷ್ಟು ವಿವರಣೆಯನ್ನು ಕೊಡುತ್ತಾರೆ. "ಪ್ರಕೃತಿಯ ಆರಾಧಕರಾದ ಈ ಜನರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರು. ಅಮಾಯಕರಾದ ಇವರನ್ನು ತಮ್ಮ ಸಮಾಜ ಕೆಟ್ಟದಾಗಿ ನಡೆಸಿಕೊಳ್ಳುತ್ತಿದೆ. ಬರಗಾಲದ ದವಡೆಗೆ ತುತ್ತಾಗುವ ಇವರು ಆಗಾಗ್ಗೆ ವಲಸೆ ಹೋಗುವವರು. ದೈಹಿಕ ಪರಿಶ್ರಮಕ್ಕೆ ಹೆಸರಾಗಿರುವ ಬಂಜಾರಿಗಳು ಶತಮಾನಗಳಿಂದ ಉಳ್ಳವರ ತೆವಲುಗಳಿಗೆ ತಮ್ಮನ್ನು ಒಡ್ಡಿಕೊಂಡು ಕಾಲಯಾಪನೆ ಮಾಡುತ್ತ ಬಂದವರಾಗಿದ್ದಾರೆ. ಈ ಜನರ ಸಾಂಸ್ಕೃತಿಕ ಬದುಕಿನ ಜೊತೆಯಲ್ಲಿ ಬಂಡವಾಳಶಾಹಿ ಪ್ರವೃತ್ತಿಯು ರೋಗಗ್ರಸ್ಥ ಮನಸ್ಸಿನ ಪರಿಸರವನ್ನು ಚಿತ್ರಿಸಲು ಪ್ರಯತ್ನಿಸಿದ್ದೇವೆ(ಬೆನಕನಹಳ್ಳಿ ಜಿ. ನಾಯಕ್, ೧೯೮೩, ಮುನ್ನುಡಿ) ಎಂದು ಈ ಕೃತಿಯ ಕುರಿತು ಮತ್ತು ಲಂಬಾಣಿಗರ ಬದುಕಿನ ಕುರಿತು ಅಭಿಪ್ರಾಯ ಪಡುತ್ತಾರೆ.

ಹೀಗೆ ಬರಗಾಲದ ದವಡೆಗೆ ತುತ್ತಾಗಿ ಸುಮಾರು ಇನ್ನೂರು ಕುಟುಂಬದ ಲಂಬಾಣಿ ಸಮುದಾಯಗಳು ವಯಸ್ಸಾದ ಮುದಕರನ್ನು ಅಸಹಾಯಕರನ್ನು ಬಿಟ್ಟು ತಮ್ಮ ತಮ್ಮ ಸಾಮಾನುಗಳನ್ನು ಗಂಟುಮೂಟೆ ಕಟ್ಟಿಕೊಂಡು ತಮ್ಮದೇ ಸಮುದಾಯದ ಠಾಕುವಿನ ಮಧ್ಯವರ್ತಿಯನ್ನು ನಂಬಿಕೊಂಡು ಮಲೆನಾಡಿನ ಕಾಡಿಗೆ ದುಡಿಯಲು ಬರುವ ಈ ಜನರು ನಾನಾ ಕಷ್ಟಗಳಿಗೆ ಬಲಿಯಾಗುತ್ತಾರೆ. "ಮಳೆ ಬಾರದೇ ಬೋಳಾಗಿ ನಿಂತಿದ್ದ ಸಾಲು ಮರಗಳು ಮಳೆಯ ಮುಖ ಕಾಣವೇ ಬಾಯಿಬಿಟ್ಟು ವಿಕಾರತೆಯನ್ನು ಪ್ರದರ್ಶಿಸುತ್ತಿರುವ ಭೂಮಿ, ಆಕಾಶದಲ್ಲಿ ತೇಲುವ ಗಾಳಿ ಮೋಡಗಳು ನೋಡಗರ ಕಣ್ಣಿಗೆ ಮತ್ತಷ್ಟು ಬೀತಿಯನ್ನು ಉಂಟುಮಾಡುತ್ತಿದ್ದವು. ತಾಯಂದಿರ ಎದೆಯಲ್ಲಿ ಹಾಲಿಲ್ಲದೇ ಚಿಕ್ಕ ಮಕ್ಕಳು ಕಿರಲು ಧ್ವನಿ ಮಾಡುತ್ತಿದ್ದವು."(ಅದೇ, ಪು.೨) ಇತರದ ಪರಿಸರದಿಂದ ಹೊರಬರಬೇಕೆಂದು ಇದ್ದ ತುಡಿತಗಳ ಜೊತೆ ಮೂಲ ಹಟ್ಟಿಯನ್ನು, ವಯಸ್ಸಾದವರನ್ನು ಬಿಟ್ಟು ಬಂದೆವೆಲ್ಲ ಎಂಬ ದುಃಖ ಜೊತೆಗೆ ಹೊಸ ಪರಿಸರ ಹೇಗೋ ಏನೋ ಎಂಬ ಆತಂಕ ಇವೆಲ್ಲವೂ ವಲಸಿಗರಲ್ಲಿದ್ದ ಅನಿವಾರ್ಯತೆಗಳನ್ನು ಸೂಚಿಸುತ್ತಿದ್ದವು. ಜೊತೆಗೆ ಬಡತನದ ಪ್ರಾಕೃತಿಕ ವೈಪರಿತ್ಯದ ಪರಿಣಾಮಗಳು ಕಾಣಿಸುತ್ತವೆ.

ಇನ್ನು ಪ್ರಯಾಣದಲ್ಲಂತು ಹೆಚ್ಚು ನೋವು ಉಂಡಿದ್ದು ಹಿರಿಯರು "ಓಠಾತು ಸರಿಯಾಗಿ ವಿಚಾರ ಮಾಡ್ಬಂದಿಯೋ ಇಲ್ಲೋ ಮತ್ತ ತಾಂಡೆ ಬಿದಿನಿ ಹಾದಿ ಬದಿ ಕೂರ್ಸಿದ್ಧಿ ಮುಂದಿನ ಗತಿ ಹೆಂಗೆ?"(ಅದೇ, ಪು.೨) ಎಂದು ಪೇಚಾಡುವ ದೃಶ್ಯಗಳು ಸಾಮಾನ್ಯವಾಗಿದ್ದವು. ಹೀಗೆ ಮೊದಲೇ ಬರಗಾಲಕ್ಕೆ ನೋವು ಉಂಡ ಜನಕ್ಕೆ ಈ ವಲಸೆಯಿಂದ ಮತ್ತಷ್ಟು ಅಪಾಯ ಕಾದಿತ್ತು. ಮೊದಮೊದಲಿಗೆ ಬರಗಾಲದ ಊರಿನಿಂದ ಬಂದವರಿಗೆ ಬಿಸಿಲು, ಸೆಕೆ, ಹಾಹಾಕಾರ ನೋಡಿ ಒಮ್ಮೆಲೆ ಮಲೆನಾಡು, ಮರ, ಗಿಡ, ಹಸಿರು ಎಲ್ಲವನ್ನು ನೋಡಿ ಒಂದು ರೀತಿಯಲ್ಲಿ ಸಂತಸ ಪಟ್ಟಿದ್ದರು. ಇನ್ನು ಕೆಲವರು "ಹೊಸ ಜಾಗ, ಹೊಸ ಪರಿಸರಕ್ಕೆ ಹೊಂದ್ಕೊಂಡು ಕೊನೆಗೆ ತಾಂಡ್ಯಾಕೆ ಮರಳ್ತೀವೋ ಹೆಂಗ ಎನ್ನುವ ವಿಚಾರ ಅವರುಗಳ ತಲೆವೊಳಗ ಗ್ಯೂಂ ಗುಡುತ್ತಿರುವಂತಿತ್ತು."(ಅದೇ, ಪು.೬) ಕತೆಯ ಆರಂಭದಿಂದಿಡಿದು, ಕೊನೆಯವರೆಗೂ ಕಷ್ಟದಲ್ಲೇ ಬದುಕುವ ಇವರ ಬದುಕು ಬರೀ ಸಾವು ನೋವು ಅತ್ಯಾಚಾರಗಳಲ್ಲೇ ಕೊನೆಗೊಳ್ಳುತ್ತದೆ. ಇಲ್ಲಿಂದ ಆರಂಭವಾಗುವ ವಲಸೆ ನಂತರದ ಬದುಕು ಭಿನ್ನ ಸ್ವರೂಪವನ್ನು ಪಡೆದುಕೊಳ್ಳುತ್ತದೆ ಈ ಪ್ರಾಕೃತಿಕ ವೈಪರಿತ್ಯ ಒಂದು ರೀತಿಯ ಪರಿಣಾಮವನ್ನು ಬೀರಿದರೆ ಇಲ್ಲಿ ಇನ್ನೊಂದು ರೀತಿಯ ಪರಿಣಾಮವನ್ನು ಅನುಭವಿಸುತ್ತಾರೆ. ಬಂಡವಾಳಶಾಹಿಗಳು ಶ್ರೀಮಂತರು ಬಡವರನ್ನು, ಬಡತನವನ್ನು ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡು ಕೊಲೆ, ದೌರ್ಜನ್ಯ, ದಬ್ಬಾಳಿಕೆ ಅತ್ಯಾಚಾರದಂತಹ ಹೀನಾ ಕೃತ್ಯಗಳನ್ನು ಎಸಗಿ, ಬಡವರನ್ನು ಇನಷ್ಟು ಆಳಕ್ಕೆ ತುಳಿಯುವ ಅವರ ಬದುಕುನ್ನು ಇನ್ನಷ್ಟು ಬರಡು ಮಾಡುತ್ತಾರೆ. ವಲಸೆ ಬಂದವರಿಗೆ ಇರಲು ಗುಡಿಸಲುಗಳನ್ನು ಕೊಟ್ಟಿತ್ತಾದರೂ ಅವುಗಳಲ್ಲಿ ಮಳೆ ಬಂದರೆ ನೀರು ಸೋರುತ್ತಿತ್ತು. ಸರಿಯಾದ ಗಾಳಿ ಬೆಳಕಿಲ್ಲದೆ ಕತ್ತಲು ಗುಹೆಯಲ್ಲಿ ಕೆಲಸ ಮಾಡುವುದೆಂದರೆ ಹಿಂಸೆಯೇ ಆಗಿತ್ತು.

ಇನ್ನು ದುಡಿಯಲು ಬಂದವರಿಗೆ ಕೆಲಸವಂತು ಹೇಳತೀರದಾಗಿತ್ತು. ಹೊಲಗಳಲ್ಲಿ ಗಾಳಿ ಬೆಳಕುಗಳಲ್ಲಿ ದುಡಿಯುತ್ತಿದ್ದವರಿಗೆ ದುರ್ಗಂಧ ಬೀರುವ ಮೂಳೆ ಫ್ಯಾಕ್ಟರಿಯಲ್ಲಿನ ಕೆಲಸ ಅನಿವಾರ್ಯವಾಗಿತ್ತು. ಇದರಿಂದಾಗಿ ರೋಗ ರುಜಿನಗಳಿಂದ ದಿನಾಲು ಜನ ಸಾಯುತ್ತಲೇ ಇದ್ದರು. ಇನ್ನು ಮಹಿಳೆಯರಂತೂ ಸಾಹುಕಾರನ ಕಾಮಕ್ಕೆ ಬಲಿಯಾಗುತ್ತಿದ್ದರು. ಅಂತ ದುರ್ನಾತದಲ್ಲಿ ಕೆಲಸ ಮಾಡಿಯೂ ಕಡಿಮೆ ಸಂಬಳ ನೀಡುತ್ತಿದ್ದ ಸಾಹುಕಾರನ ದೌರ್ಜನ್ಯವನ್ನು ತಡೆಯಲು ಆಗಾದ ಅಸಹಾಯಕರಾಗಿ ಬಾಳುವ ಸ್ಥಿತಿ ಈ ಸಮುದಾಯದಾಗಿತ್ತು. ಈ ಶೋಷಣೆಯಲ್ಲಿ ಇದೇ ಲಂಬಾಣಿ ಸಮುದಾಯದ ಮಧ್ಯವರ್ತಿಯಾಗಿ ಕರೆದುಕೊಂಡು ಬಂದ ಬಡಿಗರ ಠಾಕುನಮೂ ಸಹ ಪಾಲುದಾರನಾಗಿದ್ದ ನಮ್ಮವನೆಂದು ನಂಬಿ ಬಂದಿದ್ದ ಈ ಜನರಿಗೆ ಈ ನಂಬಿಕೆ ದ್ರೋಹ ಸಹಿಸದಾಗಿತ್ತು.

ಒಟ್ಟಿನಲ್ಲಿ ಬೋನಿನೊಳಗೆ ಸಿಕ್ಕ ಇಲಿಯಂತಾಗಿತ್ತು ಇವರ ಬದುಕು. ಇಷ್ಟಾದರೂ ಇವರ ಸಾಂಸ್ಕೃತಿಕ ಬದುಕು ಎಲ್ಲೋ ಮುಕ್ಕಾಗದಿರಲಿ ಅಂತ ಬಡತನದಲ್ಲೂ ಸಾಹುಕಾರನಿಂದ ಸಾಲ ಪಡೆದು ಹಬ್ಬ ಹರಿದಿನಗಳನ್ನು ಎಲ್ಲರೂ ಕೂಡಿ ಆಚರಿಸುತ್ತಿದ್ದರು. ಠಾಕೂನ ಕಾಡಿ ಬೇಡಿ ಸೋಕಾರ್‍ನ ಮನ ಕೊಂಚ ಕರಗುವಂತೆ ಮಾಡಿ ಎಂಟು ದಿನದ ಹಿಂದೆ ಹೊಸ ಬುಟ್ಟಿ ತಂದು ಪಡ್ಡೆ ಹುಡಿಗ್ಯಾರು ಅದರೊಳಗೆ ಹುತ್ತದ ಮಣ್ಣು ತುಂಬಿ ಪೂಜಿಸಿ ಗೋಧಿ ಚೆಲ್ಲಿದ್ದರು. ಅಂತು ಎಷ್ಟೇ ರೋಗ ರುಜಿನ ಕಷ್ಟಗಳು ಬಂದರು ಧಾರ್ಮಿಕ ಆಚರಣೆಗಳನ್ನು ಮಾತ್ರ ಬಿಡದೇ ಗೋಧಿ ಹಬ್ಬದ ಆಚರಣೆಯನ್ನು ಮಾಡಿದ್ದರು.

ಹೀಗೆ ಊರಿಗೆ ಹೋಗಲು ಆಗದೇ ಇಲ್ಲಿ ದುಡಿಯಲು ಆಗದೇ ಬದುಕುತ್ತಿದ್ದ ಜನಕ್ಕೆ ಕಥಾ ನಾಯಕ ಅದೇ ಸಮುದಾಯದ ಹುಲಿಯನ ಹೋರಾಟ ಭಿನ್ನ ಸ್ವರೂಪ ಕಾಣಿಸಿಕೊಳ್ಳುತ್ತದೆ. ಸ್ವಲ್ಪ ಬುದ್ಧಿವಂತನೂ ಚುರುಕಾಗಿದ್ದ ಹುಲ್ಯ ತನ್ನ ಪ್ರೀತಿಸಿದ ಹುಡುಗಿ ರೂಪ್ಲಿ ಸಾಹುಕಾರನ ಅತ್ಯಾಚಾರಕ್ಕೆ ಬಲಿಯಾಗಿ ಸಾವನ್ನಪ್ಪುತ್ತಾಳೆ ಮತ್ತು ಸಾಹುಕಾರನ ಮಗ ಹೊರ ದೇಶಕ್ಕೆ ಉನ್ನತ ವ್ಯಾಸಂಗಕ್ಕೆಂದು ಹೋದ ರವಿಯ ಮಾರ್ಗದರ್ಶನ ಹುಲ್ಯನನ್ನು ಸಾಹುಕಾರನ ವಿರುದ್ಧ ಹೋರಾಡಲು ಪ್ರೇರೇಪಿಸುತ್ತದೆ. ಇಷ್ಟೊತ್ತಿಗಾಗಲೇ ಬೇಸಿಗೆ ಕಾಲ ಹೋಗಿ ಮಳೆ ಆರಂಭವಾಗಿತ್ತು ಇಲ್ಲಿಯ ಸಮುದಾಯಕ್ಕೆ ಊರಿಗೆ ಹೋಗಬೇಕೆಂಬ ಆತಂಕವೇ ಹೆಚ್ಚಾಗಿತ್ತು. ಆದರೆ ಎಲ್ಲಿಗೂ ತಪ್ಪಿಸಿಕೊಂಡು ಹೋಗದಂತೆ ಸಾಹುಕಾರ ಕಾಡಿನ ಸುತ್ತ ಕಾವಲು ಇಟ್ಟಿರುತ್ತಾನೆ.

ಇಲ್ಲಿ ಸಾಹುಕಾರ ಮತ್ತು ಸಾಹುಕಾರನ ಮಗನ ನಡುವಿನ ಭಿನ್ನ ಮನೋಭಾವನೆಗಳೂ ಕಾಣಿಸುತ್ತದೆ. ಸಾಹುಕಾರ ಹೊಟ್ಟೆಪಾಡಿಗಾಗಿ ದೂರದ ಊರಿನಿಂದ ಬಂದವರನ್ನು ಇನಷ್ಟು ತುಳಿತಕ್ಕೊಳಪಡಿಸಿ, ಶೋಷಣೆ ಮಾಡುವನಾಗಿದ್ದರೆ, ಈತನ ಮಗ ಬೇರೆ ದೇಶಕ್ಕೆ ಹೋಗಿ ಓದಿ ಬಂದವನ ಮನೋಭಾವನೆಗಳೇ ಭಿನ್ನವಾಗಿರುತ್ತವೆ. ಈ ಲಂಬಾಣಿ ಜನರ ಸಮುದಾಯವನ್ನು ಈ ವ್ಯವಸ್ಥೆಯಿಂದ ಬಿಡುಗಡೆಗೊಳಿಸಿದರೆ ಹೊಟ್ಟೆ ಪಾಡಿಗಾಗಿ ಮತ್ತೊಂದು ಕಡೆ ಇಂಥದೇ ಪರಿಸ್ಥಿತಿಗೆ ಒಳಪಡಬೇಕಾಗುತ್ತದೆ. ಹಾಗಾಗಿ ಇಲ್ಲಿಯ ಕೆಟ್ಟ ಅವ್ಯವಸ್ಥೆ ವಿರುದ್ಧವೇ ಹೋರಾಟ ಮಾಡಿ ಇಡೀ ರಾಜ್ಯದ ಜನರ ಗಮನ ಸೆಳೆಯಬೇಕೆಂದು ಅಲ್ಲಿಯ ಜನರನ್ನು ಎಚ್ಚರಿಸುತ್ತಾನೆ. ಇಲ್ಲಿಯ ಕಾಡಿನಲ್ಲಿ ನಡೆಯುವ ಅನ್ಯಾಯ ಶೋಷಣೆಗಳನ್ನು ಹೋರಾಟದ ಮೂಲಕ ಇಡೀ ರಾಜ್ಯಕ್ಕೆ ತಿಳಿಯುವ ಹಾಗೆ ಮಾಡಬೇಕು ಎನ್ನುವ ರವಿ ಮತ್ತು ಅನಿಲ ಪ್ರಯತ್ನ ವಿಫಲವಾಗುತ್ತದೆ. ರೂಪ್ಲಿಯ ಸಾವು ಹುಲ್ಯಾನನ್ನು ಮತ್ತಷ್ಟು ಕೆರಳಿಸಿ ರವಿಯನ್ನು ಕಟ್ಟಿಹಾಕಿ ಇಡೀ ಫ್ಯಾಕ್ಟರಿಯನ್ನು ಹೋಳಿ ಹುಣ್ಣಿಮೆಯ ದಿನ ಕಾಮಣ್ಣನನ್ನು ಸುಡುವಂತೆ ಸಾಹುಕಾರನನ್ನು ಸೇರಿದಂತೆ ಇಡೀ ಫ್ಯಾಕ್ಟರಿಯನ್ನು ಸುಟ್ಟು ಹಾಕುತ್ತಾರೆ.

ಒಟ್ಟಾರೆಯಾಗಿ ಪ್ರಕಾಶಕರ ಅಭಿಪ್ರಾಯದಂತೆ 'ವಲಸೆ' ಸಾಮಾಜಿಕ ಕಾದಂಬರಿಯಾಗಿದ್ದು ಲಂಬಾಣಿ ಸಮುದಾಯದವರ ಬರಗಾಲದಿಂದ ಉಂಟಾದ ಹಸಿವು, ಬಡತನ, ನಿರುದ್ಯೋಗದಂತಹ ಸಮಸ್ಯೆಗಳು ತಲೆದೋರಿ ಅನಿವಾರ್ಯವಾಗಿ ಬರಗಾಲದ ನಾಡಿನಿಂದ ಮಲೆನಾಡಿನ ಕಾಡಿಗೆ ವಲಸೆ ಬಂದು, ಇನ್ನಷ್ಟು ಕಷ್ಟಗಳಿಗೆ ಗುರಿಯಾಗುವ ಸ್ಥಿತಿಯನ್ನು ಲೇಖಕರು ಸಂವೇದನಾತ್ಮಕವಾಗಿ ಗ್ರಾಮ ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಮುಖ್ಯವಾಗಿ ಲಂಬಾಣಿ ಸಮುದಾಯದ ವಲಸೆಯನ್ನೇ ಪ್ರಮುಖವಾಗಿ ಬಳಸಿಕೊಂಡಿರುವುದು ವಿಶೇಷವಾಗಿದೆ. ಈ ಲಂಬಾಣಿಗರ ವಲಸೆ ವಿಶೇಷವಾಗಿ ತಾತ್ಕಾಲಿಕವಾಗಿರುತ್ತದೆ. ಲೇಖಕರೇ ತಮ್ಮ ಮುನ್ನುಡಿಯಲ್ಲಿ ಅಭಿಪ್ರಾಯಪಡುವಂತೆ ಇರುವ ಹೊಟ್ಟೆಪಾಡಿಗಾಗಿ ಒಂದು ಊರಿಂದ ಇನ್ನೊಂದು ಊರಿಗೆ ಹೋಗುವುದು ಇವರ ಜೀವನ ಶೈಲಿಯಾಗಿದೆ. ಇವರು ಎಷ್ಟೇ ಬಡತನದಲ್ಲಿದ್ದರೂ ಇವರ ಸಾಂಸ್ಕೃತಿಕ ಬದುಕು ಶ್ರೀಮಂತವಾಗಿರುವುದು ಈ ಕೃತಿಯಲ್ಲಿ ಕಾಣಬಹುದು. ಜೊತೆಗೆ ಗ್ರಾಮದ ಹಿತ ಬದುಕು. ಈ ಕಲೆಯ ಇನ್ನೊಂದು ವಿಶೇಷ. ಇವರ ಶ್ರಮದಾಯಿಕ ಬದುಕಿನಲ್ಲಿ ಪುರುಷರು ಮಹಿಳೆಯರೆಂಬ ಭೇದ ಭಾವವಿಲ್ಲದೆ ಒಟ್ಟೊಟ್ಟಿಗೆ ಕೆಲಸ ಮಾಡುವುದು ಜೊತೆಗೆ ಕಿತ್ತು ತಿನ್ನುತ್ತಿರುವ ಬಡತನ ಎಂಥ ಕೆಲಸವನ್ನು ಬೇಕಾದರೂ ಮಾಡಿಸುತ್ತದೆ ಎನ್ನುವುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ.

ಜೊತೆಗೆ ಈ ಸಮುದಾಯದವರಲ್ಲಿ ಮೂಢನಂಬಿಕೆಗಳನ್ನು ಲೇಖಕರು ಸೂಕ್ಷ್ಮವಾಗಿ ಗುರುತಿಸುತ್ತಾರೆ. "ಕುಲಪದ್ಧತಿಯಂತೆ ತಾಂಡಿಯ ಆಚಾರ ಮಾಡುವುದಿತ್ತು. ಹಾಗೆ ಮಾಡದೇ ಹೋದರೆ ಹಿರಿಯ ಪ್ರೇತಗಳಲ್ಲಿ ಒಬ್ಬನಾಗ ಹೋಗುವುದು ಗುಂಪಿನ ಜನರಿಗೆ ಶ್ರೇಯಸ್ಕರವಲ್ಲ ಎಂದು ಲಂಬಾಣಿಗರು ನಂಬಿರುವುದರಿಂದ ಸಾಲವೋ ಸೋಲವೋ ಮಾಡಿ ಕರ್ಮ ಮಾಡುವುದಿತ್ತು."ಅದೇ, ಪು.೩೭)

ಒಟ್ಟಾರೆಯಾಗಿ ಲೇಖಕರು ಇಡೀ ಲಂಬಾಣಿ ಸಮುದಾಯದವರ ವಲಸೆಯ ಜೀವನವನ್ನು ಹಿಡಿದಿಡುವ ಪ್ರಯತ್ನ ಈ ಕೃತಿಯ ಆಶಯವಾಗಿದೆ ಮತ್ತು ಸಂವೇದನೆಯಾಗಿದೆ ಮತ್ತು ಬರಗೂರು ರಾಮಚಂದ್ರಪ್ಪರ ಅಭಿಪ್ರಾಯದಂತೆ ಈ ಕಾದಂಬರಿಯು ಗುಳೆ ಹೋಗುವ ಲಂಬಾಣಿ ಜನಾಂಗ ಎದುರಿಸಿದ ಬದುಕಿನ ಸವಾಲುಗಳು ಆಧುನಿಕ ವಾತಾವರಣದಲ್ಲಿ ಉಂಟಾಗುವ ಸಮಸ್ಯೆಗಳು 'ವಲಸೆ' ಕಾದಂಬರಿಯ ಕೇಂದ್ರ ಪ್ರಜ್ಞೆಯಾಗಿ ಕೆಲಸ ಮಾಡಿವೆ" ಎಂದು ಬೆನ್ನುಡಿಯಲ್ಲಿ ಹೇಳಿಕೊಳ್ಳುತ್ತಾರೆ.

ಗೋಪಾಲಕೃಷ್ಣ ಪೈ ರವರ ಸ್ವಪ್ನ ಸಾರಸ್ವತ ಕಾದಂಬರಿಯು ಚರಿತ್ರೆಯೊಂದನ್ನು ಕಾದಂಬರಿಗೆ ವಸ್ತುವಾಗಿರಿಸಿಕೊಂಡು ರಚನೆಯಾದಂತಹ ಕಾದಂಬರಿಯು ಕಲ್ಪನೆ ಮತ್ತು ವಾಸ್ತವ ಎರಡನ್ನು

ಒಳಗೊಂಡು, ಸಾಹಿತ್ಯದ ಮೂಲಕವೂ ಸಹ ಚರಿತ್ರೆಯನ್ನು ಅರಿಯಬಹುದು ಎಂಬುದಕ್ಕೆ ಈ ಕೃತಿ ಸಾಕ್ಷಿಯಾಗಿದೆ. ಕಾದಂಬರಿಯ ಮುನ್ನುಡಿಯಲ್ಲಿ ಎಸ್.ಆರ್. ವಿಜಯಶಂಕರರವರೇ ಹೇಳುವಂತೆ "ಚರಿತ್ರೆ ಎಂದರೆ ಕೇವಲ ಚಕ್ರವರ್ತಿಗಳ ಕತೆಯಲ್ಲ, ಸಾಮಾನ್ಯ ಜನ ಸ್ಥಳೀಯ ಆಡಳಿತದಲ್ಲಿ ಹೊಂದಿಕೊಂಡು ಬೆಳೆದ ಭಾಗವೂ ಚರಿತ್ರೆಯ ಅಂಗವೇ"(ಗೋಪಾಲಕೃಷ್ಣ ಪೈ, ೨೦೧೨, ಮುನ್ನಡಿ) ಎನ್ನುವಂತೆ ಗೋವಾದ ಮೇಲೆ ಪೋರ್ಚುಗೀಸರ ಆಕ್ರಮಣ ಅಲ್ಲಿಯ ಜನಸಾಮಾನ್ಯರ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ವ್ಯಕ್ತಪಡಿಸುತ್ತಾರೆ.

ಇದೊಂದು ಸಮುದಾಯ ವಲಸೆಯಾಗಿದೆ. ನಾಗ್ದೋ ಬೇತಾಳನ ಭವಿಷ್ಯವಾಣಿಯಂತೆ "ಕಡಲಾಚೆಯ ಜನ ಬಂದು ಈ ದೇಶವನನು ಆಳುತ್ತಾರೆ ದೇವರನ್ನು ಜನರು ಮರೆಯುತ್ತಾರೆ, ಮತಧರ್ಮಗಳಲ್ಲೂ ಪರ ದೇಶದವರನ್ನು ಹಿಂಬಾಲಿಸುತ್ತಾರೆ. ಊರು ಬಿಟ್ಟು ಊರಿಗೆ ಹೋಗುತ್ತಾರೆ. ಹೊಸ ಊರು ಕಟ್ಟುತ್ತಾರೆ, ಕೆಡುವುತ್ತಾರೆ, ಮತ್ತೆ ಕಟ್ಟುತ್ತಾರೆ"(ಅದೇ, ಪು.೨೧)ಎಂಬ ಮಾತಿನಂತೆ ಕ್ರಿ.ಶ.೧೮೪೨ ರಲ್ಲಿ ಕಾಲಿಟ್ಟ ಪೋರ್ಚುಗೀಸರು ಗೋವಾ ಪ್ರಾಂತದಲ್ಲಿ ತಮ್ಮ ಆಡಳಿತವನ್ನು ಪ್ರಬಲವಾಗಿ ಬೇರೂರಿ, ಸಾಮಾಜಿಕವಾಗಿ, ರಾಜಕೀಯವಾಗಿ ಶೈಕ್ಷಣಿಕವಾಗಿ ಆರ್ಥಿಕವಾಗಿ ಕಾಲಘಟ್ಟಗಳ ನಂತರದಲ್ಲಿ ಆದಂತಹ ಪಲ್ಲಟಗಳನ್ನು ಗುರುತಿಸುತ್ತಾರೆ.

ಹೀಗೆ ವ್ಯಾಪಾರಕ್ಕಾಗಿ ಬಂದು ನೆಲೆಯಾದ ಪೋರ್ಚುಗೀಸರ ವಲಸೆ ಗೋವಾದಲ್ಲಿ ಅನೇಕ ರೀತಿಯ ಬದಲಾವಣೆಗಳಿಗೆ ಕಾರಣವಾದರು. ಇವರ ಪ್ರಭಾವದಿಂದ ಬಂದೂಕು, ಮುದ್ರಣ, ಬೀದಿ ಬೀದಿಯಲ್ಲಿ ಕುಡುಕರ ಅಡ್ಡೆಗಳು, ಶಾಲೆಗಲೂ ತೆರೆದವು. ಇವಷ್ಟೇ ಅಲ್ಲದೇ ಬ್ರಾಹ್ಮಣ ಸಂಪ್ರದಾಯದ ಮೇಲುಕೀಳು ಅಸ್ಪೃಶ್ಯತೆ ಎಂಬ ಆಚರಣೆಗಳಿಗೆ ಒಳಗಾದ ಕೆಳಜಾತಿಯವರಿಗೆ ಪೋರ್ಚುಗೀಸರು ಕೆಲವೊಂದು ಆಮೀಷವೊಡ್ಡಿ ಮತಾಂತರಗೊಳಿಸಿದರೆ, ಮಡಿ, ಮೈಲಿಗೆ, ಧರ್ಮ ಎಂದು ಬದುಕುತ್ತಿದ್ದ ಸಾರಸ್ವತ ಬ್ರಾಹ್ಮಣರಿಗೆ ಜೀವದ ಬೆದರಿಕೆಯೊಡ್ಡಿ ಬಾಯಿಯಲ್ಲಿ ಮಾಂಸ ತುರುಕಲು ಪ್ರಯತ್ನಿಸುತ್ತಾರೆ. ಇದಷ್ಟೇ ಅಲ್ಲದೇ ಹಿಂದೂ ದೇವಾಲಯಗಳನ್ನು ನಾಶಮಾಡಿ ಚರ್ಚುಗಳನ್ನು ಕಟ್ಟಿ ಹಿಂದೂಗಳ ಭಾವನೆ, ನಂಬಿಕೆಗಳಿಗೆ ಪೆಟ್ಟುಕೊಡುತ್ತಾರೆ.

ಇದರಿಂದಾಗಿ ಅಲ್ಲಿದ್ದ ನಲವತ್ತು ನಾಲ್ಕು ಸಾರಸ್ವತ ಬ್ರಾಹ್ಮಣ ಕುಟುಂಬಗಳು ಅನಿವಾರ್ಯವಾಗಿ ಧರ್ಮ ನಂಬಿಕೆಯನ್ನು ಉಳಿಸಿಕೊಳ್ಳಲು ಜೀವಕ್ಕೆ ಹೆದರಿ ರಾತ್ರೋ ರಾತ್ರಿ ತಮ್ಮ ದೇವರು ಸಮೇತ ಗೋವನ್ನು ಬಿಟ್ಟು ದಕ್ಷಿಣಾಭಿಮುಖವಾಗಿ ವಲಸೆ ಹೋಗುತ್ತಾರೆ.

ಹೀಗೆ ಪರದೇಶದಿಂದ ಬಂದ ಪೋರ್ಚುಗೀಸರ ಬಲವಂತದ ಸಂಸ್ಕೃತಿ ಹೇರುವಿಕೆ ಸಾರಸ್ವತರು ವಲಸೆ ಹೋಗಲು ಕಾರಣವಾಗುತ್ತದೆ. ಹೀಗೆ ವಲಸೆ ಬಂದವರು ಕೇವಲ ಸಾರಸ್ವತ ಬ್ರಾಹ್ಮಣರು ಮಾತ್ರವಲ್ಲ ಕೆಲವು ಆಮಿಷಗಳಿಗೆ ಒಳಗಾಗಿ ಪೋರ್ಚುಗೀಸರ ಮತಾಂತರಕ್ಕೆ ಒಳಗಾದ

ಕೆಳಜಾತಿಯವರು ಪೋರ್ಚುಗೀಸರ ಆಡಳಿತದ ನಂತರ ಬಂದ ಶಿವಾಜಿಯ ಆಕ್ರಮಣ ಕ್ರಿಶ್ಚಿಯನ್ನರು ಗೋವ ಬಿಟ್ಟು ದಕ್ಷಿಣದ ಕಡೆ ಬಂದು ನೆಲೆಯಾಗುವ ಪ್ರಸಂಗಗಳು ಬರುತ್ತದೆ. "ಕಾಲಕಾಲಕ್ಕೆ ಆಗಮಿಸಿದ ಸಾಹಸ ಬದುಕು ಮಾಡಿದ ಹೊಟ್ಟೆ ಹೊರೆಯಲು ಬಂದ, ದಾರಿ ತಪ್ಪಿ ಬಂದ ಸಾಂಬಾರ ಪದಾರ್ಥಗಳ ವ್ಯಾಪಾರಕ್ಕಾಗಿ ಬಂದ, ಸಕರ ಸರ್ವೋಂಭತು ಕುಟುಂಬಗಳು ಅಲ್ಲುಂಟು" ಎಂಬ ಡಾ.ರಾಜೇಗೌಡರವರ ಮಾತು ಪೂರಕವಾಗಿದೆ. ಹೀಗೆ "ಒಂದೋ ಪಿರಣಿಯಲ್ಲಿ ಕಿರಿಸ್ತಾನರಾಗಿರಬೇಕು. ಇಲ್ಲದಿದ್ದರೆ ಈ ದೇಶ ಬಿಟ್ಟು ಬ್ರಾಹ್ಮಣರಾಗಿ ಉಳಿಯಬೇಕು" (ರಾಜೇಗೌಡ, ೨೦೧೩, ಪು.೧೨, ಮಾಸ ಪತ್ರಿಕೆ) ಎಂದು ನಿರ್ಧಾರ ತೆಗೆದುಕೊಳ್ಳುವುದಕ್ಕೆ ಕ್ರಿಶ್ಚಿಯನ್ನರ ಬಲವಂತದ ಪರುತ್ತಗಳೇ ಕಾರಣವಾಗಿತ್ತು.

ಇದಕ್ಕಾಗಿ ಮಿಂಗ್ವೇಲರಾಜ ಸ್ಥಳೀಯ ಧರ್ಮವನ್ನು ಕಟುವಾಗಿ ದ್ವೇಷಿಸುತ್ತಿದ್ದ ಹಿಂದೂ ಧರ್ಮವನ್ನು ದಮನ ಮಾಡಲು ನಲವತ್ತೊಂದು ಅಂಶಗಳನ್ನು ತಂದಿದ್ದ. ಅವುಗಳಲ್ಲಿ ಮುಖ್ಯವಾದವುಗಳೆಂದರೆ

೧. ಕಲ್ಲಿನಿಂದಾಲೀ ಮರದಿಂದಾಗಲೀ ಇನ್ನಿತರ ಯಾವುದೇ ಲೋಹದಿಂದಾಗಲೀ ಮಾಡಿದ ಮೂರ್ತಿಗಳನ್ನು ಪೂಜಿಸಬಾರದು.

೨. ಸನ್ಯಾಸಿ, ಭಟ್ಟರು, ಪುರೋಹಿತರು ಪಂಡಿತರು ಇವರನ್ನು ಗಡಿಪಾರು ಮಾಡಬೇಕು.

೩. ಗೋವಾದ ಸುಂಕದ ಅಧಿಕಾರಿ ಅಣು ಸಿನಾಯಿ ತಕ್ಷಣ ಕ್ರಿಶ್ಚಿಯನ್ ಆಗದಿದ್ದರೆ ಕೂಡಲೇ ಕೆಲಸದಿಂದ ತೆಗೆದುಹಾಕಬೇಕು.

೪. ಗಂಡು ಮಕ್ಕಳಿಲ್ಲದ ಜನರು ತೀರಿಕೊಂಡರೆ ಅವರ ಆಸ್ತಿಯೆಲ್ಲ ರಾಜ್ಯಕ್ಕೆ ಸೇರಬೇಕು, ಆದರೆ ಹಾಗೆ ತೀರಿದವರಿಗೆ ಹೆಣ್ಣುಮಕ್ಕಳಿದ್ದು, ಅವರು ಕ್ರಿಶ್ಚಿಯನ್ನರಾಗಿ ಮತಾಂತರಗೊಂಡರೆ ಮಾತ್ರ ಆ ಆಸ್ತಿಯೆಲ್ಲವೂ ಅವರಿಗೆ ಸೇರಬಹುದು.

೫. ಹಾಳುಬಿದ್ದ ದೇವಾಲಯಗಳ ಜೀರ್ಣೋದ್ಧಾರಕ್ಕೆ ಹಣ ಸಿಗಬಾರದು. ಅಂತಹ ಸ್ಥಳಗಳಲ್ಲಿ ಚರ್ಚುಗಳನ್ನು ಕಟ್ಟಲೂ ಅನುಮತಿ ಇದೆ ಎಂಬ ಅಂಶಗಳನ್ನು ಜಾರಿಗೆ ತಂದರು.

ಹೀಗೆ ಪೋರ್ಚುಗೀಸರು ತಮ್ಮ ಅನುಕೂಲಕ್ಕೆ ತಕ್ಕಂತೆ ಕೆಲವು ನಿಯಮಗಳನ್ನು ರೂಪಿಸಿ ಅವುಗಳನ್ನು ಬಲವಂತವಾಗಿ ಜನಸಾಮಾನ್ಯರ ಮೇಲೆ ಹೇರುವ ಪ್ರಯತ್ನದ ಫಲವೇ ಸಾರಸ್ವತ ಬ್ರಾಹ್ಮಣರ ವಲಸೆಗೆ ಪ್ರೇರಣೆಯಾಗುತ್ತದೆ.

ಇಂಥ ಸಂದರ್ಭದಲ್ಲಿಯೇ ಸಾರಸ್ವತ ಬ್ರಾಹ್ಮಣರು ರಾಜ್ಯ ಬಿಟ್ಟರೂ ಪರವಾಗಿಲ್ಲ, ಆದರೆ ಧರ್ಮ ಬಿಡಬಾರದು, ಪ್ರತಿಭಟಿಸಲು ನಮ್ಮ ಧರ್ಮಗ್ರಂಥೋಕ್ತ ವಿಚಾರಗಳೇ ಸಾಕು. ಯಾರಿಗೆ

ನಮ್ಮ ನೆಲ, ಧರ್ಮ, ಭಾಷೆಗಳಲ್ಲಿ ಅಭಿಮಾನವಿದೆಯೋ ಅಂಥವರು ರಾಜೋಲಿ ಬಿಟ್ಟು ಹೊರಡಬೇಕು. ಈ ರೀತಿ ಮಾಡಿದಾಗ ನಮ್ಮನ್ನು ದೇವರು ಕಾಯುವುದಿಲ್ಲವೇ ಆ ರಾಕ್ಷಸರನ್ನು ಸೋಲಿಸುವುದು ಅವನಿಂದ ಸಾಧ್ಯವಿಲ್ಲವೆ ಎಂದು ಕಿರುಚಿಕೊಳ್ಳುವ ನಾಗ್ಡೋ ಬೇತಾಳದ ನೋವು ದೊಡ್ಡದಿತ್ತು. ಇದು ಇಂತಹ ಕಾಲ ಶಾಶ್ವತವಲ್ಲ. ಈಗ ನೀವು ಊರು ಬಿಟ್ಟು ಬೆಳೆದು ಮುಂದೆ ಒಳ್ಳೆಯ ದಿನಗಳು ಬರಲಿವೆ. ಆಗ ನೀವು ಬರಬಹುದು ಎಂಬ ಆದೇಶದ ಮೇರೆಗೆ ಸಾರಸ್ವತರು ವಲಸೆ ಹೋಗಲು ಸಜ್ಜಾಗುತ್ತಾರೆ.

ಆದರೂ ಅವರಲ್ಲಿ ದುಃಖ ಮಡುಗಟ್ಟಿತ್ತು. "ನಾವು ಊರು ಬಿಟ್ಟು ಹೋಗುವುದಿಲ್ಲ. ನಮಗೆ ಇಲ್ಲಿಯೂ ಇರುವ ಆಸೆ. ನೆಲದ ಋಣ ಬಿಡಲು ಸಾಧ್ಯವಿಲ್ಲ ಎಂದು ಸಂಕಟಪಡುತ್ತಿದ್ದರು. ಆದರೆ ಊರೊಳಗೆ ಬಂದ ಪೋರ್ಚುಗೀಸರು "ಕೇಳಿರೋ ಭೊಟ್ಟೇ ಮಕ್ಕಳಿರಾ ನಿಮ್ಮ ಗ್ರಂಥಗಳನ್ನು ಓದಬಾರದು. ನಿಮ್ಮ ಮತಗಳನ್ನು ಹೇಳಬಾರದು. ನಿಮ್ಮ ದೇವರುಗಳನ್ನು ಪೂಜಿಸಬಾರದು, ನಾಳೆ ದೇವಸ್ಥಾನಗಳನ್ನು ಪುಡಿ ಮಾಡಲು ಸೈನ್ಯ ಬರುತ್ತದೆ"(ಅದೇ, ಪು.೯೦) ಎಂದು ಆದೇಶ ಹೊರಡಿಸಿದ್ದನ್ನು ಕೇಳಿ ಸಾರಸ್ವತರು ನಾಳೆ ಬಂದರೆ ನಮ್ಮಲ್ಲಿ ಯುದ್ಧ ಮಾಡಲು ಬರುವುದಿಲ್ಲ. ನಮ್ಮಲ್ಲಿ ಶಸ್ತ್ರಾಸ್ತ್ರಗಳು ಇಲ್ಲ ಎಂದು ಕಂಗಾಲಾಗಿ ಧರ್ಮಕ್ಕಾಗಿ ಊರು ಬಿಟ್ಟರು.

ಹೀಗೆ ಸಾರಸ್ವತದ ಅಸಹಾಯಕತೆ ಮತ್ತು ಅನಿವಾರ್ಯತೆಗಳೆರಡು ವಲಸೆಗೆ ಮುಖ್ಯ ಕಾರಣವಾಗುತ್ತವೆ. ಊರು ಬಿಡುವ ದಿನವಂತು ಮನೆಯಲ್ಲಿ ಯಾರೂ ಉಣ್ಣದೇ ಅಡುಗೆಯೂ ಮಾಡದೇ ಚಿಂತಜನಕರಾಗಿದ್ದರೂ ಒಟ್ಟು ಳಳ ಕುಟುಂಬಗಳು ಮೂವತ್ತು ಮೂವತ್ತೈದು ಚಕ್ಕಡಿಗಳು, ಹೆಂಗಸರು ಒಡವೆಗಳನ್ನು ವಸ್ತ್ರದಲ್ಲಿ ಗಂಟು ಕಟ್ಟಿ ಬೆತ್ತದ ಪೆಠಾರಿಗಳಲ್ಲಿ ಭದ್ರಗೊಳಿಸಿದ್ದರು. ಆದರೂ ಹಿಂದೆ ಉಳಿದ್ದ ಉಳಿದ ಸಾಮಾನುಗಳೆಷ್ಟೋ, ಹಿತ್ತಲಿನ ಮಾವಿನ ಮರದ ತುಂಬ ಮಳೆಗಾಲದ ಸಲುವಾಗಿ ಉಪ್ಪಿನಕಾಯಿ ಹಾಕಲು ಅಣಿಯಾದ ಕಾರ್ಯಗಳು ಮಣ್ಣಿನ ಗಡಿಗೆಯ ತುಂಬ ನೀರಲ್ಲಿ ಹಾಕಿ ಕೊಳೆಸಿದ ಅಡಕೆಯ ಹಣ್ಣುಗಳು ಅದನ್ನೆಲ್ಲ ಹಾಗೆಯೇ ಬಿಟ್ಟು ಬರಬೇಕಾಯಿತಲ್ಲ ಎಂಬ ತಹತಹ ಹೊರಡುವ ಮೊದಲು ಎಲ್ಲಿ ಬಂದು ಸಾಲಾಗಿ ನಿಲ್ಲಿಸಿ ಗುಂಡಿಕ್ಕಿ ಕೊಲ್ಲುತ್ತಾರೆ ಎಂಬ ಭೀತಿ, ತಲೆಯ ಮೇಲೆ ಸೂರು ಇಲ್ಲ, ಸತ್ತರೆ ದಿಕ್ಕಿಲ್ಲ, ನಾಳೆಯ ಸ್ಥಿತಿ ಏನೆಂದು ಗೊತ್ತಿಲ್ಲ. ಎಲ್ಲರೂ ಸಂಪೂರ್ಣ ಕೈ ಬಿಟ್ಟ ಸಂತಾನ ನಾವು ಎಂದು ದುಃಖಿಸುವ ಸಂದರ್ಭದ ಸಂವೇದನೆಗಳನ್ನು ಚಿತ್ರಿಸುತ್ತಾರೆ.

ದಾರಿ ಸಾಗುತ್ತಿರುವಾಗ ಸವೆದ ದಾರಿಯನ್ನು ಮತ್ತೆ ನಾವು ತುಳಿಯುವ ಆಗಿಲ್ಲ ಎಂಬ ಅನಾಥ ಭಾವನೆಯಿಂದ ಹೊರಡುತ್ತಾರೆ. ದಾರಿಯಲ್ಲಿನ ವಯಸ್ಸಾದವರ ಸಾವು ನಾಗೇಶ ಹೆಗ್ಗಡೆಯ ಹುಚ್ಚು, ಕಳ್ಳತನ ಹೀಗೆ ನಾನಾ ಸಮಸ್ಯೆಗಳಿಗೆ ಸಿಲುಕುತ್ತಾರೆ. ಬಾರಕೂರನಲ್ಲಿ ಕಳ್ಳರ ಹಾವಳಿಯಿಂದ

ಕೆಲವರಂತು ಕೊಚ್ಚಿಯೂ ಬೇಡ ಕೈಲಾಂಡಿಯು ಬೇಡ ನಾವು ಗೋಪಿಗೆ ಹೋಗುತ್ತೇವೆ. ಏನಿಲ್ಲ ಅಂದರು ವಾಸಕ್ಕೊಂದು ಮನೆ ಇದೆ. ಧರ್ಮ ಯಾವುದಾದರೇನು ಈಶ್ವರನೂ ಆದೀತೂ ಯೇಸುಕ್ರಿಸ್ತನೂ ಆದೀತು ಎಂದು "ಮಾತಿಲ್ಲದ ಸ್ಮಶಾನಯಾತ್ರೆ"(ಅದೇ, ಪು.೯೧) ಯಂತೆ ದಾರಿ ಸಾಗಿಸುತ್ತಾರೆ.

ಏನೇ ಆದರೂ ಆಗಿನ ಕಾಲದಲ್ಲಿ ಬ್ರಾಹ್ಮಣರು ಸ್ಥಾನಮಾನಗಳಲ್ಲಿ ಮೇಲ್ವರ್ಗದವರಾಗಿದ್ದರಿಂದ ಎಲ್ಲೇ ಹೋದರೆ ಅವರಿಗೆ ಸಹಾಯ, ಗೌರವ ಸಲ್ಲುತ್ತಿದ್ದು, ಹಾಗಾಗಿ ಹೊನ್ನಾವರದ ಚಿನ್ನ ಭೈರಾದೇವಿಯ ಆಶ್ರಯವನ್ನು ಒಂದಿಷ್ಟು ದಿನ ನೆಲೆಯಾಗಿ ನಂತರ ಅದೇ ಮಾರ್ಗವಾಗಿ ಕುಂದಾಪುರದಿಂದ ಕೊಚ್ಚಿಯ ತನಕ ಹದಿನೆಂಟು ಪೇಟೆಗಳಲ್ಲಿ ಸಾರಸ್ವತ ಬ್ರಾಹ್ಮಣರು ಹರಡುತ್ತಾರೆ. ಆದಷ್ಟು ಬೇಗ ಈ ಗುರಿಯಲ್ಲದ ಪ್ರಯಾಣ ನಿಲ್ಲಿಸಿ ಒಂದು ನೆಲೆಕೊಡು ಎಂದು ಮೌನವಾಗಿ ಪ್ರಾರ್ಥಿಸಿದ ವಿಟು ಪೈ ಕುಂಬಳೆಯಲ್ಲಿ ನೆಲೆಯಾಗುತ್ತಾರೆ. ಗೋವಾದಲ್ಲೂ ಕೃಷಿ ವ್ಯಾಪಾರ ತೊಡಗಿಸಿದ್ದ ಇವರು ಕುಂಬಳೆಗೆ ಬಂದ ಮೇಲೆ ಜೀವನಕ್ಕಾಗಿ ಮತ್ತೇ ವ್ಯಾಪಾರ ಮಾಡಲು ಶುರು ಮಾಡುತ್ತಾರೆ. ಕಲ್ಲಿಕೋಟೆ ಕಣ್ಣಾನ್ನೂರು ಕಡೆಗಳಿಂದ ಬರುವ ಮುಸಲ್ಮಾನರು ಅಕ್ಕಿ, ಮೆಣಸು, ಹೊಗೆಸೊಪ್ಪು, ಈರುಳ್ಳಿ ಎಂದು ತಂದು ಕಾಡಿನ ಕಡೆಯಿಂದ ಗಂಧ, ಬಾಳೇಕಾಯಿ, ಅರಸಿನ ಬೆಲ್ಲ ಇತ್ಯಾದಿಗಳನ್ನು ಆಮದು ರಫ್ತು ಮಾಡುವ ವ್ಯಾಪಾರಕ್ಕಿಳಿಯುತ್ತಾನೆ.

ಇನ್ನು ಉತ್ತರ ಕಡೆಯಿಂದ ಶಿವಾಜಿ ಮಹಾರಾಜ ದಾಳಿಗೆ, ಕ್ರಿಶ್ಚಿಯನ್ನರಾಗಿ ಮತಾಂತರ ಗೊಂಡಿದ್ದ ಹಿಂದೂ ಜನ ಒಂದು ಲಕ್ಷ ಕ್ರಿಶ್ಚಿಯನ್ನರು ಮಂಗಳೂರಿಗೆ ವಲಸೆ ಬಂದಿದ್ದರು. "ಊಟಕ್ಕಿಲ್ಲ, ಉಣಕ್ಕಿಲ್ಲದೆ ಉತ್ತರದಲ್ಲಿ ಮರಾಠಿ ಮಂದಿ, ಪೂರ್ವದಲ್ಲಿ ಮುಸಲ್ಮಾನ ಸಾಮ್ರಾಜ್ಯ , ಪಶ್ಚಿಮದಲ್ಲಿ ಭೋರಿಡುವ ಸಮುದ್ರ"(ಅದೇ, ಪು.೧೮೨) ಹಾಗಾಗಿ ತೆಂಕಣಕ್ಕೆ ಬಂದವರು ಆ ಕಿರಿಸ್ತಾನರಾಗಿಯೂ ಸುಖಪಡದೆ, ಧರ್ಮವನ್ನು ಉಳಿಸಿಕೊಳ್ಳದೇ ಅತ್ಯಂತ ನೋವಿನಿಂದ ವಲಸೆ ಬಂದು ಇವರು ಗುಡಿಸಲುಗಳನ್ನು ಕಟ್ಟಿಕೊಂಡು ಬದುಕುತ್ತಿದ್ದರು. ಇವರ ಬಡತನವನ್ನು, ಹಸಿವನ್ನು ಲೇಖಕರು ವಿಷಾದದ ರೀತಿಯಲ್ಲಿ ವ್ಯಕ್ತಪಡಿಸುತ್ತಾರೆ. ವಿಷಾದ ತುಂಬಿದ ದೃಷ್ಟಿ ಚೌಕ ಮುಖ, ಸೊರಗಿ ಗುಳಿಬಿದ್ದ ಕೆನ್ನೆಗಳು, ಹರಕು ಬಟ್ಟೆ ತೊಟ್ಟ ಹೆಂಗಸರು. ತಮ್ಮ ನೋವನ್ನು ವಲಸೆ ಬಂದ ಸಾರಸ್ವತ ಬ್ರಾಹ್ಮಣರ ಹತ್ತಿರವೇ ಹೇಳಿಕೊಳ್ಳುತ್ತಾರೆ.

"ನಮ್ಮದು ಗೋವೆ, ಮರಾಠೆ ಜನರು ನಮ್ಮನ್ನು ಓಡಿಸಿದರು. ಅಲ್ಲಿ ನಮಗೆ ಬೇಸಾಯ ಇತ್ತು. ಆದರೆ ಓಡಿ ಬರುವಾಗ ಆ ನೆಲ ಹಿಡಿದುಕೊಂಡು ಬರಲು ಸಾಧ್ಯವೇ, ಬಹಳ ಕಷ್ಟುಪಟ್ಟು ಇಲ್ಲಿಯತನಕ ಬಂದೆವು. ನೀವೆಲ್ಲ ಇಲ್ಲಿದ್ದೀರೆಂದು ಉಳಿದಿದ್ದೇವೆ. ನಮ್ಮ ಅವಸ್ಥೆ ನಮಗೆ ತಿಳಿಯದು ಜೀವ ಉಳಿದಿದ್ದು ದೊಡ್ಡದು. ಮಂಗಳೂರಿಗೆ ಬಂದಾಗ ನಾವು ಸೋತು ಸುಣ್ಣವಾಗಿದ್ದೆವು.

ಯೆಸುವಿನ ದಯೆ ಇಲ್ಲದಿದ್ದರೆ ನಮ್ಮ ಹೆಣ ತೇಲುತ್ತಿತ್ತೋ ಏನೋ? ಇಲ್ಲಿ ಅಲ್ಲಲ್ಲಿ ನಮ್ಮ ಜನ ಗುಂಪು ಗುಂಪಾಗಿ ವಾಸಿಸುತ್ತಾ ಇದ್ದಾರೆ. ಕಂಕನಾಡಿನಲ್ಲಿ ಎಲ್ಲಾದರೂ ಒಂದು ಗುಡಿಸಲು ಕಟ್ಟಿ ಇರಿ ಎಂದರು. ಯಾರೋ ಇದ್ದೇವೆ ಈಗ ಏನು ಕೆಲಸವು ಇಲ್ಲ. ಏನು ಕೊಟ್ಟರೂ ಮಾಡಿಯೇನು ಹೊಟ್ಟೆಗಾಗಿ ಮಾಡಬೇಕಲ್ಲ? ದಾರಿಯಲ್ಲಿ ನನ್ನ ಇಬ್ಬರು ಮಕ್ಕಳು ತೀರಿಕೊಂಡರು. ಮಗಳೊಬ್ಬಳು ಓಡಿಹೋದಳು"(ಅದೇ, ಪು.೨೯೫) ಎಂದು ತಮ್ಮ ವೇದನೆಯನ್ನು ಹೇಳಿಕೊಳ್ಳುವ ಸ್ಥಿತಿ ಕಾಣಿಸಿಕೊಳ್ಳುತ್ತದೆ.

ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬಹುದು. ಇವರೆಲ್ಲರು ಈ ಹಿಂದೆ ಹಿಂದೂಗಳಾಗಿದ್ದವರು. ಪೋರ್ಚುಗೀಸರ ಆಮೀಷಗಳಿಗೆ ಬಲಿಯಾಗಿ ಕ್ರಿಶ್ಚಿಯನ್ನರಾದವರು. ತಮ್ಮ ಮೂಲ ಧರ್ಮವನ್ನು ಮರೆತು ಕ್ರಿಶ್ಚಿಯನ್ ಧರ್ಮವನ್ನೇ ಬಲವಾಗಿ ನಂಬಿದ್ದರು. ಅದು ಎಷ್ಟು ಪ್ರಬಲವಾಗಿತ್ತೆಂದರೆ 'ಯೇಸುವಿನ ದಯೇ ಇಲ್ಲದಿದ್ದರೆ ನಮ್ಮ ಹೆಣ ತೇಲುತ್ತಿತ್ತೋ ಏನೋ?"(ಅದೇ, ಪು.೨೯೫) ಎಂಬ ಮಾತು ಪೋರ್ಚುಗೀಸರು ಹೇರಿದ ಕ್ರಿಶ್ಚಿಯನ್ ಧರ್ಮದ ಸ್ವಭಾವವನ್ನು ತಿಳಿಸುತ್ತದೆ. ಹಾಗೆಯೆ ಈಗಾಗಲೇ ವಲಸೆ ಬಂದವರನ್ನು ಹುಡುಕಿಕೊಂಡು ಸಹಾಯ ಸಿಗುವುದೆಂಬ ಆಸೆಯೋ ಅಥವಾ ನಮ್ಮ ಊರಿನವರು ಎಂಬ ಧೈರ್ಯವೋ ಇವರನ್ನು ಇಲ್ಲಿಗೆ ಕರೆತಂದಿತ್ತು.

ಈ ಮುಂಚೆ ಸಾರಸ್ವತ ಬ್ರಾಹ್ಮಣರು ವಲಸೆ ಬಂದಾಗ ಪ್ರಯಾಣದಲ್ಲಿ ಒಂದಿಷ್ಟು ಸಾವು, ಕಳ್ಳತನ, ಸಂಕಷ್ಟಗಳು ಎದುರಾಗಿದ್ದರೂ ಇರಲು ನೆಲೆ ಮತ್ತು ಊಟಕ್ಕೆ ತೊಂದರೆಯಾಗಿರಲಿಲ್ಲ. ಕಾರಣ ರಾಜಾಶ್ರಯ, ಊರಿನ ಆಶ್ರಯ ಮೇಲ್ವರ್ಗದವರಿಗೆ ಮೀಸಲಿತ್ತು. ಆದರೆ ಕೆಳವರ್ಗದವರಿಗೆ ಉಂಟಾದ ಹಸಿವು, ಬಡತನ, ಸಾವು, ನೋವುಗಳ ಪರಿಣಾಮ ಹೆಚ್ಚು ಕಾಡಿರುವುದು ಇಬ್ಬರ ವಲಸೆಯಲ್ಲಿರುವ ಭಿನ್ನತೆಯನ್ನು ಕಾಣಬಹುದಾಗಿತ್ತು. ಈ ನಡುವೆ ಸಾರಸ್ವತರು ವಲಸೆ ಬಂದು ನೆಲೆಯಾದ ನಂತರ ವಿಟ್ಟು ಪೈ ಕುಟುಂಬದಲ್ಲಿ ನಡೆಯುತ್ತಿದ್ದ ಅಣ್ಣತಮ್ಮಂದಿರ ನಡುವಿನ ಕಲಹಗಳು ಸಾಮಾನ್ಯವಾಗಿದ್ದವು. ಜೊತೆಗೆ ಅಂದಿನ ಸಮಾಜದಲ್ಲಿದ್ದ ಮೂಢನಂಬಿಕೆಗಳು, ಕಳೆದು ಹೋದ ವ್ಯಕ್ತಿಯನ್ನು ಹುಡುಕಲು ಬಳಸುತ್ತಿದ್ದ ಅಂಜನದಂತಹ ತಂತ್ರಗಳ ಹಿಂದಿರುವ ಮೋಸಗಳು ಈ ಕೃತಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಇನ್ನು ವೆರಣೆಯಿಂದ ವಲಸೆ ಬಂದ ಮೇಲೆ ಸಾಂಸ್ಕೃತಿಕವಾಗಿ ಆದ ಪಲ್ಲಟಗಳು ಗಮನಾರ್ಹವಾಗಿವೆ. ಈ ಮೊದಲು ಕವಳೆ ಮಠಕ್ಕೆ ನಡೆದುಕೊಳ್ಳುತ್ತಿದ್ದ ಇವರು ವಲಸೆಯ ನಂತರ ಆ ಸಮಾಜಕ್ಕೆ ತಕ್ಕಂತಹ ಕಾಶಿ ಮಠಕ್ಕೆ ನಡೆದುಕೊಳ್ಳುವುದು. ಶೈವ ಪಂಗಡಕ್ಕೆ ಸೇರಿದ್ದ ಇವರು ವೈಷ್ಣರಾಧನೆ ಮಾಡಲು ತೊಡಗಿದರು. ನಾಗಾರಾಧನೆ, ಭೂತಾರಾಧನೆಗಳ ಸಂಪ್ರದಾಯ ಬೆಳೆದು ಬಂದಿದ್ದು ಧರ್ಮಸ್ಥಳದ ಮಂಜುನಾಥನನ್ನು ಕುಲದೈವವಾಗಿ ಸ್ವೀಕರಿಸುವುದು. ಈ ಮೊದಲು

ಶಿವನನ್ನು ಪೂಜಿಸುವ ಕ್ರಮ ಇತ್ತು ಮತ್ತು ಆಹಾರ ಪದ್ಧತಿಯಲ್ಲಿ ಮೀನು ತಿನ್ನುತ್ತಿದ್ದರು. ಕುಂಬಳಿಯಲ್ಲಿ ಬಂದು ಕದ್ದು ಮುಚ್ಚಿ ತಿನ್ನುವ ಪ್ರಸಂಗಕ್ಕೆ ಸಿಲುಕಿ ಕೊಳ್ಳುತ್ತಾರೆ.

ಹೀಗೆ ನಾನಾ ತರಹದ ಬದಲಾವಣೆಗಳು ವಲಸೆಯ ಪರಿಣಾಮದಿಂದ ಸಾರಸ್ವತರು ತಮ್ಮ ಬದುಕಿನಲ್ಲಿ ಅನಿವಾರ್ಯವಾಗಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾರೆ. ಬದುಕಿನ ಕೊನೆಯ ವರೆಗೂ ಮತ್ತೆ ತಿರುಗಿ ಹೋಗಬೇಕು. ನಮ್ಮ ಈ ಕತೆಯನ್ನು ಕಾಲಕಾಲಕ್ಕೆ ಮಕ್ಕಳಿಗೆ ತಪ್ಪದೇ ಹೇಳಬೇಕು ಎಂಬ ನಿಯಮದಂತೆ ಈ ಕತೆ ಸಾಗುತ್ತದೆ. ಕೊನೆಯಲ್ಲಿ ಉಳಿಯುವ ವಿಟ್ಟು ಪೈ ಕುಡಿ ಸಿದ್ದನ ವೆಂಕಟೇಶನನ್ನು ಎತ್ತಿಕೊಂಡು ಹೋಗುವಲ್ಲಿಗೆ ಕಥೆ ಕೊನೆಗೊಳ್ಳುತ್ತದೆ.

ಹೀಗೆ ಮೂರು ಬಗೆಯಲ್ಲಿನ ವಲಸೆ ಭಿನ್ನ ಸ್ವರೂಪಗಳು ಕಾಣಿಸುತ್ತದೆ. ಒಂದು ಕಾದಂಬರಿ ಪ್ರಸ್ತಾಪಿಸುವ ಲೇಖಕರು ಬಳಸಿಕೊಂಡಿರುವ ಐತಿಹಾಸಿಕ ಘಟನೆಗಳಾದ ಪೋರ್ಚುಗೀಸರ ಗೋವಾ ಪ್ರದೇಶದಿಂದ ಗೋವವನ್ನು ಕೇಂದ್ರ ಸ್ಥಳವಾಗಿ ಗುರುತಿಸಿ ಗೋವಾ ಪ್ರಾಂತ್ಯಕ್ಕೆ ವಲಸೆ ಬಂದು ಪ್ರೋರ್ಚುಗೀಸರು ಗೋವಾವನ್ನು ತಮ್ಮ ವಸಾಹತು ಆಗಿ ಪರಿವರ್ತಿಸಿ, ಜನಸಾಮಾನ್ಯರ ಮೇಲೆ ಹೇರಿದ ೪೧ ಅಂಶಗಳ ನಿಯಮಗಳು, ದಬ್ಬಾಳಿಕೆಯನ್ನು ನಡೆಸುವ ಕ್ರಮ ಇಲ್ಲಿ ಮುಖ್ಯವಾಗುತ್ತದೆ. ಹಾಗೂ ಈ ವಲಸೆಯಿಂದಾಗಿ ಅಪಾರ ಪ್ರಮಾಣದ ಕಷ್ಟ ನಷ್ಟಗಳು ಸಂಭವಿಸುತ್ತವೆ. ವಲಸೆ ಬಂದವರು ಹೇರುವ ಭಾಷೆ, ಸಂಸ್ಕೃತಿಗಳು ಹಾಗೂ ಸಾರಸ್ವತರು ಇದ್ದ ಸಂಸ್ಕೃತಿಯನ್ನು ಬಿಡದೇ ಇನ್ನೊಬ್ಬರ ಮೇಲೂ ಹೇರದೇ ಕಾಲಕಾಲಕ್ಕೆ ಅಲ್ಪ ಸ್ವಲ್ಪ ಮಾರ್ಪಾಡುಗಳನ್ನು ಮಾಡಿಕೊಳ್ಳುವ ಬಗೆ ಗಮನಾರ್ಹವಾದವುಗಳು.

ಇನ್ನು ಎರಡನೇಯದಾಗಿ ಸಾರಸ್ವತರು ತಮ್ಮ ಸಂಸ್ಕೃತಿಯನ್ನು ಬಿಟ್ಟುಕೊಡದೇ ವಲಸೆ ಬಂದು ಕಾಲನಂತರದಲ್ಲಿ ಅಲ್ಪ ಸ್ವಲ್ಪ ಮಾರ್ಪಾಡುಗಳನ್ನು ಮಾಡಿಕೊಂಡು ವ್ಯಾಪಾರದಲ್ಲಿ ತೊಡಗಿಸಿಕೊಂಡು ಮತ್ತೇ ತಮ್ಮ ಸಂಪತ್ತನ್ನು ಗಳಿಸಿಕೊಳ್ಳುತ್ತಾರೆ. ಮೂರನೇಯದು ವಲಸೆ ಬರಲು ಇಷ್ಟವಿಲ್ಲದೇ ಪೋರ್ಚುಗೀಸರ ಆಮೀಷಗಳಿಗೆ ಬಲಿಯಾಗಿ ಸುಖವಾಗಿರಬಹುದೆಂಬ ಆಸೆಯಿಂದ ಮತಾಂತರಕ್ಕೆ ಒಳಗಾಗಿ, ಶಿವಾಜಿಯ ದಾಳಿಯಿಂದ ಬಂದವರ ಬದುಕಿನ ಕಷ್ಟಕರ ಜೀವನ ಧರ್ಮಗಳಲ್ಲಿ ಆದ ಮಾರ್ಪಾಡುಗಳನ್ನು ಗುರುತಿಸಬಹುದು.

ಒಟ್ಟಾರೆ ಸ್ವತಃ ಲೇಖಕರೇ ಈ ಕೃತಿಯ ಆಶಯವನ್ನೇ ಹೇಳುವಂತೆ "ಇದು ಜನಸಾಮಾನ್ಯರ ಅಥವಾ ಸಮುದಾಯದ ನೋವು ನಲಿವುಗಳು, ಆತಂಕ, ಆಕಾಂಕ್ಷೆಗಳ, ನಂಬಿಕೆ, ದ್ರೋಹಗಳನ್ನು, ಸಾಮಾಜಿಕ, ರಾಜಕೀಯ, ಧಾರ್ಮಿಕ ಆವರಣ, ಪರಿಚಯ ಮಾಡಿಕೊಳ್ಳುವುದಕ್ಕೆ ಇತಿಹಾಸದ ವಸ್ತು ಅನಿವಾರ್ಯವಾಗಿತ್ತು"(ಅದೇ, ಪು.೪೭೧) ಎಂದು ಹೇಳುತ್ತಾರೆ. ಇವರು ಹೇಳುವಾಗೆ ಇದು ಜನಸಾಮಾನ್ಯರಲ್ಲಿ ಸಾರಸ್ವತ ಬ್ರಾಹ್ಮಣರ ಬದುಕು, ಸಂಪ್ರದಾಯ, ನಂಬಿಕೆ, ಆಚರಣೆಗಳಿಗೆ

ಹೆಚ್ಚು ಒತ್ತು ಕೊಟ್ಟಿದ್ದಾರೆ. ಅಲ್ಲಲ್ಲಿ ಸ್ವಲ್ಪ ಪ್ರಮಾಣದ ಕ್ರಿಶ್ಚಿಯನ್ನರಾಗಿ ಮತಾಂತರಗೊಂಡ ಕೆಳಜಾತಿಯರ ನೊವು, ಸಂಕಷ್ಟಗಳನ್ನು ಹೇಳಿರುವುದನ್ನು ಗಮನಿಸಬಹುದು.

ಒಟ್ಟಾರೆ ಸಮುದಾಯ ವಲಸೆಗಳಲ್ಲಿ ಒಗ್ಗಟ್ಟು ಒಬ್ಬರಿಗೊಬ್ಬರ ಸಂಕಷ್ಟಗಳಲ್ಲಿ ಸಹಾಯ ಮಾಡುವ ಮನೋಭಾವ ಎದ್ದು ಕಾಣುತ್ತದೆ. ಮತ್ತು ಡಾ.ನಾ.ದಾಮೋದರ ಶೆಟ್ಟಿಯವರು ಹೇಳುವಂತೆ "ವಲಸಿಗರ ಬದುಕಿನ ಚಿತ್ರಣಗಳು ಕನ್ನಡ ಸಾಹಿತ್ಯ ಸಂಪತ್ತಿನ ಒಂದು ಪ್ರಬಲ ಕೊಂಡಿ' ಎಂಬ ಮಾತು ಈ ಕೃತಿಗೆ ಹೆಚ್ಚು ಸೂಕ್ತವಾಗುತ್ತದೆ. ಇದೊಂದು ತೀರ ಭಿನ್ನ ಆಯಾಮವನ್ನೊಳಗೊಂಡಿದೆ. ಸಮುದಾಯ ಚರಿತ್ರೆಗಳ ಅನುಸಂಧಾನದಲ್ಲಿ ಕೃತಿ ಮೂಡಿಬಂದಿದೆ. ಇಲ್ಲಿ ಸ್ಪಷ್ಟವಾಗಿ ವಲಸೆಯ ಎರಡು ಪರಿಣಾಮಗಳು ಕಾಣಸಿಗುತ್ತವೆ. ೧. ಪೋರ್ಚುಗೀಸರ ವಲಸೆ ೨. ಸಾರಸ್ವತರ ವಲಸೆ. ಪೋರ್ಚುಗೀಸ್ ವಲಸೆ ದಬ್ಬಾಳಿಕೆ ಪರಿಣಾಮಗಳನ್ನು ದಾಖಲಿಸಿದರೆ, ಸಾರಸ್ವತರ ವಲಸೆ ದಬ್ಬಾಳಿಕೆ ಯಿಂದಾಗಿ ವಲಸೆ ಹೋಗುವ ಸ್ಥಿತಿ ತಲುಪುತ್ತದೆ. ವಲಸೆಯಿಂದ ವಲಸೆಯಂತಹ ವಿನೂತನ ಪರಿಕಲ್ಪನೆ ಇದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಸಮುದಾಯಗಳು ವಲಸೆಯಲ್ಲಿ ಗೋಪಾಲಕೃಷ್ಣ ಪೈ ರವರ ಸ್ವಪ್ನ ಸಾರಸ್ವತ ಮತ್ತು ಬೆನಕನ ಹಳ್ಳಿ ಜಿ.ನಾಯಕರ 'ವಲಸೆ' ಎಂಬ ಎರಡು ಕಾದಂಬರಿಗಳನ್ನು ನೋಡಲಾಗದೆ ಇಲ್ಲಿ ಬರುವ ಇನ್ನಿತರ ಅನುಷಂಗಿಕ ವಿವರಗಳನ್ನು ನೋಡುವುದಾದರೆ ಎರಡು ಕಾದಂಬರಿಗಳಲ್ಲಿಯೂ ಪ್ರಮುಖವಾಗಿ ಕಾಣಿಸಿಕೊಳ್ಳುವುದು 'ಶೋಷಣೆ'. ಸ್ವಪ್ನ ಸಾರಸ್ವತದಲ್ಲಿ ಪೋರ್ಚುಗೀಸರು ಬೇರೆ ದೇಶದಿಂದ ಬಂದು ಶೋಷಣೆ ಮಾಡಿದೆ. 'ವಲಸೆ'ಯಲ್ಲಿ ನಮ್ಮವರೇ ಆದ ಶ್ರೀಮಂತರು, ಬಂಡವಾಳಶಾಹಿಗಳು ಬಡ ಜನರನ್ನು ಶೋಷಣೆ ಮಾಡುತ್ತಾರೆ. ಜೊತೆಗೆ ಹಸಿವು ಲಂಬಾಣಿಗರ ವಲಸೆಗೆ ಪ್ರಮುಖವಾಗಿ ಕಾಣಿಸಿಕೊಂಡರೆ, ಸಾರಸ್ವತರಲ್ಲಿ ಧರ್ಮ, ನಂಬಿಕೆಗಳು ಪ್ರಮುಖವಾಗುತ್ತವೆ. ಹಾಗೆಯೆ ಸಾರಸ್ವತರಲ್ಲಿ ಒಗ್ಗಟ್ಟು, ಧಾರ್ಮಿಕ ಆಚಾರ, ವಿಚಾರಗಳು ವ್ಯಾಪಾರದ ತಂತ್ರಗಳು ಕಾಣಿಸಿಕೊಳ್ಳುತ್ತವೆ. ಹಾಗೆಯೆ ಇಲ್ಲಿಯೂ ಸಹ ಕೌಟುಂಬಿಕ ಕಲಹ, ಅದರಿಂದ ಉಂಟಾಗುವ ಸಾವು, ನೋವು, ದ್ವೇಷವೂ ಸಹ ವ್ಯಕ್ತವಾಗುತ್ತವೆ.

ಇನ್ನು ವಲಸೆ ಕಾದಂಬರಿಯಲ್ಲಂತೂ ಲಂಬಾಣಿಗರ ಸಾಂಸ್ಕೃತಿಕ ಬದುಕು ವಿಶೇಷವಾಗಿ ಮೂಡಿಬಂದಿದೆ. ಎಂಥಹ ಬಡತನ, ಹಸಿವು, ಶೋಷಣೆಯಲ್ಲೂ ಹಬ್ಬ ಹರಿದಿನಗಳನ್ನು ಕಾಡಿನಲ್ಲಿದ್ದಾಗಲೂ, ಆಚರಿಸುವ ನಂಬಿಕೆ, ರೂಢಿಗಳು ಲಂಬಾಣಿಗರ ಸಾಂಸ್ಕೃತಿಕ ಬದುಕನ್ನು ಎತ್ತಿ ಹಿಡಿಯುತ್ತದೆ. ಬಂಡವಾಳ ಶಾಹಿಗಳ ದಬ್ಬಾಳಿಕೆ, ಕ್ರೌರ್ಯ ಬಡಜನರ ಬದುಕನ್ನು ನಾಶ ಮಾಡುತ್ತದೆ. ಮೋಸ, ವಂಚನೆ, ಕೊಲೆ, ಕ್ರೌರತೆಯನ್ನು ಸ್ವಾರ್ಥ ಬದುಕನ್ನು ಚಿತ್ರಿಸುತ್ತದೆ. ಹೀಗೆ

ವಲಸೆಯೊಂದಿಗೆ ಈ ಸಮುದಾಯದವರ ಬದುಕಿನ ನಾನಾ ತೊಳಲಾಟಗಳು ಸಮಸ್ಯೆಗಳು ಅನಿವಾರ್ಯತೆಗಳನ್ನು ಚಿತ್ರಿಸುತ್ತ ಹೋಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ವ್ಯಕ್ತಿ, ಕುಟುಂಬ, ಊರಿನ, ಸಮುದಾಯ ವಲಸೆಯ ಭಿನ್ನ ಆಯಮಾಗಳನ್ನು ಈ ಆಧ್ಯಾಯದಲ್ಲಿ ನೋಡಲಾಗಿದೆ ಸಮುದಾಯದಿಂದ ಆರಂಭವಾದ ವಲಸೆ ಇಂದು ವ್ಯಕಿಗಳ ವಲಸೆಗೆ ಬಂದು ನಿಂತಿರುವ ಬಗೆ ಮತ್ತು ಅನಿವಾರ್ಯತೆಯನ್ನು ಈ ಕಥನಗಳು ಹೇಳುತ್ತವೆ. ಈ ನಾಲ್ಕು ಬಗೆಯ ಆಯಾಮಗಳಲಲ್ಲಿಯೂ ಸಹ ಭಿನ್ನವಾದ ವಲಸೆಯ ಕಾರಣ, ಪ್ರಕಿಯೆ, ಪರಿಣಾಮಗಳನ್ನು ಇಲ್ಲಿ ಕಾಣುತ್ತೇವೆ. ಹೀಗೆ ವಲಸೆಯ ಭಿನ್ನ ಆಯಾಮಗಳ ಮೂಲಕ ವಲಸೆ ಸಂಬಂಧಿತ ಹಲವಾರು ಕಥೆಗಳನ್ನು, ಕಥನ ಕ್ರಮಗಳನ್ನು ವಿಶ್ಲೇಷಿಸುತ್ತಲೇ ವಲಸೆಯನ್ನು ನಿರ್ವಚಿಸಿಕೂಳ್ಳಲಾಗಿದೆ ಅದೇನೆಂದರೆ, ವಲಸೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬದುಕನ್ನು ಹರಸಿ ಹೊರಡುವ ಸ್ವ ಇಚ್ಛಾಪೂರಿತ ಅಥವಾ ಪ್ರಚೋದಿತ ಚಲನೆಯನ್ನು ನಿರ್ದೇಶಿಸುತ್ತದೆ ಹಾಗು ಶಾಶ್ವತವಾಗಿ ತಾತ್ಕಲಿಕವಾಗಿ ನೆಲೆಗೊಳ್ಳುವಲ್ಲಿನ ಪ್ರಕ್ರಿಯೆಯ ಚಲನಾತ್ಮಕ ಧ್ವನಿಯಾಗಿ ನಿರೂಪಿತವಾಗಿದೆ ಎಂದು ಹೇಳಬಹುದು. ಅಂದರೆ ವಲಸೆಯ ಮೂಲಕ ಕಳೆದು ಹೋದ ಬೇರುಗಳನ್ನು ಹುಡುಕುವ ಆ ಬೇರುಗಳೂಟ್ಟಿಗೆ ಮತ್ತೊಂಡೆಗೆ ಚಲಿಸುವ ನಂತರ ಬೇರೆಡೆಗೆ ಬೇರೂರಿ ನೆಲೆಯಾಗುವಲ್ಲಿ ಪರದಾಡುವ ಒಂದು ಸ್ಥಿತಿಯನ್ನು ಈ ಅಧ್ಯಯನ ನಿರೂಪಿಸುತ್ತದೆ

ವಲಸೆಯನ್ನಷ್ಟೆಯಲ್ಲದೆ ವಲಸೆಯ ಜೊತೆಗೆ ಚರ್ಚಿತಗೊಳ್ಳುವ ಇತರೆ ಆನುಷಂಗಿಕ ಅಂಶಗಳನ್ನು ಎರಡನೇ ಘಟಕದಲ್ಲಿ ಪ್ರಸ್ತಾಪಿಸಲಾಗುವುದು. ಅಂದರೆ ಕೃತಿಯೊಂದರಲ್ಲಿ ಲೇಖಕರು ಚರ್ಚಿಸುವ ಬಡತನ, ನಿರುದ್ಯೋಗ, ಹಸಿವು, ಬರಗಾಲ, ಜಮೀನ್ದಾರಿ ವ್ಯವಸ್ಥೆ ಲೈಂಗಿಕತೆಯಂತಹ ಹಲವು ಅಂಶಗಳನ್ನು ವಿವಿಧ ಲೇಖಕರು ಒಂದೇ ವಸ್ತುವನ್ನು ಹೇಗೆ ವಲಸೆಯೊಂದಿಗೆ ಪೂರಕ ಪ್ರೇರಕ ಅಂಶವಾಗಿ ಬಳಸಿಕೊಂಡಿದ್ದಾರೆ ಎಂಬುದನ್ನು ಇಲ್ಲಿ ಅವಲೋಕಿಸಲಾಗಿದೆ. ಇದರ ಜೊತೆಗೆ ಇಲ್ಲಿ ಬರುವ ಆನುಷಂಗಿಕ ಅಂಶಗಳು ಕೃತಿಯಲ್ಲಿ ವಲಸೆಗೆ ಪ್ರೇರಕವಾಗಿದೆಯೇ ಅಥವಾ ವಲಸೆಯ ನಂತರದ ಪರಿಣಾಮ ರೂಪದಲ್ಲಿ ಹೆಚ್ಚು ಚರ್ಚಿತಗೊಂಡಿದೆಯೋ ಎಂಬುದನ್ನು ಇಲ್ಲಿ ಗಮನಿಸಲಾಗುವುದು. ಒಟ್ಟಾರೆ ಈ ಘಟಕದಲ್ಲಿ ವಲಸೆಗಿರುವ ಒಂದು ವಿರಾಟ ಸ್ವರೂಪವನ್ನು ವಲಸೆಯನ್ನೇ ಕೇಂದ್ರವಾಗಿಸಿ ಅದರ ಜೊತೆಗೆ ಚರ್ಚಿತವಾಗುವ ಹಸಿವು, ಬಡತನ ಇತ್ಯಾದಿಗಳನ್ನು ಅದರ ಅಗತ್ಯ ಅಂಶವಾಗಿ ಲೇಖಕರೊಬ್ಬರು ಸಂರಚಿಸುವ ವಿಭಿನ್ನ ಮಾದರಿಗಳನ್ನು ಸಮೀಕ್ಷಿಸುತ್ತದೆ. ಮತ್ತು ವಲಸೆಗಿರುವ ಸಹ ಸಂಬಂಧವನ್ನು ವಿಸ್ತರಿಸಲು ಈ ಘಟಕದಲ್ಲಿ ಪ್ರಯತ್ನಿಸಲಾಗಿದೆ.

ಮೊದಲು ಪ್ರಾಕೃತಿಕ ವಿಕೋಪ ಕುರಿತು ಮಾತನಾಡುವುದಾದರೆ, ವಲಸೆ ಸಂಬಂಧಿಸುವ ಪ್ರಮುಖ ಎರಡು ಹಂತಗಳಲ್ಲಿ ಪ್ರಾಕೃತಿಕ ವಿಕೋಪ ಪರಿಣಾಮಕಾರಿಯಾದುದು. ಈ ಪ್ರಾಕೃತಿಕ ವಿಕೋಪದಿಂದಾಗಿ ವಲಸೆ ಸಂಭವಿಸುವುದನ್ನು ಪರಂಪರೆಯಿಂದ ಗ್ರಹಿಸಬಹುದಾಗಿದೆ. ಪ್ರಾಕೃತಿಕ ವಿಕೋಪಕ್ಕೂ ವಲಸೆಗೂ ಇನ್ನಿಲ್ಲದ ನಂಟು. ಒಂದೊಮ್ಮೆ ಜನಾಂಗೀಯ ವಲಸೆಗೂ, ನಾಗರೀಕತೆ, ಸಂಸ್ಕೃತಿ, ಆಧುನಿಕತೆಗಳ ಒಂದು ಪರಿಣಾಮಕಾರಿ ಇತಿಹಾಸವನ್ನು ಈ ಅಂಶ ಪ್ರಸ್ತುತಪಡಿಸುವುದಾದರೂ ಕಾಲಗರ್ಭದಲ್ಲಿ ಕಳೆದು ಹೋದ ನೆನಪು ಸಂಸ್ಕೃತಿ, ವಿಸ್ಮೃತಿ ಇವುಗಳ ನರಳಾಟ ಹಾಗೆಯೆ ಮುಂದುವರೆದಿದೆ. ವರ/ಶಾಪ ಸಮಸ್ಯೆಗಿಂತ ಕಥೆ ಮತ್ತು ಕಥನಕಾರ ನಿರೂಪಿಸುವ ಹಂತ ಪ್ರಸ್ತುತ ಅಧ್ಯಯನಕ್ಕೆ ಬಹುಮುಖ್ಯವಾದ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪದಿಂದ ಸಂಭವಿಸುವ ವಲಸೆಯ ವಿಭಿನ್ನ ಮಾದರಿಗಳನ್ನು ಕವಿ ಕೃತಿ ಕೇಂದ್ರಿತ ನೆಲೆಯಲ್ಲಿ ಗ್ರಹಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಅದರಲ್ಲಿ ಮೊದಲನೆಯದಾಗಿ ಬರಗಾಲ.

### ೧. ಬರಗಾಲ

ಬರಗಾಲಕ್ಕೆ ಸಂಬಂಧಿಸಿದ ಕ್ಷಾಮ, ದರಿದ್ರರು, ಅನ್ನ, ವಲಸೆ ಅಂತಹ ಕಥೆ ಕಾದಂಬರಿಗಳಲ್ಲಿ ಬರಗಾಲ, ಭೂಕಂಪ ಸಂಬಂಧಿತ ಚರ್ಚೆಗಳು ಕಾಣಸಿಗುತ್ತವೆ. ಮೊದಲಿಗೆ ಬೆನಕನಹಳ್ಳಿ ಜಿ.ನಾಯಕರವರ ವಲಸೆ ಕಾದಂಬರಿಯಲ್ಲಿ ವಲಸೆ ಎಂಬ ಶೀರ್ಷಿಕೆಯೇ ಸೂಚಿಸುವಂತೆ ವಲಸೆಯೇ ಇಲ್ಲಿ ಕೇಂದ್ರ ವಸ್ತುವಾಗಿದ್ದರೂ ವಲಸೆಗೆ ಪ್ರೇರಣೆಯಾಗಿ ಬರುವ ಬರಗಾಲದ ಸಾಧಕ ಬಾಧಕಗಳನ್ನು ಈ ಕಥೆ ಚಿತ್ರಿಸುತ್ತದೆ. ಮತ್ತು ಈ ಬರಗಾಲದ ಜೊತೆ ಜೊತೆಗೆ ಹಸಿವು, ಬಡತನ, ಲೈಂಗಿಕ ಶೋಷಣೆಯಂತಹ ಹಲವು ಅಂಶಗಳನ್ನು ಗ್ರಾಮೀಣ ಭಾಷೆಯ ದಾಟಿಯಲ್ಲಿ ಲೇಖಕರು ಅಭಿವ್ಯಕ್ತಿಸುತ್ತಾರೆ.

ಅದೇ ರೀತಿ ಬರಗೂರು ರಾಮಚಂದ್ರಪ್ಪರವರು ಕ್ಷಾಮ ಕಥೆಯಲ್ಲಿ ಊರಿನಲ್ಲಿ ಬಂದ ಬರಗಾಲದಿಂದ ದನಕರುಗಳು ಸತ್ತು ಹೊಲವೆಲ್ಲಾ ಒಣಗಿ, ಕೂಲಿ ಕೆಲಸ ಸಿಗದೇ ಜನ ಎಲ್ಲಾ ಕಂಗಾಲಾಗಿ ಪಟ್ಟಣಗಳಿಗೆ ವಲಸೆ ಹೋಗುತ್ತಾರೆ. ಅಂದರೆ, ಈ ಕಥೆಯಲ್ಲಿ ವಲಸೆಗೆ, ಬರಗಾಲ ಪ್ರೇರಣೆಯಾಗಿ ಮೂಡಿ ಬಂದರೇ ಇದೇ ವಸ್ತುವನ್ನು ಒಳಗೊಂಡ ದರಿದ್ರರು ಕಾದಂಬರಿಯಲ್ಲಿ ಕೆ.ವಿ.ರಾವ್ ಅವರು ವಲಸೆಗೆ ಪ್ರೇರಣೆಯಾಗಿ ಬಂದ ಬರಗಾಲದ ಜೊತೆಗೆ ಬರಗಾಲ ಕಾಮಗಾರಿ, ಅಧಿಕಾರಿಗಳ ಭ್ರಷ್ಟತೆ, ಹಸಿವು ಶೋಷಣೆಯಂತಹ ಹಲವು ಅಂಶಗಳು ವಲಸೆಗೆ ಪೂರಕವಾಗಿ ಬಳಸಿಕೊಂಡು ಬರಗಾಲದ ಪರಿಣಾಮದಿಂದ ಉಂಟಾದ ಹಲವು ಸಮಸ್ಯೆಗಳನ್ನು ಏಕಕಾಲಕ್ಕೆ ಚಿತ್ರಿಸುತ್ತಾರೆ.

ಹಾಗೆಯೆ ರಂ.ಶ್ರೀ. ಮುಗಳಿಯವರು 'ಅನ್ನ' ಕಾದಂಬರಿಯಲ್ಲಿ ಬಂಗಾಲ ಪ್ರಾಂತ್ಯದ ೨೪ ಜಿಲ್ಲೆಗಳಲ್ಲಿ ಸಂಭವಿಸಿದ ಬಿರುಗಾಳಿಯ ಹಾವಳಿಯಿಂದ ಅನೇಕ ರೋಗಗಳಿಗೆ ತುತ್ತಾಗಿ ನಿಲ್ಲಲು ನೆಲೆ ಇಲ್ಲದೇ ಎಲ್ಲವನ್ನು ಕಳೆದುಕೊಂಡು ನಿರಾಶ್ರಿತರಾಗಿ ವಲಸೆ ಬಂದವರ ವೇದನೆಯನ್ನು ಇಲ್ಲಿ ಲೇಖಕರು ಚಿತ್ರಿಸುತ್ತಾರೆ. ಅದೇ ರೀತಿ ಇದೇ ಕಥೆಯಲ್ಲಿ ಮತ್ತೊಂದು ಕಡೆ, ಮಳೆ ಬಾರದೆ ಬರಗಾಲ ಸಂಭವಿಸಿ ಆಸ್ತಿ, ಮನೆ, ಎಲ್ಲವೂ ಇದ್ದು ದುಡಿಯಲು ಕೆಲಸ ಸಿಗದೆ ಪಟ್ಟಣಗಳಿಗೆ ವಲಸೆ ಬಂದ ಸ್ಥಿತಿಯನ್ನು ವಿವರಿಸುತ್ತಲ್ಲೇ ಪ್ರಾಕೃತಿಕ ವೈಪರಿತ್ಯ ವಲಸೆಗೆ ಹೇಗೆ ಪ್ರೇರಣೆಯಾಯಿತು ಎಂಬುದನ್ನು ಸ್ಪಷ್ಟವಾಗಿ ಚಿತ್ರಿಸುತ್ತಾರೆ. ಇಲ್ಲಿಯು ಸಹ ಬರಗಾಲದಿಂದ ವಲಸೆ ಬಂದ ಲಕ್ಷಾಂತರ ಜನರು ಬೀದಿಪಾಲದವರ ಹಸಿವು, ಲೈಂಗಿಕ ಶೋಷಣೆ, ಬಡತನವನ್ನು ಏಕಕಾಲಕ್ಕೆ ಹಳ್ಳಿಗರ ಆಡು ಭಾಷೆಯ ಮೂಲಕ ಸಂವೇದನೆಯನ್ನು ಅಭಿವ್ಯಕ್ತಿಸುತ್ತಾರೆ.

ಅದೇ ರೀತಿ ಗೀತಾ ನಾಗಭೂಷಣರವರು ಭೂಮಿ ಮತ್ತು ಬೀಜ ಕಥೆಯಲ್ಲಿ ಬರಗಾಲದ ಚಿತ್ರಣವನ್ನು ಪರಿಣಾಮದ ಹಂತದಲ್ಲಿ ಚಿತ್ರಿಸುತ್ತಾರೆ. ಹೊಟ್ಟೆಪಾಡಿಗಾಗಿ ಬದುಕನ್ನು ಅರಸಿ ವಲಸೆ ಬಂದ ಶಾಣಪ್ಪ, ನೀಲವ್ವ ದಂಪತಿಗಳಿಗೆ ಸ್ವಲ್ಪ ದಿನಗಳ ಕಾಲ ಬದುಕಲು ನೆಲೆ ಸಿಕ್ಕಿತ್ತಾದರೂ ಕಾಲಾನಂತರ ಸಂಭವಿಸಿದ ಬರಗಾಲದಿಂದ ಹೆಂಡತಿಯ ಮರಣದ ನಂತರ ಶಾಣಪ್ಪ ಮತ್ತು ಮಕ್ಕಳು ಬದುಕು ನಡೆಸಲು ಕಷ್ಟಕರವೆನಿಸಿ ಮತ್ತೇ ಪುಣೆಗೆ ವಲಸೆ ಹೋಗುವ ಸಂದರ್ಭವನ್ನು ಲೇಖಕರು ಸೂಚಿಸುತ್ತಾರೆ. ಹಾಗೆಯೆ ಇಲ್ಲಿ ಬರಗಾಲದಿಂದ ವಲಸೆ ಹೋಗುವುದು ಬಡವರು ಮಾತ್ರವಲ್ಲ. ಇಲ್ಲಿ ಬರುವ ಗೌಡರು, ಕುಲಕರ್ಣಿಗಳು ಸಹ ಹೈದರಾಬಾದ್ ಕಡೆ ವಲಸೆ ಹೋಗುತ್ತಾರೆ. ಹೀಗೆ ಭಿನ್ನವರ್ಗದ ಜನರು ಬರಗಾಲದ ಪರಿಣಾಮದಿಂದ ವಲಸೆ ಸಂದರ್ಭವನ್ನು ಉತ್ತರ ಕನ್ನಡ ಭಾಷೆಯ ಶೈಲಿಯಲ್ಲಿ ನಿರೂಪಿಸುತ್ತಾರೆ.

ಇದಿಷ್ಟು ಬರಗಾಲ ಕುರಿತ ಕಥೆ ಕಾದಂಬರಿಗಳಾದರೆ ಇನ್ನು ಪ್ರಾಕೃತಿಕ ವಿಕೋಪಗಳಲ್ಲಿ ಒಂದಾದ ಭೂಕಂಪ, ಮತ್ತೊಂದು ತರಹದಲ್ಲಿ ವಲಸೆಗೆ ಕಾರಣವಾಗುತ್ತದೆ. ಇಲ್ಲಿ ಗೀತಾನಾಗಭೂಷಣ ರವರು ನಿತ್ಯ ನರಳುವ ಮಂದಿ ಕಥೆಯಲ್ಲಿ ಲೇಖಕಿ ಪ್ರಾಕೃತಿಕ ವೈಪರಿತ್ಯದ ಪರಿಣಾಮವಾಗಿ ಸಂಭವಿಸಿದ ಭೂಕಂಪದಿಂದ ಉಂಟಾಗುವ ಊರಿನ ಜನರ ಸ್ಥಿತಿಗತಿಯ ಕರಾಳ ಸ್ವರೂಪವನ್ನು ತೆರೆದಿಡುತ್ತಾರೆ ಮತ್ತು ಈ ಭೂಕಂಪ ವಲಸೆಗೆ ಹೇಗೆ ಪ್ರೇರಣೆಯಾಯಿತು ಎಂಬುದನ್ನು ಉತ್ತರ ಕನ್ನಡ ಭಾಷೆ ಶೈಲಿಯ ಮೂಲಕ ಮನಮುಟ್ಟುವಂತೆ ವ್ಯಕ್ತಪಡಿಸುತ್ತಾರೆ.

ಹೀಗೆ ಬರಗಾಲಕ್ಕೆ ಸಂಬಂಧಿಸಿದ ಅಥವಾ ಪ್ರಾಕೃತಿಕ ವೈಪರಿತ್ಯಗಳಿಗೆ ಕಾರಣವಾದ ವಲಸೆ ಯನ್ನು ಇಲ್ಲಿ ಭಿನ್ನ ಲೇಖಕರು ಒಂದೇ ವಸ್ತುವಿನೊಂದಿಗೆ ಹೇಗೆ ವಲಸೆಯೊಂದಿಗೆ ಪೂರಕ ಅಂಶವಾಗಿ ಬಳಸಿಕೊಂಡಿದ್ದಾರೆ ಎಂಬುದನ್ನು ಈ ಕಥೆಗಳ ಮೂಲಕ ಸ್ಪಷ್ಟವಾಗಿ ನೋಡಬಹುದಾಗಿದೆ.

ಹಾಗೆಯೆ ಇಲ್ಲಿ ಬರಗಾಲ ಮತ್ತು ಭೂಕಂಪವನ್ನು ವಲಸೆಗೆ ಪ್ರೇರಕ ಪರಿಣಾಮಕ ಅಂಶವಾಗಿ ಬಳಸಿಕೊಂಡ ಲೇಖಕರ ಅಭಿವ್ಯಕ್ತಿ ಭಿನ್ನ ರೂಪದಲ್ಲಿ ಮೂಡಿಬಂದಿದೆ. ಹೆಚ್ಚು ಇಲ್ಲಿ ವಲಸೆಗೆ ಬರಗಾಲವನ್ನು, ವಲಸೆಗೆ ಪ್ರೇರಣ ಅಂಶವಾಗಿ ಬಳಸಿಕೊಂಡರೆ, ಗೀತಾ ನಾಗಭೂಷಣರವರು ಮಾತ್ರ ಭೂಮಿ ಮತ್ತು ಬೀಜ ಕಥೆಯಲ್ಲಿ ಬರಗಾಲವನ್ನು ಪರಿಣಾಮ ಹಂತದಲ್ಲಿ ಚರ್ಚಿಸುತ್ತಾರೆ. ಹಾಗೆಯೆ ಬರಗಾಲ ಭೂಕಂಪದ ಜೊತೆಗೆ ಅಂಟಿಕೊಂಡು ಬಂದ ಲೈಂಗಿಕ ಶೋಷಣೆ, ಹಸಿವು, ಬಡತನದಂತಹ ಹಲವು ಅಂಶಗಳು ಕಥೆಗೆ ಪೂರಕ ಅಂಶವಾಗಿ ಮೂಡಿ ಬಂದಿರುವುದನ್ನು ಇಲ್ಲಿ ಕಾಣಬಹುದಾಗಿದೆ.

ಒಟ್ಟಾರೆ ಬರಗಾಲದಂತಹ ವಸ್ತು ವಿಷಯ ಒಂದು, ವಲಸೆಯ ಸಂಬಂಧದೊಂದಿಗೆ ಗೀತಾನಾಗಭೂಷಣರವರ ಕಥನ ಕ್ರಮದಲ್ಲಿ ಸಮಾಜದ ಆಗು-ಹೋಗುಗಳನ್ನು ಬರಗಾಲದ ಸಂದರ್ಭದೊಂದಿಗೆ ವಿವರಿಸುವ ಕ್ರಮವಾಗಿ ಕಂಡುಬಂದರೆ ರಂ.ಶ್ರೀ.ಮುಗಳಿಯವರು ಪ್ರಾದೇಶಿಕ ಸಂದರ್ಭವನ್ನು ರಾಷ್ಟ್ರೀಯ ವಿಷಯವಾಗಿ ಮತ್ತೇ ಸ್ವಾತಂತ್ರ್ಯ ಸಂದರ್ಭದ ಹಿನ್ನೆಲೆಯಲ್ಲಿ ಅದನ್ನು ಅನಾವರಣಗೊಳಿಸುವ ಪರಿ ವಿಭಿನ್ನವಾಗಿದೆ ಮತ್ತು ಬೆನಕನಹಳ್ಳಿ ಜಿ.ನಾಯಕರವರು ಲಂಬಾಣಿ ಸಮುದಾಯದವರು ಶ್ರಮದಾಯಿಕ ಬದುಕು ಮತ್ತು ಬರಗಾಲವನ್ನು ಹೆದರಿಸುವ ಮತ್ತು ಬಂಡವಾಳಶಾಹಿಗಳ ಶೋಷಿಸುವ ಹಲವು ಸಮಾಜದ ಮುಖಗಳನ್ನು ಪ್ರಾಕೃತಿಕ ವೈಪರಿತ್ಯದ ಹಿನ್ನೆಲೆಯಲ್ಲಿ ಪರಿಚಯಿಸುತ್ತಾರೆ.

**೨. ಮಾನವ ನಿರ್ಮಿತ ಪ್ರಾಕೃತಿಕ ವಿಕೋಪ**

ಇದು ಪ್ರಾಕೃತಿಕ ವಿಕೋಪಗಳಲ್ಲಿ ಎರಡನೇಯ ವಿಧ. ಇತ್ತೀಚಿನ ದಿನಗಳಲ್ಲಿ ಹೆಚ್ಚು ಉದ್ಭವಿಸಿದ ಸಮಸ್ಯೆಯಾಗಿ ನಮ್ಮ ಕಣ್ಣ ಮುಂದೆ ಇದೆ. ಇಲ್ಲಿ ದೇಶದ ಅಭಿವೃದ್ಧಿಗೆಂದು ಸರ್ಕಾರ ರೂಪಿಸುವ ಹಲವು ಯೋಜನೆಗಳೇ ಪ್ರಾಕೃತಿಕ ವಿಕೋಪಗಳಿಗೆ ಕಾರಣವಾಗುತ್ತದೆ. ಮುಖ್ಯವಾಗಿ ಇಲ್ಲಿ ಬರುವ ಪ್ರಮುಖ ಅಂಶಗಳೆಂದರೆ ಅಣೆಕಟ್ಟು ನಿರ್ಮಾಣ, ರಸ್ತೆ ಅಗಲೀಕರಣ, ವಿಮಾನ ನಿಲ್ದಾಣ ನಿರ್ಮಾಣ, ಸರಕಾರಿ ಬರಗಾಲ ಕಾಮಗಾರಿಗಳಂತಹ ಅಂಶಗಳು ಇಲ್ಲಿ ಪ್ರಮುಖವಾಗಿ ಮೂಡಿಬರುತ್ತವೆ. ಇವೆಲ್ಲವಕ್ಕೂ ಮೂಲ ಕಾರಣ ಮಾನವ. ಈ ಎಲ್ಲಾ ಅಂಶಗಳೂ ಒಂದಲ್ಲಾ ಒಂದು ರೀತಿಯಲ್ಲಿ ಪರಿಸರಕ್ಕೆ ಹಾನಿಯುಂಟು ಮಾಡುವುದರ ಜೊತೆಗೆ ಅಲ್ಲಿಯ ಸುತ್ತಮುತ್ತಲಿನ ಜನರನ್ನು ಗುಳೆ ಎಬ್ಬಿಸುವಂತೆ ಮಾಡುತ್ತದೆ. ಹೀಗಾಗಿ ಮಾನವರ ನಿರ್ಮಿತ ಪ್ರಾಕೃತಿಕ ವಿಕೋಪಕ್ಕೂ, ವಲಸೆಗೂ ಒಂದು ಅವಿನಾಭಾವ ಸಂಬಂಧವಿದೆ.

ಹೀಗೆ ಇಂಥ ಅಂಶಗಳನ್ನು ಕೃತಿಕಾರರು ತಮ್ಮ ಕೃತಿಗಳಲ್ಲಿ ವಸ್ತುವಾಗಿ ಬಳಸಿಕೊಂಡು ಇದರಿಂದ ಜನರಿಗೆ ಉಂಟಾಗುವ ಸಮಸ್ಯೆ ಮತ್ತು ವಲಸೆಗೆ ಹೇಗೆ ಪ್ರೇರಣೆಯಾಗುತ್ತದೆ ಎಂಬುದನ್ನು

ಸಂವೇದನಾತ್ಮಕವಾಗಿ ಕಟ್ಟಿಕೊಡುತ್ತಾರೆ. ಮೊದಲಿಗೆ ನಾ.ಡಿಸೋಜರವರ ಅಣೆಕಟ್ಟು ನಿರ್ಮಾಣ ಸಂಬಂಧಿತವಾಗಿ ಬರೆದ ನಾಲ್ಕು ಕಾದಂಬರಿಗಳಾದ ಮುಳುಗಡೆ, ದ್ವೀಪ, ಒಡ್ಡು, ಗುಣವಂತೆ ಎಂಬ ನಾಲ್ಕು ಕಾದಂಬರಿಗಳ ವಸ್ತು ಮತ್ತು ಒಬ್ಬನೇ ಲೇಖಕನಾದರೂ ಅವುಗಳನ್ನು ನಿರೂಪಿಸುವ ಬಗ್ಗೆ ಮತ್ತು ಕಥನ ಶೈಲಿ ಭಿನ್ನವಾಗಿ ಮೂಡಿಬಂದಿದೆ. ಉದಾಹರಣೆಗೆ ಮುಳುಗಡೆ ಕಾದಂಬರಿಯಲ್ಲಿ ನಾ.ಡಿಸೋಜರವರು ಅಣೆಕಟ್ಟು ನಿರ್ಮಾಣದಿಂದ ಮುಳುಗಡೆ ಹೊಂದಲಿರುವ ಹಳ್ಳಿಯ ಜನರನ್ನು ಮತ್ತೊಂದು ಪ್ರದೇಶಕ್ಕೆ ಕಳುಹಿಸುವಂತಹ ಸಂದರ್ಭದಲ್ಲಿ ಅಲ್ಲಿಯ ಕುಟುಂಬಗಳಿಗೆ ಉಂಟಾಗುವ ವೇದನೆಯನ್ನು ಚಿತ್ರಿಸಿದ್ದಾರೆ. ಪೂರಕ ಅಂಶವಾಗಿ ಬಂದ ಬರಗಾಲ ಕಾಮಗಾರಿಯ ವಿಫಲತೆಯು ಸಹ ಒಂದು ರೀತಿಯಲ್ಲಿ ವಲಸೆಗೆ ಪ್ರೇರಣೆಯಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಮಾನವ ನಿರ್ಮಿತ ವಿಕೋಪಗಳಲ್ಲಿ ಬರುವ ಅಣೆಕಟ್ಟು ನಿರ್ಮಾಣ, ಬರಗಾಲ ಕಾಮಗಾರಿಯಂಥ ಅಂಶಗಳಲ್ಲಿ ಅಧಿಕಾರಿಗಳ ಲಂಚದ ಹಾವಳಿ, ಮೋಸ, ವಂಚನೆಯನ್ನು ಲೇಖಕರು ವಲಸೆಗೆ ಪೂರಕ ಅಂಶವಾಗಿ ಬಳಸಿಕೊಂಡು ಚಿತ್ರಿಸಿದ್ದಾರೆ. ಮತ್ತು ಈ ಎಲ್ಲಾ ಅಂಶಗಳು ವಲಸೆಗೆ ಪ್ರೇರಣೆಯಾಗಿ ಕಂಡುಬರುತ್ತದೆ. ಒಟ್ಟಾರೆ ಇಂದಿನ ರಾಜಕೀಯ ಭ್ರಷ್ಟ ಆಡಳಿತದ ಸ್ವರೂಪದ ಹಿನ್ನೆಲೆಯಲ್ಲಿ ವಲಸೆಯ ಸಾಧಕ ಬಾಧಕಗಳನ್ನು ನಿರೂಪಿಸುತ್ತಾರೆ.

**೩. ಹಸಿವು**

ಸಾಮಾನ್ಯವಾಗಿ ಪ್ರತಿಯೊಬ್ಬರು ತಮ್ಮ ಹೊಟ್ಟೆಪಾಡಿಗಾಗಿ ವಲಸೆ ಹೋಗುವುದು ಸಾಮಾನ್ಯ. ಆದರೆ ವಲಸೆ ಹೋದ ನಂತರದ ಸಂದರ್ಭದಲ್ಲಿ ಹಸಿವನ್ನು ನೀಗಿಸಿಕೊಳ್ಳಲು ಸಾಧ್ಯವಿದೆಯೆ ಎಂಬ ಪ್ರಶ್ನೆ ಕಾಡುತ್ತದೆ. ಏಕೆಂದರೆ ತಾವಿದ್ದ ಮೂಲ ಪ್ರದೇಶದಲ್ಲಿ ಯಾವುದೋ ಕಾರಣಕ್ಕಾಗಿ ಬದುಕಲು ಆಗದೇ ಹಸಿವಿನಿಂದ ಸಾಯುವಂತಹ ಸಂದರ್ಭದಲ್ಲಿ ತೆಗೆದುಕೊಳ್ಳುವ ವಲಸೆಯ ನಿರ್ಧಾರ ವಲಸೆಯ ನಂತರದಲ್ಲಿ ಹಸಿವಿನ ಸಮಸ್ಯೆ ತೀರುತ್ತದೆ ಎಂಬ ಯಾವ ಖಚಿತತೆ ಇರುವುದಿಲ್ಲ. ಉದಾಹರಣೆಗೆ ಇಲ್ಲಿ ಬರುವ ಎಷ್ಟೋ ಕಥೆಗಳು ಈ ಮಾತನ್ನು ಸ್ಪಷ್ಟಪಡಿಸುತ್ತವೆ. ಆದರೂ ಬದುಕು ಕಷ್ಟಕರವೆನಿಸಿದಾಗ ಬದುಕಿನ ನಿರ್ವಹಣೆಗೆ ಜೀವ ಉಳಿಸಿಕೊಳ್ಳಲು ವ್ಯಕ್ತಿ ಕುಟುಂಬ ಸಮುದಾಯದಂತಹ ಹಲವು ಜನ ವಲಸೆ ಹೋಗುತ್ತಾರೆ. ಹಾಗಾಗಿ ವಲಸೆ ಪ್ರೇರಣೆ ಹಂತದಲ್ಲಿ ಹಸಿವು ಪ್ರಮುಖ ಪಾತ್ರ ವಹಿಸುತ್ತದೆ. ಮತ್ತೊಂದು ಕಡೆಗೆ ವಲಸೆ ಹೋಗುತ್ತಿದ್ದ ಸಂದರ್ಭ ಮತ್ತು ಹಸಿವು ವಲಸೆಗೆ ಹೇಗೆ ಪ್ರೇರಣೆ ಪರಿಣಾಮವಾಗಿ ಲೇಖಕರೂ ಬಳಸಿಕೊಂಡಿದ್ದಾರೆ ಎಂಬ ಅಂಶವನ್ನು ಇಲ್ಲಿ ಬರುವ ಕಥೆಗಳ ಮೂಲಕ ಲೇಖಕರು ಹಸಿವಿಗೂ ವಲಸೆಗೂ ಇರುವ ಅಂತಸಂಬಂಧವನ್ನು ಸ್ಪಷ್ಟಪಡಿಸುತ್ತಾರೆ.

ಉದಾಹರಣೆಗೆ ವಲಸೆಗೆ ಪ್ರೇರಣೆ ಪರಿಣಾಮ ಹಂತದಲ್ಲಿ ಚರ್ಚಿತಗೊಂಡ ಕಥೆ, ಕಾದಂಬರಿಗಳೆಂದರೆ ವಲಸೆ, ಅನ್ನ, ಆಳುಮಗ, ಕ್ಷಾಮ, ದರಿದ್ರರು, ಬೆಸಗರಳ್ಳಿ ರಾಮಣ್ಣನವರು, ಆಳುಮಗ ಕಥೆಯಲ್ಲಿ ರಾಮಣ್ಣನವರು ಬರಗಾಲದಿಂದ ಉಂಟಾದ ಹಸಿವಿನ ಕ್ರೂರತೆಯನ್ನು ಚಿತ್ರಿಸುತ್ತಾರೆ. ಮತ್ತು ಈ ಹಸಿವನ್ನು ತಾಳಲಾರದೆ ತಮ್ಮ ಮಕ್ಕಳನ್ನು ಮಾರುವ ಅಥವಾ ಕೊಲ್ಲುವ ಹಂತಕ್ಕೆ ತಳ್ಳುವ ಸಂದರ್ಭ ಎದುರಾದಾಗ ಕೆಲವು ಕುಟುಂಬಗಳು ವಲಸೆ ಹೋದವು ಎಂಬ ಸಂದರ್ಭದೊಂದಿಗೆ ವಲಸೆಗೆ ಹಸಿವು ಹೇಗೆ ಪ್ರೇರಣೆಯಾಯಿತು ಎಂಬುದನ್ನು ಚಿತ್ರಿಸಿದ್ದಾರೆ. ವಲಸೆ ಕಾದಂಬರಿಯುಲ್ಲಿ ಜಿ.ನಾಯಕರವರು ತಾಯಂದಿರ ಎದೆಯಲ್ಲಿ ಹಾಲಿಲ್ಲದೇ ಚಿಕ್ಕ ಮಕ್ಕಳು ಸಹ ಹಸಿವಿನಿಂದ ಚೀರುವಂತಹ ಸಂದರ್ಭವನ್ನು ವಲಸೆಯ ಪ್ರಕ್ರಿಯೆಯಲ್ಲಿ ಅಭಿವ್ಯಕ್ತಿಸುತ್ತಾರೆ.

ಅದೇ ರೀತಿ ಕೆ.ವಿ.ರಾವ್ ಅವರು ದರಿದ್ರರು ಕಾದಂಬರಿಯಲ್ಲಿ ಬರಗಾಲ ಪರಿಣಾಮದಿಂದ ವಲಸೆ ಬಂದ ಹಳ್ಳಿಯ ಲಕ್ಷಾಂತರ ಜನರ ಪಟ್ಟಣಗಳಲ್ಲಿ ಹಸಿವಿನಿಂದ ಪಡಸಾಲೆಯಲ್ಲಿ ಸಾಯುವ ಸಂದರ್ಭ ಹಸಿವಿನ ಕರಾಳತೆಯನ್ನು ಲೇಖಕರು ಕಣ್ಣಿಗೆ ಕಟ್ಟುವ ರೀತಿ ಅಭಿವ್ಯಕ್ತಿಸಿದ್ದಾರೆ. ರಂ.ಶ್ರೀ.ಮುಗಳಿಯವರು ಅನ್ನ ಕಾದಂಬರಿಯಲ್ಲಿ ಶೀರ್ಷಿಕೆಯೂ ಸೂಚಿಸುವಂತೆ ತುತ್ತು ಅನ್ನಕ್ಕಾಗಿ ಬಡಿದಾಡುವ ನರಕಯಾತನೆಯನ್ನು ವಲಸೆಯ ಪರಿಣಾಮ ಹಂತದಲ್ಲಿ ಚಿತ್ರಿಸುತ್ತಾರೆ. ಆದರೆ ಕ್ಷಾಮ ಕತೆಯಲ್ಲಿ ಬರಗೂರು ರವರು ಬರಗಾಲ ಬೇಗೆಯನ್ನು ತಾಳಲಾರದೆ ಮಾಡಲು ಕೂಲಿ ಇಲ್ಲದೇ ಹೊಟ್ಟೆಗೆ ಊಟವಿಲ್ಲದೆ, ಹಸಿವನ್ನು ತಾಳಲಾರದೆ ಪಟ್ಟಣಗಳಿಗೆ ವಲಸೆ ಬರುವ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಇದರ ಜೊತೆಗೆ ಚೆನ್ನಿಯೂ ತನ್ನ ಹಸಿವನ್ನು ತಾಳಲಾರದೆ ಮೂರು ದಿನಗಳ ಉಪವಾಸದಲ್ಲಿ ಬಳಲಿ ಕೂಲಿಯ ಆಸೆ ತೋರಿದ ಜಮೀನ್ದಾರನ ಲೈಂಗಿಕ ಶೋಷಣೆಗೆ ಬಲಿಯಾಗಿ ಹೋರಾಡುವ ಸಂದರ್ಭ ಹಸಿವಿನ ಪ್ರಾಮುಖ್ಯತೆಯನ್ನು ತೆರೆದಿಡುತ್ತದೆ.

ಹೇಗೆ ಈ ಎಲ್ಲಾ ಕಥೆ ಕಾದಂಬರಿಗಳಿಗೂ ಹಸಿವು ವಲಸೆಗೆ ಹೇಗೆ ಪ್ರೇರಣೆ, ಪರಿಣಾಮದ ಹಂತದಲ್ಲಿ ಅಭಿವ್ಯಕ್ತಗೊಂಡಿದೆ ಎಂಬುದನ್ನು ಇಲ್ಲಿ ನೋಡಬಹುದಾಗಿದೆ. ಹಾಗೆಯೆ ಜಿ.ನಾಯಕರವರು ವಲಸೆ ಕಾದಂಬರಿಯ ಮೂಲಕ ಲಂಬಾಣಿಗರ ಬಡತನದ ಬದುಕಿನಲ್ಲಿನ ಹಸಿವಿನ ಕರಾಳತೆಯನ್ನು ಚಿತ್ರಿಸಿದರೆ ರಾಮಣ್ಣನವರು ಆಳು ಮಗ ಕಥೆಯಲ್ಲಿ ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿನ ಬ್ರಿಟಿಷ್ ಆಡಳಿತ ಸಂದರ್ಭದೊಂದಿಗೆ ಬರಗಾಲ ಮತ್ತು ಹಸಿವಿನ ಚಿತ್ರಣವನ್ನು ಏಕಕಾಲಕ್ಕೆ ಚಿತ್ರಿಸುತ್ತಾರೆ. ಅದೇ ರೀತಿ ಕೆ.ವಿ.ರಾವ್ ಅವರು ದರಿದ್ರರು ಕಾದಂಬರಿಯಲ್ಲಿ ಸರಕಾರಿ ಅಧಿಕಾರಿಗಳ ಬದುಕಿನ ಹಿನ್ನೆಲೆಯಲ್ಲಿ ಬಡಜನರ ಬದುಕಿನಲ್ಲಿ ಹಸಿವು ಹೇಗೆ ಪಾತ್ರವಹಿಸುತ್ತದೆ ಎಂಬುದನ್ನು ನೋಡಬಹುದಾಗಿದೆ. ರಂ.ಶ್ರೀ.ಮುಗಳಿಯವರ ಅನ್ನ ಕಾದಂಬರಿಯಲ್ಲಿ ಪ್ರಾಕೃತಿಕ ವಿಕೋಪಗಳಿಂದ ಉಂಟಾದ ಹಸಿವಿನ ಪರಿಣಾಮ ಮತ್ತು ಸ್ವಾತಂತ್ರ್ಯ ಚಳುವಳಿ ಸಂದರ್ಭಗಳೊಂದಿಗೆ ಲೇಖಕರು ಹಸಿವನ್ನು ಅಭಿವ್ಯಕ್ತಿಸುತ್ತಾರೆ.

## ೪. ಲೈಂಗಿಕ ಶೋಷಣೆ

ಲೈಂಗಿಕ ಶೋಷಣೆ ಎನ್ನುವಂತಹ ಒಂದು ಅಂಶ ಒಂದು ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ ವಲಸೆಗೆ ಹೇಗೆ ಪ್ರೇರಕವಾಗಿ ಮೂಡಿಬಂದಿದೆ ಎಂಬುದನ್ನು ಇಲ್ಲಿ ಪ್ರಮುಖವಾಗಿ ನೋಡಲಾಗುವುದು. ಇಲ್ಲಿ ಪ್ರಮುಖವಾಗಿ ಮೇಲ್ವರ್ಗದವರು ಕೆಳವರ್ಗದವರ ಮೇಲೆ ಲೈಂಗಿಕ ಶೋಷಣೆ ನಡೆಸಿದರೆ ಜಮೀನ್ದಾರರು ಕೂಲಿ ಆಳುಗಳ ಮೇಲೆ ಲೈಂಗಿಕ ಶೋಷಣೆ ನಡೆಸುತ್ತಾರೆ. ಹೀಗೆ ಹಲವು ರೀತಿಯ ಲೈಂಗಿಕ ಶೋಷಣೆಗಳಿಂದ ತಪ್ಪಿಸಿಕೊಳ್ಳಲು ವಲಸೆ ಪ್ರೇರಣಾ ಹಂತದಲ್ಲಿ ಬಂದರೆ ಇನ್ನು ಕೆಲವು ಕಡೆ ಯಾವುದೋ ಕಾರಣಕ್ಕಾಗಿ ಬಂದಾಗ, ಪರಿಣಾಮ ಹಂತದಲ್ಲಿ ಶೋಷಿಸುವ ಸ್ಥಿತಿಗತಿಗಳು ಕಥೆಯಲ್ಲಿ ಕಾಣಸಿಗುತ್ತವೆ. ಇಂತಹ ವಸ್ತುವನ್ನು ಒಳಗೊಂಡ ಕಥೆ, ಕಾದಂಬರಿಗಳೆಂದರೆ ಕೊಳಗ, ಕ್ಷಾಮ, ದರಿದ್ರರು, ವಲಸೆ, ಅನ್ನದಂತಹ ಹಲವು ಕಾದಂಬರಿಗಳಲ್ಲಿ ಲೈಂಗಿಕ ಶೋಷಣೆ ವಲಸೆಗೆ ಪೂರಕ ಅಂಶವಾಗಿ ಮೂಡಿಬಂದಿದೆ. ಮೊದಲನೆಯದಾಗಿ ಮತ್ತು ಪ್ರಮುಖವಾಗಿ ಲೈಂಗಿಕ ಶೋಷಣೆ ವಲಸೆಗೆ ಪ್ರೇರಣೆಯಾಗಿ ಕಂಡುಬರುವ ನಾ.ಡಿಸೋಜರವರ 'ಕೊಳಗ' ಕಾದಂಬರಿಯಲ್ಲಿ ದ್ಯಾವನ ಕುಟುಂಬದಲ್ಲಿ ದ್ಯಾವನ ಹೆಂಡತಿ ಗೌಡನ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ಇದರಿಂದ ದ್ಯಾವನ ಕುಟುಂಬ ಗೌಡನಿಂದ ತಪ್ಪಿಸಿಕೊಂಡು ರಾತ್ರೋರಾತ್ರಿ ತಡಗಳಲೆಯ ಹಳ್ಳಿಗೆ ವಲಸೆ ಬರುವ ಸಂದರ್ಭ ವಲಸೆ ಮತ್ತು ಲೈಂಗಿಕ ಶೋಷಣೆಗಿರುವ ಸಹ ಸಂಬಂಧವನ್ನು ಸೂಚಿಸುತ್ತದೆ. ಇದರ ಜೊತೆಗೆ ಜಮೀನ್ದಾರಿ ವ್ಯವಸ್ಥೆಯ ಸ್ವರೂಪವನ್ನು ಲೇಖಕರೂ ವಲಸೆಯೊಂದಿಗೆ ಚಿತ್ರಿಸುತ್ತಾರೆ.

ಅದೇ ರೀತಿ 'ದರಿದ್ರರು' ಕಾದಂಬರಿಯಲ್ಲಿ ಬರಗಾಲದಿಂದ ಬೇಸತ್ತು ಹಸಿವಿನಿಂದ ಪಟ್ಟಣಗಳಿಗೆ ದುಡಿಯಲು ಬಂದ ಅನೇಕ ಕುಟುಂಬಗಳು ಪಟ್ಟಣಗಳಲ್ಲಿ ನಿಲ್ಲಲ್ಲು ನೆಲ ಸಿಗದೆ ಮರದ ಕೆಳಗೆ, ಫುಟ್‌ಪಾತ್‌ಗಳಲ್ಲಿ, ಕೊಂಪೆಗಳಲ್ಲಿ ವಾಸಿಸುವಂತಹ ಪ್ರಸಂಗ ಬಂದಾಗ ದಾರಿಯ ಪುಂಡರು, ಶ್ರೀಮಂತರು, ಪೊಲೀಸರು ಬಡ ಹೆಣ್ಣುಮಕ್ಕಳ ಮೇಲೆ ಲೈಂಗಿಕ ಹಲ್ಲೆ ನಡೆಸುವ ಕ್ರೂರ ಕೃತ್ಯಗಳನ್ನು ವಲಸೆಯ ಪರಿಣಾಮ ಹಂತದಲ್ಲಿ ಚಿತ್ರಿಸುತ್ತಾರೆ. ಹಾಗೆಯೆ 'ವಲಸೆ' ಕಾದಂಬರಿಯಲ್ಲಿ ಬೆನಕನಹಳ್ಳಿ ಜಿ.ನಾಯಕ್‌ರವರು ಬರಗಾಲದ ಪರಿಣಾಮವಾಗಿಯೂ ವಲಸೆ ಬಂದ ಲಂಬಾಣಿ ಸಮುದಾಯದವರ ಹೆಣ್ಣುಮಕ್ಕಳನ್ನು ಅಪಹರಿಸಿ ಅತ್ಯಾಚಾರವೆಸಗುವ ಫ್ಯಾಕ್ಟರಿ ಮಾಲೀಕನ ದೌರ್ಜನ್ಯವನ್ನು ವಲಸೆಯ ಪರಿಣಾಮ ಹಂತದಲ್ಲಿ ಚಿತ್ರಿಸಿದ್ದಾರೆ. ರಂ.ಶ್ರೀ.ಮುಗಳಿರವರು ಅನ್ನ ಕಾದಂಬರಿಯಲ್ಲಿ ಬಂಗಾಲ ಪ್ರಾಂತ್ಯದಲ್ಲಿ ಬೀಸಿದ ಬಿರುಗಾಳಿಯಿಂದ ಲಕ್ಷಾಂತರ ಜನ ತುತ್ತು ಅನ್ನವನ್ನು ಅರಸಿ ವಲಸೆ ಬಂದ ಜನಕ್ಕೆ ಬರಗಾಲ ಕಾಮಗಾರಿಯಲ್ಲಿ ಕೆಲಸ ಮಾಡಿಸುವ ಕೆಲಸಗಾರರು ಕೂಲಿ ಆಳುಗಳ ಮೇಲೆ ಲೈಂಗಿಕ ಶೋಷಣೆ ನಡೆಸುತ್ತಾರೆ.

ಇನ್ನು ಗೀತಾ ನಾಗಭೂಷಣರವರು ನಿತ್ಯನರಳುವ ಮಂದಿ ಕಥೆಯಲ್ಲಿ ಭೂಕಂಪದಿಂದ ವಲಸೆ ಬಂದ ರತನಿ ತಿಪ್ಪಣ್ಣನ ಕುಟುಂಬಕ್ಕೆ ಕಲುಬುರ್ಗಿಯಲ್ಲಿ, ನಿಲ್ಲಲು ನೆಲೆ ಮತ್ತು ಬದುಕಿಗೆ ಒಂದು ಕೆಲಸವನ್ನು ಕೊಟ್ಟು ಝೂಪಡಿ ಪಟ್ಟಾದಾವನೇ ರತನಿಯನ್ನು ತನ್ನ ಕಾಮಕ್ಕೆ ಬಳಸಿ ಕೊಳ್ಳುತ್ತಾನೆ. ಇಲ್ಲಿ ಶ್ರೀಮಂತ ವರ್ಗ ಬಡವರ್ಗದವರ ಮೇಲೆ ನಡೆಸುವ ಶೋಷಣೆಯನ್ನು ಲೇಖಕರು ಪ್ರಮುಖವಾಗಿ ಅಭಿವ್ಯಕ್ತಿಸುತ್ತಾರೆ. ಇದೇ ವಸ್ತುವನ್ನು ಒಳಗೊಂಡ ಇವರದೇ ಆದ ಭೂಮಿ ಮತ್ತು ಬೀಜ ಕಥೆಯಲ್ಲಿ ಹೊಟ್ಟೆಪಾಡಿಗಾಗಿ ವಲಸೆ ಬಂದ ಶಾಣಪ್ಪ ನೀಲವ್ವನ ಕುಟುಂಬಕ್ಕೆ ದಾರಿ ತೋರಿದ ಗುರುಪಾದಪ್ಪ ಎಂಬ ಗೌಡನೇ ನೀಲವ್ವನೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳುವ ಸ್ಥಿತಿಯನ್ನು ವಿವರಿಸಿದರೆ ದ್ಯಾವನೂರರವರು ಮಾರಿಕೊಮಡವರು ಕಥೆಯಲ್ಲಿ ಲೇಖಕರು ಬೀರ ಲಕ್ಷ್ಮಿಯ ಕುಟುಂಬ ಬದುಕನ್ನು ಅರಸಿ ವಲಸೆ ಬಂದ ಕುಟುಂಬಕ್ಕೆ ಗೌಡ ದಾರಿ ತೋರಿದರೆ ಗೌಡನ ಮಗ ಕಿಟ್ಟಪ್ಪ ಬೀರನ ಹೆಂಡತಿ ಲಕ್ಷ್ಮಿಯನ್ನು ಇಟ್ಟುಕೊಳ್ಳುತ್ತಾನೆ.

ಹೀಗೆ ಈ ಮೂರು ಕತೆಗಳಲ್ಲಿಯೂ ಲೈಂಗಿಕ ದೌರ್ಜನ್ಯ ವಲಸೆಯ ಪರಿಣಾಮದ ಹಂತದಲ್ಲಿ ಲೇಖಕರು ಚಿತ್ರಿಸುತ್ತಾರೆ ಮತ್ತು ಇದರ ಜೊತೆಗೆ ಶ್ರೀಮಂತರ, ಗೌಡರ, ಕೆಳವರ್ಗದವರ ಜೊತೆ ನಡೆಸುವ ಹಲ್ಲೆ ಮತ್ತು ಬಡವರ ಅಸಹಾಯಕತೆ ವಲಸೆಗೆ ಪೂರಕ ಅಂಶವಾಗಿ ಮೂಡಿ ಬರುತ್ತದೆ.

ಒಟ್ಟಾರೆ ವಲಸೆಗೆ ಪೂರಕ ಪ್ರೇರಕ ಅಂಶವಾಗಿ ಮೂಡಿಬಂದಿರುವ ಲೈಂಗಿಕ ಶೋಷಣೆ ಹೆಚ್ಚಾಗಿ ವಲಸೆಯ ಪರಿಣಾಮ ಹಂತದಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ನಾ.ಡಿಸೋಜರವರ ಕೊಳಗದಲ್ಲಿ ಮಾತ್ರ ಗೌಡನ ಶೋಷಣೆಯಿಂದ ತಪ್ಪಿಸಿಕೊಂಡು ದ್ಯಾವನ ಕುಟುಂಬ ವಲಸೆಗೆ ಪ್ರೇರಣೆಯಾಗುತ್ತದೆ. ಆದರೆ ಗೀತಾನಾಗಭೂಷಣರವರು ಉತ್ತರ ಕನ್ನಡ ಪ್ರದೇಶದ ಜನರ ಸಾಮಾಜಿಕ ಸ್ಥಿತಿಗತಿಯ ಹಿನ್ನೆಲೆಯಲ್ಲಿ ವಲಸೆಯನ್ನು ನಿರೂಪಿಸಿದರೆ ನಾ.ಡಿಸೋಜರವರು ಸ್ವತಂತ್ರ್ಯ ಪೂರ್ವದಲ್ಲಿದ್ದ ಜಮೀನ್ದಾರಿ ವ್ಯವಸ್ಥೆ ಶೋಷಣೆಯ ಸ್ವರೂಪದ ನಿರೂಪಣೆಯೊಂದಿಗೆ ವಲಸೆಯ ಸಂಬಂಧವನ್ನು ದಾಖಲಿಸುತ್ತಾರೆ.

**೫. ಬಡತನ**

ಬಡತನ ವಲಸೆಗೆ ಪ್ರಮುಖ ಕಾರಣವಾಗಿದೆ. ಏಕೆಂದರೆ ಬರಗಾಲ, ನಿರುದ್ಯೋಗ, ಭೂಕಂಪ ದಂತಹ ಹಲವು ಕಾರಣಗಳಿಂದ ಎಲ್ಲವನ್ನು ಕಳೆದುಕೊಂಡು ಕುಟುಂಬ ಬಡತನದಲ್ಲಿ ಜೀವಿಸು ವಂತಾಗುತ್ತದೆ. ಇಂಥ ಸಂದರ್ಭದಲ್ಲಿ ಪಟ್ಟಣಗಳಿಗೆ ಕೆಲಸವನ್ನು ಅರಸಿಕೊಂಡು ಅಥವಾ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುವುದಗೋಸ್ಕರ ಕುಟುಂಬಗಳು ವಲಸೆ ಬರುತ್ತವೆ. ಹಾಗಾಗಿ ಬಡತನಕ್ಕೂ, ವಲಸೆಗೂ ಒಂದು ಅವಿನಾಭಾವ ಸಂಬಂಧವಿದೆ. ಇಂತ ಬಡತನವನ್ನು ಲೇಖಕರು ಕಥೆಗಳಲ್ಲಿ

ವಲಸೆಗೆ ಪೂರಕ ಅಂಶವಾಗಿ ಬಳಸಿಕೊಂಡಿರುವುದು ಹೆಚ್ಚು. ಅಂಥ ಕಥೆಗಳೆಂದರೆ ನಿತ್ಯ ನರಳುವ ಮಂದಿ, ಭೂಮಿ ಮತ್ತು ಬೀಜ, ಜ್ವಾಲಾಮುಖಿಯ ಮೇಲೆ, ವಲಸೆ, ಮಾರಿಕೊಂಡ ವರು, ಕ್ಷಾಮ, ಅನ್ನದಂತಹ ಕಥೆಗಳಲ್ಲಿ ಬಡತನ ಹೇಗೆ ವಲಸೆಗೆ ಪ್ರೇರಣೆಯಾಗಿದೆ ಮತ್ತು ಪೂರಕವಾಗಿದೆ ಎಂಬುದನ್ನು ನೋಡಬಹುದು.

ಈಗ ಮೊದಲಿಗೆ ಬಸವರಾಜ ಕಟ್ಟಿಮನಿಯವರ ಜ್ವಾಲಮುಖಿಯ ಮೇಲೆ ಕಾದಂಬರಿಯಲ್ಲಿ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಪೊಲೀಸರಿಂದ ಆಸ್ತಿ, ಮನೆ, ಹೊಲ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾಗಿ ಧರ್ಮಪುರಕ್ಕೆ ವಲಸೆ ಬರುವ ಕುಟುಂಬಗಳು, ಫ್ಯಾಕ್ಟರಿಯಲ್ಲಿ ಕೊಡುವ ಕಡಿಮೆ ಕೂಲಿಯಿಂದ ಬದುಕು ನಿರ್ವಹಿಸಲು ಆಗದೇ ಬಡತನದಲ್ಲಿ ಬದುಕುತ್ತಾರೆ. ಅಂದರೆ ಇಲ್ಲಿ ಲೇಖಕರು ಬಡತನವನ್ನು ಪ್ರೇರಣೆ ಮತ್ತು ಪರಿಣಾಮ ಎರಡು ಹಂತದಲ್ಲೂ ಚಿತ್ರಿಸಿದ್ದಾರೆ.

ಕ್ಷಾಮ ಕಥೆಯಲ್ಲಿ ಬರಗೂರುರವರು ಬರಗಾಲದ ಪರಿಣಾಮದಿಂದ ಒಂದು ಹೊತ್ತಿನ ಊಟಕ್ಕೂ ಗತೀ ಇಲ್ಲದಂತಹ ಬಡತನದಲ್ಲಿ ಬದುಕುವಂತ ಸ್ಥಿತಿಯನ್ನು ವಲಸೆಯ ಪ್ರೇರಣೆಯಲ್ಲಿ ಚಿತ್ರಿಸುತ್ತಾರೆ. ಇಂಥ ಒಂದು ಸ್ಥಿತಿಯಿಂದಲೇ ಊರಿನ ಎಷ್ಟೋ ಕುಟುಂಬಗಳು ಬಡತನವನ್ನು ಎದುರಿಸಲಾಗದೆ ಊರುಬಿಟ್ಟು ವಲಸೆ ಹೋಗುತ್ತಾರೆ. ಅಂದರೆ ಬರಗಾಲ, ಬಡತನ, ಹಸಿವಿನ ಬವಣೆಯನ್ನು ಲೇಖಕರು ಏಕಕಾಲಕ್ಕೆ ಚಿತ್ರಿಸಿದರೆ ಇದೇ ರೀತಿ ಬಡತನದಿಂದ ಹೊಟ್ಟೆಪಾಡಿಗಾಗಿ ಬದುಕನ್ನು ಅರಸಿ ಬಂದ ದ್ಯಾವನೂರ ಮಹಾದೇವರವರ ಮಾರಿಕೊಂಡವರು ಕಥೆಯಲ್ಲಿ ಬಡತನ ದಿಂದ ಬೀರ, ಲಕ್ಷ್ಮಿ ವಲಸೆ ಬರುತ್ತಾರೆ. ಇವರ ಬಡತನದ ಆರ್ಥಿಕ ಸ್ಥಿತಿಯನ್ನು ರೈಲಿ ಯಲ್ಲಿ ಟಿಕೇಟ್ ತೆಗೆದುಕೊಳ್ಳಲು ಹಣವಿಲ್ಲದೆ ಪರದಾಡುವ ಸಂದರ್ಭವನೇ ಸೂಚಿಸುತ್ತದೆ. ಅಂದರೆ ಈ ಕಥೆಯಲ್ಲಿ ದ್ಯಾವನೂರರವರು ಬಡತನವನ್ನು ಬೀರನ ಕುಟುಂಬದ ವಲಸೆಯ ಪ್ರಕ್ರಿಯೆಯ ಹಂತದಲ್ಲಿ ಸೂಚಿಸುತ್ತಾರೆ.

ಹಾಗೆಯೆ ಗೀತಾನಾಗಭೂಷಣರವರು ಭೂಮಿ ಮತ್ತು ಬೀಜ ಕಥೆಯಲ್ಲಿ ಶಾಣಪ್ಪ ನೀಲವ್ವ ಹೊಟ್ಟೆಪಾಡಿಗಾಗಿ ಕಲಬುರ್ಗಿಗೆ ವಲಸೆ ಬರುತ್ತಾರೆ. ಎಂಬ ಅಂಶವೇ ಶಾಣಪ್ಪನ ಕುಟುಂಬ ಬಡತನವನ್ನು ಸೂಚಿಸುತ್ತದೆ. ಮತ್ತು ಇವರದೇ ಆದ ನಿತ್ಯ ನರಳುವ ಮಂದಿ ಕಥೆಯಲ್ಲಿ ಸಹ ಭೂಕಂಪದಿಂದ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾಗಿ ಬಡತನದಿಂದ ವಲಸೆ ಬರುವ ಪ್ರೇರಣಾ ಸ್ಥಿತಿಯನ್ನು ಲೇಖಕರು ಅಭಿವ್ಯಕ್ತಿಸುತ್ತಾರೆ.

ಅದೇ ರೀತಿ ಅನ್ನ ಕಾದಂಬರಿಯಲ್ಲಿ ರಂ.ಶ್ರೀ.ಮುಗಳಿರವರು ಬರಗಾಲದ ಪರಿಣಾಮವಾಗಿ ಇದ್ದ ಆಸ್ತಿಯೆಲ್ಲವನ್ನು ಕಳೆದುಕೊಂಡು ಬಡತನದಿಂದ ಪಟ್ಟಣಗಳಿಗೆ ವಲಸೆ ಬಂದ ಕುಟುಂಬಗಳು,

ವಲಸೆ ಬಂದ ಪ್ರದೇಶದಲ್ಲಿಯೂ ನೆಮ್ಮದಿ ಕಾಣದೆ ಲೈಂಗಿಕ ಶೋಷಣೆ, ಹಸಿವು, ಮೋಸ, ವಂಚನೆಗೆ ಬಲಿಯಾಗುವ ಚಿತ್ರಣ ಇಲ್ಲಿ ಕಂಡುಬರುತ್ತದೆ. ಹಾಗೆ ವಲಸೆ ಕಾದಂಬರಿಯಲ್ಲಿಯೂ ಸಹ ಬೆನಕನಹಳ್ಳಿ ಜಿ.ನಾಯಕರವರು ಬರಗಾಲದಿಂದ ಬಯಲು ನಾಡಿನಲ್ಲಿ ಬಡತನದಿಂದ ಬೆಂದು ಹೋದವರಿಗೆ ಮಲೆನಾಡಿಗೆ ವಲಸೆ ಬಂದರೂ, ಫ್ಯಾಕ್ಟರಿ ಮಾಲೀಕನ ಶೋಷಣೆಯಿಂದ ನೆಮ್ಮದಿ ಕಾಣದಾಗುತ್ತದೆ. ಹೀಗೆ ವಲಸೆಗೆ ಪ್ರೇರಣೆಯಾದ ಬರಗಾಲ, ಬಡತನದ ನಂತರದ ಪರಿಣಾಮದಲ್ಲಿ ಬಂಡವಾಳಶಾಹಿಗಳ ಶೋಷಣೆಯನ್ನು ಅನುಭವಿಸುವ ವೇದನೆಯನ್ನು ಚಿತ್ರಿಸುತ್ತಾರೆ.

ಹೀಗೆ ಬಡತನ ಹೆಚ್ಚಾಗಿ ವಲಸೆಗೆ ಪ್ರೇರಣಾ ಹಂತದಲ್ಲಿಯೇ ಕಂಡುಬರುವುದನ್ನು ಈ ಕೃತಿಗಳ ಮೂಲಕ ಸ್ಪಷ್ಟಪಡಿಸಬಹುದು. ಆದರೂ ಕೆಲವೊಮ್ಮೆ ಪರಿಣಾಮದಲ್ಲೂ ಅದೇ ಸ್ಥಿತಿ ಮುಂದುವರೆದಾಗ ಬದುಕು ಇನ್ನಷ್ಟು ದುಸ್ತರವಾಗುವುದನ್ನು ಈ ಮೂಲಕ ನೋಡಬಹುದಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಬಸವರಾಜ ಕಟ್ಟಿಮನಿಯವರು ಸ್ವಾತಂತ್ರ್ಯ ಸಂದರ್ಭ ಮತ್ತು ಗಿರಣಿ ಮಾಲೀಕರ ದೌರ್ಜನ್ಯದ ಪರಿಣಾಮದ ಹಿನ್ನೆಲೆಯಲ್ಲಿ ಬಡತನ ಚಿತ್ರಣವನ್ನು ನೀಡಿದರೆ ಗೀತಾನಾಗಭೂಷಣರವರು ಉತ್ತರ ಕನ್ನಡ ಪ್ರದೇಶದಲ್ಲಿ ಆಗಾಗ್ಗೆ ಉಂಟಾಗುವ ಬರಗಾಲದ ಸ್ಥಿತಿ, ಅಲ್ಲಿಯ ಜನರ ಬದುಕಿನಲ್ಲಿ ಉಂಟಾಗುವ ಏರು–ಪೇರುಗಳನ್ನು ಚಿತ್ರಿಸುತ್ತಾರೆ. ಅದೇ ರೀತಿ ಬೆನಕನಹಳ್ಳಿ ಜಿ.ನಾಯಕರವರು ವಲಸೆ ಕಾದಂಬರಿಯ ಶ್ರಮಜೀವಿಗಳಾಗಿ ಬದುಕುತ್ತಿರುವ ಲಂಬಾಣಿಗರ ಮೇಲೆ ನಡೆಯುವ ಬಂಡವಾಳಶಾಹಿಗಳ ಶೋಷಣೆಯ ವಿವಿಧ ರೂಪವನ್ನು ವಲಸೆ, ಬಡತನದೊಂದಿಗೆ ಚಿತ್ರಿಸುತ್ತಾರೆ.

### ೬. ಜಮೀನ್ದಾರಿ ವ್ಯವಸ್ಥೆ

ಸ್ವಾತಂತ್ರ್ಯ ಪೂರ್ವದಲ್ಲಿ ಇದ್ದ ಜಮೀನ್ದಾರಿ ವ್ಯವಸ್ಥೆಯಿಂದ ಅಲ್ಲಿದ್ದ ರೈತ ಕುಟುಂಬಗಳು ಗೌಡನಿಂದ ಹಲವು ರೀತಿಯ ಶೋಷಣೆಗೆ ಗುರಿಯಾಗುತ್ತಿದ್ದವು. ಕೆಲವು ಕುಟುಂಬಗಳು ಗೌಡನ ಲೈಂಗಿಕ ಶೋಷಣೆ, ಕಡಿಮೆ ಕೂಲಿ, ಹೊಲದ ಗೇಣಿ ವಿಷಯದಲ್ಲಿನ ಮೋಸ ಜೀತಪದ್ಧತಿಯಿಂದ ತಪ್ಪಿಸಿಕೊಳ್ಳಲು ಕೆಲವೊಮ್ಮೆ ತಮ್ಮ ಊರನ್ನು ತೊರೆಯುತ್ತಿದ್ದವು. ಇಂಥ ಶೋಷಣೆಯ ಸ್ಥಿತಿಗತಿ ಮತ್ತು ವಲಸೆಯೊಂದಿಗಿನ ಸಂಬಂಧವನ್ನು ಲೇಖಕರು ಕೃತಿಗಳ ಮೂಲಕ ಕಟ್ಟಿಕೊಡುವ ಭಿನ್ನ ಅಭಿವ್ಯಕ್ತಿ ಕ್ರಮ ಇಲ್ಲಿ ನೋಡಬಹುದಾಗಿದೆ. ಉದಾಹರಣೆಗೆ ಅಂಥ ಕಥೆಗಳೆಂದರೆ ಕೊಳಗ, ಆಳುಮಗ, ಭೂಮಿ ಮತ್ತು ಬೀಜ, ನಿತ್ಯನರಳುವ ಮಂದಿ, ಮಾರಿಕೊಂಡವರು ಕತೆಗಳಲ್ಲಿ ಪ್ರಮುಖವಾಗಿ ಮೂಡಿಬಂದಿದೆ.

ನಾ.ಡಿಸೋಜರವರ ಕೊಳಗ ಕಾದಂಬರಿಯಲ್ಲಿ ಒಬ್ಬ ಗೌಡನ ಲೈಂಗಿಕ ಶೋಷಣೆಯಿಂದ ತಪ್ಪಿಸಿಕೊಂಡು ಮತ್ತೊಂದು ಹಳ್ಳಿಗೆ ವಲಸೆ ಬಂದ ದ್ಯಾವನ ಕುಟುಂಬ ಭತ್ತವನ್ನು ಅಳೆಯುವ

ಕೊಳಗದಲ್ಲಿ ಮಾಡುವ ಮೋಸಕ್ಕೆ ಇಡೀ ರೈತ ಕುಟುಂಬಗಳು ಮೋಸ ಹೋಗುತ್ತದೆ. ಆದರೆ ಬೆಸಗರಹಳ್ಳಿ ರಾಮಣ್ಣನವರು ಆಳುಮಗ ಕಥೆಯಲ್ಲಿ ಮಾನವೀಯ ಗುಣಗಳನ್ನು ಹೊಂದಿರುವ ಇಲ್ಲಿಯ ಜಮೀನ್ದಾರಿ ಮನೆತನದವರ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಾರೆ. ಉದಾಹರಣೆಗೆ ಕರಿಬೋರ ಬರಗಾಲ ಬಂದಾಗ ತಾನು ಜೀತದಾಳಾಗಿದ್ದ ಗೌಡನಿಗೂ ಹೇಳದೇ ವಲಸೆ ಹೋಗಿ ಬಂದ ನಂತರ ತನ್ನ ಯಜಮಾನ ತೀರಿದ ವಿಷಯ ಕೇಳಿ ಅಳುವ ಸಂದರ್ಭ ಒಬ್ಬ ಜಮೀನ್ದಾರನಿಗೂ, ಆಳು ಮಗನಿಗೂ ಇದ್ದ ಅನ್ಯೂನ್ಯ ಸಂಬಂಧವನ್ನು ವಲಸೆಗೆ ಪೂರಕ ಅಂಶವಾಗಿ ಲೇಖಕರು ಬಳಸಿಕೊಂಡಿದ್ದಾರೆ.

ಅದೇ ರೀತಿ ಭೂಮಿ ಮತ್ತು ಬೀಜ ಕತೆಯಲ್ಲಿಯೂ ಲೇಖಕಿ ಗುರುಪಾದಪ್ಪ ಒಬ್ಬ ಗೌಡನಾಗಿದ್ದರೂ ಶಾಣಪ್ಪನ ಹೆಂಡತಿಯೊಂದಿಗೆ ಸಂಬಂಧವಿರಿಸಿಕೊಂಡ ಕಾರಣಕ್ಕಾಗಿ ಶಾಣಪ್ಪನಿಗೆ ಎಲ್ಲ ತರದ ಸವಲತ್ತುಗಳನ್ನು ಮಾಡಿಕೊಡುತ್ತಾನೆ. ಕೊನೆಗೆ ಬರಗಾಲ ಬಂದಾಗ ಊರು ಬಿಟ್ಟು ಹೋಗುವುದಕ್ಕೆ ಆರ್ಥಿಕ ಸಹಾಯ ಮಾಡುತ್ತಾನೆ. ಇದು ಒಬ್ಬ ಗೌಡನಲ್ಲಿದ್ದ ಮಾನವೀಯ ಗುಣಗಳನ್ನು ಪರಿಚಯಿಸುತ್ತದೆ.

ಆದರೆ ದ್ಯಾವನೂರರ ಮಾರಿಕೊಂಡವರು ಕಥೆಯಲ್ಲಿ ಬೀರನಿಗೆ ರೈಲಿನಲ್ಲಿ ಟಿಕೇಟ್‌ಗೆ ಹಣ ನೀಡಿ ಸಹಾಯ ಮಾಡಿದ ಗೌಡ ಒಳ್ಳೆಯವನಾದರೂ ಗೌಡನ ಮಗ ಕಿಟ್ಟಪ್ಪ ಬೀರನ ಹೆಂಡತಿ ಲಕ್ಷ್ಮಿಯನ್ನು ಗೌಡನ ಅದೇ ದರ್ಪದಲ್ಲಿ ಲೈಂಗಿಕ ಶೋಷಣೆಗೆ ಗುರಿಪಡಿಸುತ್ತಾನೆ.

ಒಟ್ಟಾರೆಯಾಗಿ ಹೇಳುವುದಾದರೆ ಕೆಲವು ಕಡೆ ವಲಸೆಯ ಪ್ರೇರಣಾ ಹಂತದಲ್ಲಿ ಇಂಥ ಜಮೀನ್ದಾರಿ ವ್ಯವಸ್ಥೆ ಶೋಷಣೆಯನ್ನು ಅನುಭವಿಸಿದರೆ ಇನ್ನು ಕೆಲವು ಕಡೆ ವಲಸೆ ಬಂದ ನಂತರದಲ್ಲಿ ಅನುಭವಿಸುತ್ತಾರೆ. ಆದರೆ ಕೆಲವು ಕಥೆಗಳಲ್ಲಿ ಗೌಡನೇ ಮಾನವೀಯವುಳ್ಳ ವ್ಯಕ್ತಿಯಾಗಿ ಆ ರೈತ ಕುಟುಂಬಕ್ಕೆ ಸಹಾಯ ಮಾಡುವ ಸಂದರ್ಭಗಳು ಸಹ ಇಲ್ಲಿ ಕಂಡುಬರುತ್ತವೆ. ಹಾಗೆಯೆ ನಾ.ಡಿಸೋಜರವರು ಸ್ವಾತಂತ್ರ್ಯ ಪೂರ್ವದಲ್ಲಿನ ಜಮೀನ್ದಾರಿ ವ್ಯವಸ್ಥೆಯನ್ನು 'ಕೊಳಗ' ಕಾದಂಬರಿಯಲ್ಲಿ ವಲಸೆಯೊಂದಿಗೆ ಪೂರಕವಾಗಿ ಚಿತ್ರಿಸಿದ್ದಾರೆ. ಗೀತನಾಗಭೂಷಣರವರು ಉತ್ತರ ಕನ್ನಡ ಪ್ರದೇಶದ ಸುತ್ತಮುತ್ತಲಿನ ಜಮೀನ್ದಾರಿ ವ್ಯವಸ್ಥೆಯನ್ನು ಚಿತ್ರಿಸುತ್ತಾರೆ.

### ೭. ನಿರುದ್ಯೋಗ

ಇದು ಇತ್ತೀಚಿನ ಆಧುನಿಕ ಸಂದರ್ಭದಲ್ಲಿ ವಲಸೆಗೆ ಕಾರಣವಾಗುತ್ತಿರುವ ಒಂದು ಅಂಶ. ಇಂದಿನ ಯುವಕ ಯುವತಿಯರು ನಿರುದ್ಯೋಗ ಸಮಸ್ಯೆಯಿಂದ ದೊಡ್ಡ ದೊಡ್ಡ ಪಟ್ಟಣಗಳಿಗೋ ಅಥವಾ ವಿದೇಶಕ್ಕೋ ವಲಸೆ ಹೋಗಿ ದುಡಿಯುವಂತ ಅನಿವಾರ್ಯತೆ ಉಂಟಾಗುತ್ತಿರುವ ಹಿನ್ನೆಲೆಯಲ್ಲಿ ಲೇಖಕರು ವಲಸೆಯ ನಿರುದ್ಯೋಗಕ್ಕೂ ಇರುವ ಸಂಬಂಧವನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ.

ಉದಾ: ಗುರುಪ್ರಸಾದ್‌ರವರ ಬೇರು ಕಾದಂಬರಿಯಲ್ಲಿ ಆದಿತ್ಯ ತನಗೆ ಇದ್ದ ಒಳ್ಳೆಯ ಉದ್ಯೋಗವನ್ನು ಬಿಟ್ಟು ಹೆಂಡತಿಯ ಒತ್ತಾಯಕ್ಕೆ ಅಮೆರಿಕಗೆ ಹೋಗಿ ನಿರುದ್ಯೋಗದಿಂದ ತೊಳಲಾಡುತ್ತಾನೆ. ಅಂದರೆ ಇಲ್ಲಿ ನಿರುದ್ಯೋಗ ವಲಸೆಗೆ ಕಾರಣವಾಗದೇ ಪರಿಣಾಮದಲ್ಲಿ ಸಮಸ್ಯೆಯಾಗಿ ಕಾಡುವ ಸ್ಥಿತಿಯನ್ನು ಲೇಖಕರು ಚಿತ್ರಿಸುತ್ತಾರೆ.

ಅದೇ ರೀತಿ ಚದುರಂಗರವರ ಹೆಜ್ಜಾಲ ಕೃತಿಯಲ್ಲಿ ಕಥಾನಾಯಕ ಕಾಲೂರ ಇದ್ದ ಆಸ್ತಿಯೆಲ್ಲವನ್ನು ಮೋಸದಿಂದ ಕಳೆದುಕೊಂಡು ಕೆಲಸಕ್ಕಾಗಿ ನಾನಾ ಕಡೆ ಅಲೆಯುತ್ತಾನೆ. ಈ ಅಲೆಯುವ ಹಂತದಲ್ಲಿ ತೋಟದ ಕೆಲಸ, ಅಂಗಡಿ, ಕಾಫಿ ತೋಟದಂತಹ ಹಲವು ಕಡೆ ಅಲೆದು ನಾನಾ ತರದ ಉದ್ಯೋಗಗಳನ್ನು ಮಾಡುತ್ತಾನೆ. ಇದು ವಲಸೆಯ ಪ್ರಕ್ರಿಯೆ ನಡೆಯುವ ನಿರುದ್ಯೋಗದ ಸಮಸ್ಯೆಯಾಗಿದೆ.

ಇನ್ನು ದರಿದ್ರರು ಕಾದಂಬರಿಯಲ್ಲಿ ಕೆ.ವಿ.ರಾವ್ ಅವರು ಹಳ್ಳಿಯಲ್ಲಿನ ಬಡತನದಿಂದ ಬಂದ ಇಬ್ಬರು ಯುವಕರು ಪಟ್ಟಣಗಳಲ್ಲಿ ಕೆಲಸಕ್ಕಾಗಿ ಅಲೆಯುತ್ತಾರೆ. ಆದರೂ ಕೊನೆಯಲ್ಲಿ ಸಿಕ್ಕ ಬಿಲ್ಡಿಂಗ್ ಕಟ್ಟಡ ನಿರ್ಮಾಣದಲ್ಲಿ ಕೊಟ್ಟ ಕಡಿಮೆ ಕೂಲಿಗೆ ದುಡಿಯಲಾಗದೇ ಕಳ್ಳತನದ ದಾರಿಯನ್ನು ಹಿಡಿಯುತ್ತಾರೆ. ಇಲ್ಲಿಯೂ ಸಹ ನಿರುದ್ಯೋಗ ವಲಸೆಗೆ ಪ್ರೇರಣೆಯಾಗಿ ಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಹಳ್ಳಿಯಲ್ಲಿ ಯಾವುದೇ ಕೆಲಸವಿಲ್ಲದೆ ಅಲೆಯುವಂತಹ ಸಂದರ್ಭದಲ್ಲಿ ಕೆಲಸವನ್ನು ಹುಡುಕಿಕೊಂಡು ಪಟ್ಟಣಗಳಿಗೆ ಬಂದಾಗ ಕಡಿಮೆ ಕೂಲಿ, ಶ್ರಮದಾಹಿಕ ಕೆಲಸಗಳಿಗೆ ಗುರಿಯಾಗಿ ಅನಿವಾರ್ಯವಾಗಿ ದುಡಿಯುವ ಅಥವಾ ಕಳ್ಳರಾಗಿ ಮಾರ್ಪಾಡುವ ಸಂದರ್ಭವನ್ನು ಕೆ.ವಿ.ರಾವ್ ಅವರು ಚಿತ್ರಿಸಿದ್ದಾರೆ. ವಿದೇಶಗಳಲ್ಲಿನ ಉದ್ಯೋಗದ ಸ್ತಿತಿಗತಿಯನ್ನು ಜಾಗತೀಕರಣ ಸಂದರ್ಭದ ಹಿನ್ನೆಲೆಯಲ್ಲಿ ಚಿತ್ರಿಸಿದ ಗುರುಪ್ರಸಾದರವರ ಬೇರು ಕಾದಂಬರಿ ಸೂಚಿಸುತ್ತದೆ. ಹೆಜ್ಜಾಲ ಕಾದಂಬರಿಯಲ್ಲಂತೂ ಚದುರಂಗರವರು ಒಬ್ಬ ಅವಿದ್ಯಾವಂತ ಹಳ್ಳಿಯಲ್ಲಿನ ಶ್ರೀಮಂತ ವರ್ಗದಿಂದ ಮೋಸ ಹೊಂದಿ ಕೆಲಸಕ್ಕಾಗಿ ಊರೂರು ಅಲೆಯುವ ಸ್ಥಿತಿಯನ್ನು ಸಮಾಜದಲ್ಲಿನ ಶ್ರೀಮಂತ ವರ್ಗದ ದರ್ಪ ದೌರ್ಜನ್ಯಗಳನ್ನು ನಿರೂಪಿಸುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಎಲ್ಲಾ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ವಲಸೆಗೆ ಪ್ರೇರಣೆ, ಪ್ರಕ್ರಿಯೆ, ಪರಿಣಾಮ ಎಂಬ ಮೂರು ಹಂತದಲ್ಲೂ ಒಂದಲ್ಲ ಒಂದು ಕಡೆ ಬರುವ ಪ್ರಮುಖ ಅಂಶಗಳಾಗಿವೆ. ಕೆಲವು ಕಡೆ ಲೇಖಕರು ಪ್ರೇರಣೆಯ ಹಂತದಲ್ಲಿ ತಂದರೆ, ಇನ್ನು ಕೆಲವು ಲೇಖಕರು ಪರಿಣಾಮದ ಹಂತದಲ್ಲಿ ಅಭಿವ್ಯಕ್ತಿಸುತ್ತಾರೆ. ಜೊತೆಗೆ ಇನ್ನು ಕೆಲವು ಅಂಶಗಳನ್ನು ವಲಸೆಗೆ ಪೂರಕ ಅಂಶವಾಗಿ ಬಳಸಿಕೊಂಡು ವ್ಯಕ್ತಪಡಿಸುವ ಇಲ್ಲಿಯ ಲೇಖಕರ ಅಭಿವ್ಯಕ್ತಿಸಿದ ಕ್ರಮ ವಲಸೆಯ ಬಹುಮುಖಿ ಆಯಾಮಗಳನ್ನು ಚಿತ್ರಿಸುತ್ತದೆ.

ಹೀಗೆ ಇಷ್ಟೆಲ್ಲಾ ಕಥೆ ಕಾದಂಬರಿಗಳು ವಲಸೆಯನ್ನು ಪ್ರಮುಖ ವಸ್ತುವಾಗಿ ಬಳಸಿಕೊಂಡಿರುವಂತಹ ಕಥೆಗಳಾದರೆ ಇನ್ನು ಅಲ್ಲಲ್ಲಿ ಕಥೆಗಳಲ್ಲಿ ಬಂದು ಹೋದ ವಲಸೆಯ ಅಂಶಗಳನ್ನು ಹೊಂದಿರುವ ಕಥೆ ಕಾದಂಬರಿಗಳು ಸಾಕಷ್ಟಿವೆ. ಆದರೆ ಇವುಗಳಲ್ಲಿ ವಲಸೆ ಕೇವಲ ಕಥಾ ನಿರ್ವಹಣೆಯಲ್ಲಿ ಬಂದು ಹೋಗುವ ಸಾಮಾನ್ಯ ತರಹದ ಅಭಿವ್ಯಕ್ತಿ ಕ್ರಮದಲ್ಲಿ ಮೂಡಿಬಂದಿದೆ. ಅಂಥವುಗಳೆಂದರೆ ಎಂ.ವೀರಪ್ಪ ಮೊಯಿಲಿರವರ ತೆಂಬರೆ ಕಾದಂಬರಿಯಲ್ಲಿ ಲಕನನ ಪಾತ್ರ ಉದ್ಯೋಗಕ್ಕಾಗಿ ಊರಿಂದ ಊರಿಗೆ ಅಲೆಯುವ ಅಂಶವಾಗಿ ವಲಸೆ ಮೂಡಿ ಬಂದರೆ, ಕುಂ.ವೀರಭದ್ರಪ್ಪರವರ ಕುಬಸ ಕಥೆಯಲ್ಲಿ ಅದೇ ಉದ್ಯೋಗಕ್ಕಾಗಿ ಸಿಟ್ಟಕಲ್ಲ ಪಟ್ಟಣಕ್ಕೆ ಬರುತ್ತಾನೆ. ಹಾಗೆಯೆ ಎಂ.ಕೆ.ಇಂದಿರಾರವರ ಸದಾನಂದ ಕಾದಂಬರಿಯಲ್ಲಿಯೂ ಸಹ ಉದ್ಯೋಗಕ್ಕಾಗಿ ವಿದೇಶಕ್ಕೆ ಹೋಗುತ್ತಾರೆ. ಆದರೆ ವಲಸೆಯ ಕುರಿತ ಯಾವ ಪರಿಣಾಮಕಾರಿ ಅಭಿವ್ಯಕ್ತಿ ಇಲ್ಲಿ ಕಂಡುಬರುವುದಿಲ್ಲ.

ಹಾಗೆಯೆ ಬಸವರಾಜ ಕಟ್ಟಿಮನಿಯವರು ಬೀದಿಯಲ್ಲಿ ಬಿದ್ದವಳು ಕಾದಂಬರಿಯಲ್ಲಿ ಕಥಾನಾಯಕಿಯ ಕುಟುಂಬ ಎಲ್ಲಿಂದಲೋ ವಲಸೆ ಬಂದ ಕುಟುಂಬ ಎಂದು ಒಂದು ಸಣ್ಣ ಸೂಚನೆಯನ್ನು ಕೊಡುತ್ತಾರೆ. ಹಾಗೆಯೆ ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಗುತ್ತಿ ತಿಮ್ಮಿಯ ಪಾತ್ರ ಒಂದು ಘಟ್ಟದ ಕಡೆಯಿಂದ ಮತ್ತೊಂದು ಘಟ್ಟದ ಕೆಳಗೆ ಓಡಿಹೋಗಿ ಮದುವೆ ಮಾಡಿಕೊಂಡು ನೆಲೆಸುವ ಸನ್ನಿವೇಶಗಳು ಒಂದು ರೀತಿಯಲ್ಲಿ ವಲಸೆಗೆ ಸಂಬಂಧಿಸಿದರೂ ಅವು ಕತೆಗಳಲ್ಲಿ ಪರಿಣಾಮಕಾರಿಯಾಗಿ ಮೂಡಿಬರದೇ ಸಾಮಾನ್ಯವಾಗಿ ಚಿತ್ರಿತವಾಗಿದೆ.

ಅದೇ ರೀತಿ ಯಶವಂತ ಚಿತ್ತಾಲರ ಖಾಲಿಕೋಣೆ, ವಿಪರ್ಯಾಸ, ಪೀಜಿಯಂತಹ ಹಲವು ಕಥೆಗಳಲ್ಲಿ ಯಾವುದೋ ಕಾರಣಕ್ಕಾಗಿ ಮುಂಬೈಗೆ ವಲಸೆ ಹೋಗಿದ್ದರೂ ಅಲ್ಲಿ ಬೇರೆ ತರಹದ ಕಥಾ ವಸ್ತುವಿನೊಂದಿಗೆ ಕಥೆ ಸಾಗುತ್ತದೆ. ಹಾಗಾಗಿ ಇಲ್ಲಿ ವಲಸೆ ಪ್ರತಿಯೊಂದು ಕಥೆ ಕಾದಂಬರಿಗಳಲ್ಲಿಯೂ ಕಥಾ ನಿರ್ವಹಣೆಯಲ್ಲಿ ಅಲ್ಲಲ್ಲಿ ಕಾಣಿಸಿಕೊಂಡರು ಅವು ಅಷ್ಟಾಗಿ ಚರ್ಚಿತಗೊಂಡಿಲ್ಲವೆಂಬುದು ಈ ಮೂಲಕ ಹೇಳಬಹುದಾಗಿದೆ.

ಅಧ್ಯಾಯ ಆರು

# ಕನ್ನಡ ಕಥನ ಸಾಹಿತ್ಯದಲ್ಲಿ ಅಲೆಮಾರಿ ಸಂಸ್ಕೃತಿ, ವಲಸೆ ಸಂಸ್ಕೃತಿ ಸ್ಥಿರವಾಸ್ತವ್ಯದ ಸಂಸ್ಕೃತಿಗಳೊಳಗಿನ ಅಂತಃ ಸಂಬಂಧಗಳ ನೆಲೆಗಳು

೬.೧. ಮೂಲನೆಲೆ ಮತ್ತು ಸ್ಥಿರವಾಸ್ತವ್ಯಗಳ ಹಂಗಿಲ್ಲದ ಅಲೆಮಾರಿ ಸಂಸ್ಕೃತಿ.
೬.೨. ಮೂಲನೆಲೆ ಮತ್ತು ವರ್ತಮಾನದ ವಾಸ್ತವ್ಯಗಳ ನಡುವಿನ ವಲಸೆ ಸಂಸ್ಕೃತಿ.

ಅಧ್ಯಾಯ ಆರು

# ಕನ್ನಡ ಕಥನ ಸಾಹಿತ್ಯದಲ್ಲಿ ಅಲೆಮಾರಿ ಸಂಸ್ಕೃತಿ, ವಲಸೆ ಸಂಸ್ಕೃತಿ ಸ್ಥಿರವಾಸ್ತವ್ಯದ ಸಂಸ್ಕೃತಿಗಳೊಳಗಿನ ಅಂತಃ ಸಂಬಂಧಗಳ ನೆಲೆಗಳು

ಸಾಮಾನ್ಯವಾಗಿ ಅಲೆಮಾರಿ ಎಂದರೆ ಸ್ವ ಇಚ್ಛಾಪೂರಿತವಾಗಿ ಒಂದು ಕಡೆ ನೆಲೆ ನಿಲ್ಲದೇ ಅಲ್ಲಲ್ಲಿ ತಾತ್ಕಾಲಿಕವಾಗಿ ನೆಲೆಗೊಳ್ಳುತ್ತಾ ಚಲಿಸುವ ಪ್ರಕ್ರಿಯೆಯನ್ನು ಅಲೆಮಾರಿಗಳೆಂದು ಕರೆಯುತ್ತೇವೆ ಅದೇ ರೀತಿ ವಲಸೆ ಎಂದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ತಾತ್ಕಾಲಿಕವಾಗಿ ಇಲ್ಲವೇ ಶಾಶ್ವತವಾಗಿ ನೆಲೆಯಾಗುವಿಕೆಯನ್ನು ವಲಸೆ ಎಂದು ಕರೆದರೆ, ವಲಸೆ ನಂತರದಲ್ಲಿ ಸಂಭವಿಸುವ ಒಂದು ಕಡೆ ಸ್ಥಿರವಾಗಿ ನೆಲೆಯಾಗುವ ಪ್ರಕ್ರಿಯೆಯನ್ನು ಸ್ಥಿರ ವಾಸ್ತವ್ಯವೆಂದು ಕರೆಯುತ್ತೇವೆ,

ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ನೋಡಿದಾಗ ಈ ಮೂರು ಪರಿಕಲ್ಪನೆಗಳಲ್ಲಿಯೂ ಭಿನ್ನ ಅರ್ಥಗಳಿವೆ. ಆದರೆ, ಸೂಕ್ಷ್ಮವಾಗಿ ಗಮನಿಸಿದಾಗ ಈ ಮೂರು ಪರಿಕಲ್ಪನೆಗಳಲ್ಲಿಯೂ ಕೆಲವು ಸಾಮ್ಯತೆಗಳಿವೆ. ಅಲೆಮಾರಿಗಳಲ್ಲಿ ಸಂಭವಿಸುವ ತಾತ್ಕಾಲಿಕ ನೆಲೆಯಾಗುವಿಕೆ ವಲಸಿಗರಲ್ಲಿ ಕಂಡುಬರುತ್ತದೆ. ವಲಸಿಗರು ಸಹ ಕೆಲವೊಮ್ಮೆ ಅನಿವಾರ್ಯ ಕಾರಣಗಳಿಂದ ಒಂದು ಕಡೆ ನೆಲೆಯಾದ ನಂತರವೂ ತಮ್ಮ ಚಲನೆಯನ್ನು ಮುಂದುವರೆಸುತ್ತಾರೆ. ಹಾಗೆಯೆ ಹೆಚ್ಚಾಗಿ ಅಲೆಮಾರಿಗಳು ತಮ್ಮ ಬದುಕಿನ ನಿರ್ವಹಣೆಗೆ ಚಲಿಸುತ್ತಾರೆ. ವಲಸಿಗರು ಸಹ ಅಲೆಮಾರಿಗಳಂತೆ ತಮ್ಮ ಬದುಕಿನ ನಿರ್ವಹಣೆಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸುತ್ತಾರೆ. ಇನ್ನು ಸ್ಥಿರವಾಸ್ತವ್ಯದವರು ಸಹ ತಮ್ಮ ಮೂಲ ನೆಲೆಯನ್ನು ಬಿಟ್ಟು ಬಂದವರೇ ಆಗಿರುತ್ತಾರೆ. ಹಾಗಾಗಿ ಇವರಲ್ಲೂ ಸಹ ಒಂದು ಚಲನೆ ಪ್ರಕ್ರಿಯೆ ನಡೆದಿರುತ್ತದೆ. ಮತ್ತು ಇವರಲ್ಲಿಯೂ ಕೂಡ ವಲಸೆ ಸಂಭವಿಸಿರುತ್ತದೆ.

ಅದರೆ, ಸ್ಥಿರವಾಸ್ತವ್ಯದವರಲ್ಲಿ ಉಂಟಾಗುವ ಮೂಲ ನೆಲೆಯ ನೆನಪುಗಳು ಅಲೆಮಾರಿಗಳಲ್ಲಿ ಕಂಡುಬರುವುದಿಲ್ಲ, ಕಾರಣ ಅಲೆಮಾರಿಗಳು ಸ್ವ ಇಚ್ಛೆಯಿಂದಲೇ ಹೊರಟವರು. ಆದರೆ, ವಲಸಿಗರು

ಸ್ವ ಇಚ್ಛೆ ಅಥವಾ ಅನಿವಾರ್ಯ ಎರಡು ತರಹದ ಭಿನ್ನ ಮನಸ್ಥಿತಿಯಿಂದಲೂ ವಲಸೆ ಬಂದವರು ಆಗಿರುತ್ತಾರೆ. ಹೀಗೆ ಈ ಮೂರು ಪರಿಕಲ್ಪನೆಗಳಲ್ಲಿಯೂ ಕೆಲವು ಭಿನ್ನತೆ ಮತ್ತು ಸಾಮ್ಯತೆಗಳನ್ನು ಗುರುತಿಸಬಹುದಾಗಿದೆ. ಇಂತಹ ಸೂಕ್ಷ್ಮ ಅಂಶಗಳನ್ನು ಸಣ್ಣ ಕತೆ ಕಾದಂಬರಿಗಳ ಮೂಲಕ ಲೇಖಕರು ಅಭಿವ್ಯಕ್ತಿಸಿದ  ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

## ೬.೧ ಮೂಲ ನೆಲೆ ಮತ್ತು ಸ್ಥಿರವಾಸ್ತವ್ಯಗಳ ಹಂಗಿಲ್ಲದ ಅಲೆಮಾರಿ ಸಂಸ್ಕೃತಿ

ವಲಸೆ ಪ್ರಕ್ರಿಯೆ ಸಂಭವಿಸುವಲ್ಲಿ ಸಾಮಾನ್ಯವಾಗಿ  ಮೂಲ ನೆಲೆ ಎನ್ನುವಂತದ್ದು ಇದ್ದೇ ಇರುತ್ತದೆ. ಈ ಹಿನ್ನೆಲೆಯಲ್ಲಿ ವಲಸೆಗೂ ಪೂರ್ವದ ವಿಶಿಷ್ಟ ಪರಿಸರವನ್ನು ಮೂಲ ನೆಲೆಯಾಗಿ ಪರಿಭಾವಿಸಿಕೊಳ್ಳಲಾಗಿದೆ. ಆ ನೆಲೆಯ ಕುಟುಂಬ, ಪರಿಸರ, ಬದುಕಿದ ರೀತಿ–ನೀತಿಯ ಸ್ವರೂಪವನ್ನು ಇಲ್ಲಿ ಪ್ರಮುಖವಾಗಿ ಚರ್ಚಿಸಲಾಗುವುದು. ಇದರ ಜೊತೆಗೆ  ಪ್ರಸ್ತುತ ಈ ಪರಿಕಲ್ಪನೆಯನ್ನು ಹೀಗೆ ವಿಸ್ತರಿಸಿಸಬಹುದಾಗಿದೆ. ಮೂಲ ನೆಲೆ ಮತ್ತು ಸ್ಥಿರವಾಸ್ತವ್ಯ ಎಂಬುದರ ಹಂಗು ಇಲ್ಲದೇ ಅಲೆಯುವ ಅಲೆಮಾರಿ ಸ್ಥಿತಿಯ ಸಂದರ್ಭ ಇದಾಗಿದೆ. ಸಮುದಾಯಗಳ ಸ್ಥಿತಿಯು ಇದೇ ಆದರೂ ಕಥನ ಸಾಹಿತ್ಯದ ಪಾತ್ರಗಳು ಪದೇ ಪದೇ ಈ ಹಂಗನ್ನು ಉಳಿಸಿಕೊಳ್ಳಲು ಹೊರಾಡುತ್ತವೆ.

ಈ ಹಿನ್ನೆಲೆಯಲ್ಲಿಯೇ ಮಾಸ್ತಿಯವರ 'ಸುಬ್ಬಣ್ಣ'. ಚದುರಂಗರವರ 'ಹೆಜ್ಜಾಲ'. ಮತ್ತು ಎಸ್.ಎಲ್.ಭೈರಪ್ಪರವರ 'ಸಾರ್ಥ' ಕಾದಂಬರಿಗಳನ್ನು ಗಮನಿಸಬಹುದಾಗಿದೆ. ಈಗ ಮೊದಲಿಗೆ ಸುಬ್ಬಣ್ಣ ಕತೆಯಲ್ಲಿ ಬರುವ ಸುಬ್ಬಣ್ಣನ ಅಲೆಯುವಿಕೆ ಇಲ್ಲಿ ಪ್ರಮುಖವಾಗುತ್ತದೆ. ಸುಬ್ಬಣ್ಣ ಮಾಸ್ತಿಯವರ ನೀಳ್ಗತೆಯು ಹೌದು ಮತ್ತು ಅದೊಂದು ಕಿರು ಕಾದಂಬರಿಯು ಹೌದು ಕತೆಯ ಶೀರ್ಷಿಕೆಯೇ ಹೇಳುವಂತೆ ಕಥೆಯ ನಾಯಕ ಸುಬ್ಬಣ್ಣ, ತನ್ನ ಬದುಕಿನಲ್ಲಿ ನಡೆಯುವ ಹಲವಾರು ಘಟನೆಗಳ ಪ್ರಭಾವದಿಂದ ಒಂದು ಕಡೆ ನೆಲೆ ನಿಲ್ಲಲಾಗದೇ ತನ್ನ ಬದುಕಿನ ಕೊನೆಯವರೆಗೂ ಅಲೆಯುತ್ತ ಅಲೆಮಾರಿಯಾಗಿ ಸಾಯುವ ಸ್ಥಿತಿಯೇ ಈ ಕತೆಯ ಮುಖ್ಯ ಅಂಶ.

ಈ ಕತೆಯನ್ನು ಲೇಖಕರಿಗೆ ಒದಗಿಸಿದ್ದು "ದಿ.ನವರತ್ನ ರಾಮರಾಯರು. ತಮ್ಮ ಪರಿಚಯದ ಒಬ್ಬ ವೃದ್ಧಗಾಯಕನ ಕಡೆಯ ದಿನಗಳನ್ನು ಅವರು ತಮ್ಮ ಸ್ನೇಹಿತರಿಗೆ ಬಣ್ಣಿಸಿ ಹೇಳಿದ ವ್ಯಕ್ತಿಯೇ ಈ ಕತೆಯ ನಾಯಕ"(ಮಾವಿನಕೇರಿ ರಂಗನಾಥನ್, ೨೦೧೦, ಪು.೪೫) ಎಂದು ಗೌರೀಶ ಕಾಯ್ಕಿಣಿರವರು ಒಂದು ಕಡೆ ಹೇಳಿಕೊಳ್ಳುತ್ತಾರೆ. ಆದರೆ ಸುಬ್ಬಣ್ಣನ ಆರಂಭಿಕ ಕತೆಯು ಸೇರಿದಂತೆ ಕಲ್ಪನೆ ಮತ್ತು ವಾಸ್ತವಗಳೆರಡೂ ಸೇರಿ ನಿರ್ಮಾಣವಾದುದಾಗಿದೆ.

ಸುಬ್ಬಣ್ಣ ಮೈಸೂರಿನ ಶ್ರೀಮನ್ ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ. ಪುರಾಣದ ನಾರಾಯಣಶಾಸ್ತ್ರಿಗಳಿಗೆ ಒಬ್ಬನೇ ಮಗ. ಮತ್ತು ಮೂವರು ಹೆಣ್ಣು ಮಕ್ಕಳು, ಮಗನನ್ನು ದೊಡ್ಡ ಸಂಸ್ಕೃತ ಪಂಡಿತನನ್ನಾಗಿ ಮಾಡಬೇಕೆಂಬ ಆಸೆ. ಆದರೆ ಸುಬ್ಬಣ್ಣನಿಗೆ

ಸಂಗೀತದ ಹುಚ್ಚು. ರಾಜನ ಮುಂದೆ ಒಮ್ಮೆ ಹಾಡಿದ್ದಕ್ಕೆ ಶಹಭಾಷ್‌ಗಿರಿಯೂ ದೊರೆಯಿತು. ಜೊತೆಗೆ ಇನ್ನು ಚೆನ್ನಾಗಿ ಹಾಡುವುದನ್ನು ಕಲಿತರೆ ಖಿಲ್ಲತ್ತು ಕೊಡುತ್ತೇನೆಂಬ ರಾಜನ ಆಶ್ವಾಸನೆ ಸುಬ್ಬಣ್ಣನ ಸಂಗೀತದ ಹುಚ್ಚನ್ನು ಹೆಚ್ಚು ಮಾಡಿತ್ತು. ಜೊತೆಗೆ ಪಿಟೀಲು, ವೀಣೆ, ಮೃದಂಗಗಳನ್ನು ಕಲಿತು ಸಾಧಿಸಿದ್ದ 'ಇದರಿಂದ ಸಂಸ್ಕೃತವನ್ನು ಕಲಿಯಲಿಲ್ಲವಲ್ಲಾ' ಎಂಬ ತಂದೆಯ ಚಿಂತೆ ಆರಂಭವಾಗುತ್ತದೆ. ಇದರಿಂದ ಮನೆಯಲ್ಲಿ ತಂದೆ ಮಗನಿಗೆ ನಿತ್ಯವೂ ಜಗಳ ಉಂಟಾಗುತ್ತದೆ ಹೀಗಾಗಿ ತಂದೆಗೆ ಗೊತ್ತಿಲ್ಲದಂತೆ ಮೈಸೂರಿನಲ್ಲಿ ಸಂಗೀತ ಕಚೇರಿಗೆ ಹೋಗುವುದನ್ನು ಅಭ್ಯಾಸ ಮಾಡಿದ್ದ ಜೊತೆಗೆ ಅರಮನೆಯಲ್ಲಿ ವೇಶ್ಯೆಯಾಗಿದ್ದ ನೀಲಾಸಾನಿಯ ಪರಿಚಯದಿಂದ ಸುಬ್ಬಣ್ಣ ದಿನಾಲು ಸಂಗೀತ ಅಭ್ಯಾಸಕ್ಕೆ ಹೋಗುವುದು ಕಾಯಕವಾಗಿತ್ತು. ನೀಲಸಾನಿಗೆ ಸುಬ್ಬಣ್ಣನೆಂದರೆ ಸಾಕ್ಷಾತ್ ಶ್ರೀ ಕೃಷ್ಣಪರಮಾತ್ಮನನ್ನು ಕಂಡಂತೆಯೇ ಆಗುತ್ತಿತ್ತು.

"ಪುರಾಣದ ನಾರಾಯಣ ಶಾಸ್ತ್ರಿಗಳ ಮಗ ಸಂಗೀತ ಕುರಿತು ಕೇವಲ ಸುಬ್ಬಣ್ಣನಾದನೇ ವಿನಾಃ ಸಂಸ್ಕೃತ ಕಲಿತು ಸುಬ್ರಹ್ಮಣ್ಯಶಾಸ್ತ್ರಿಯಾಗಲೇ ಇಲ್ಲ"(ಶ್ರೀನಿವಾಸ, ೨೦೦೪, ಪು.೨) ಎಂಬ ಕೊರಗು ತಂದೆಗೆ ಮಗನ ಮೇಲಿನ ಅಸಮಾಧಾನವನ್ನು ಹೆಚ್ಚು ಮಾಡಿತ್ತು. ಆದರೆ, ತನ್ನ ಕರ್ತವ್ಯವೆಂಬಂತೆ ಮಗನಿಗೆ ಹುಡುಗಿಯನ್ನು ಹುಡುಕಿ ಮದುವೆ ಮಾಡಿದ್ದರು. ಅಂದರೆ ಶಾಸ್ತ್ರಿಗಳ ಮಗ ಶಾಸ್ತ್ರಿಯೇ ಆಗಬೇಕೆಂಬ ಆಸೆ ನಾರಾಯಣ ಶಾಸ್ತ್ರಿಗಳ ತಲೆಮಾರಿನ ಮೌಲ್ಯವಾದರೇ, ಸುಬ್ಬಣ್ಣನದು ತನ್ನ ಅಭಿರುಚಿಗೆ ತಕ್ಕಂತೆ ಸಂಗೀತಗಾರನಾಗಬೇಕೆಂಬ ಆಸೆ. ಈ ಭಿನ್ನ ತಲೆಮಾರಿನ ಮೌಲ್ಯಗಳನ್ನು ಲೇಖಕರು ಗುರುತಿಸುತ್ತಾರೆ.

ಮೇಲಿನ ವಾಕ್ಯಕ್ಕೆ ಟಿ.ಎಸ್.ನಾಗರತ್ನರವರ ಮಾತನ್ನು ಇಲ್ಲಿ ಸ್ಪಷ್ಟಪಡಿಸಬಹುದು. "ಈ ಸಂದರ್ಭದಲ್ಲಿ ತಂದೆ ಮಕ್ಕಳ ಎರಡು ತಲೆಮಾರುಗಳ ಜೀವನದ ಮೌಲ್ಯಗಳಲ್ಲಿದ್ದ ಅಂತರವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ ಮಾಸ್ತಿಯವರು"(ಮಾವಿನಕೇರಿ ರಂಗನಾಥನ್, ೨೦೧೦, ಪು.೪೭೯) ಎಂದು ಅಭಿಪ್ರಾಯಪಡುತ್ತಾರೆ. ಮದುವೆ ನಂತರ ಬದುಕು ಸುಬ್ಬಣ್ಣನಿಗೆ ಅನೇಕ ತಿರುವುಗಳನ್ನು ಕೊಡುತ್ತದೆ. ಮೊದಮೊದಲು ಹೆಂಡತಿ ಮಕ್ಕಳು ಸೇರಿದಂತೆ ಇಡೀ ಮನೆಯ ಜವಾಬ್ದಾರಿ ಹೊತ್ತದ್ದು ನಾರಾಯಣ ಶಾಸ್ತ್ರಿಗಳೇ. ಏನಾದರೂ ಹೇಳಿದರೆ ಸುಬ್ಬಣ್ಣ "ನೀವೇ ಮದುವೆ ಮಾಡಿದಿರಿ, ಸಾಕೀ ಸಾಕದಿದ್ದರೆ ಬಿಡಿ"(ಶ್ರೀನಿವಾಸ,೨೦೦೪, ಪು.೭) ಎಂದು ಹೇಳಿ ನೀಲಾಸಾನಿಯ ಮನೆಗೆ ಹೋಗುತ್ತಿದ್ದ. ಹೆಂಡತಿಯೆಂದರೆ ಅವನ ಪಾಲಿಗೆ ಶನಿಯಂತೆ ನೋಡುತ್ತಿದ್ದ.

ಸುಬ್ಬಣ್ಣನ ಹೆಂಡತಿ ಲಲಿತಳು ಸಹ ಮುಗ್ಧ ಹೆಣ್ಣು. ಯಾರು ಏನೇ ಕೆಲಸ ಹೇಳಿದರೂ ಅದನ್ನು ಅಚ್ಚುಕಟ್ಟಾಗಿ ಮಾಡುವ ಒಳ್ಳೆಯ ಸ್ವಭಾವದವಳು. ಆದರೆ, ಅತ್ತೆಗೆ ಮಾತ್ರ ಮನೆಯಲ್ಲಿನ ಎಲ್ಲಾ ಜಗಳಗಳಿಗೂ ಇವಳೇ ಕಾರಣವೆಂಬಂತೆ ಬೈಯುತ್ತಿದ್ದಳು. ಹೆಣ್ಣು ಮಕ್ಕಳ ಮಕ್ಕಳಿಗೆ

ಮಾತ್ರ ಮೊಸರು ಬಡಿಸಿ ಸುಬ್ಬಣ್ಣನ ಮಗನಿಗೆ ಮಾತ್ರ ನೀರುಮಜ್ಜಿಗೆ ಬಡಿಸಿದ ತಾಯಿಯ ವರ್ತನೆ ಸುಬ್ಬಣ್ಣನಿಗೆ ಮನ ಪರಿವರ್ತನೆಯಾಗುವಂತೆ ಮಾಡುತ್ತದೆ. ಇದೇ ಸಂದರ್ಭದಲ್ಲಿ ಮಹಾರಾಜರೂ ತೀರಿಕೊಂಡಿದ್ದು, ಶಾಸ್ತ್ರಿಗಳಿಗೆ ವರಮಾನ ಕಡಿಮೆಯಾಗಿ ಸಂಸಾರ ತೂಗಿಸುವುದು ಕಷ್ಟವಾದಾಗ ಸುಬ್ಬಣ್ಣ ಹೆಂಡತಿಯನ್ನು ತಾಯಿಯ ತಾತ್ಸಾರದಿಂದ ಪಾರು ಮಾಡಬೇಕು, ಮಗನನ್ನು ಚೆನ್ನಾಗಿ ಸಾಕಬೇಕು ಎಂದು ಮನೆಗೆ ಭಾರವಾಗದೇ ಬಾಳಬೇಕೆಂದು ಮನೆಯಲ್ಲೂ ಹೇಳದೇ ದಂಪತಿಗಳಿಬ್ಬರು ನಾಲ್ಕು ತಿಂಗಳ ಪ್ರಯಾಣದಿಂದ ಕಾಶಿಯನ್ನು ಸೇರುತ್ತಾರೆ. ಇಲ್ಲಿಂದ ಆರಂಭವಾದ ಸುಬ್ಬಣ್ಣನ ಹಂಗಿಲ್ಲದ ಅಲೆಮಾರಿತನ ಬದುಕಿನಲ್ಲಿ ನಾನಾ ತಿರುವುಗಳನ್ನು ಪಡೆದುಕೊಳ್ಳುತ್ತ ಹೋಗುತ್ತದೆ.

ಕಾಶಿಯಿಂದ ಒಂದು ತಿಂಗಳ ಬಳಿಕ ಕಲ್ಕತ್ತೆಗೆ ಬಂದು ಅಲ್ಲಿಯೇ ನೆಲಸಿ ಬದುಕಿಗೆ ನಾಲ್ಕಾರು ಮಕ್ಕಳಿಗೆ ಪಾಠಹೇಳಿ ಹಣ ಸಂಪಾದಿಸಿ ನೀಲಾಸನಿಯಿಂದ ಸಾಲವಾಗಿ ತೆಗೆದುಕೊಂಡಿದ್ದ ನೂರೈವತ್ತು ರೂಪಾಯಿಗಳನ್ನು ವಾಪಸ್ಸು ಮಾಡುತ್ತಾನೆ. ಇದು ಸುಬ್ಬಣ್ಣನ ಪ್ರಮಾಣಿಕತೆಯನ್ನು ತೋರಿಸುತ್ತದೆ. ಇವನ ನಂತರದ ಬದುಕು ಹರಿದ್ವಾರದ ಮೇಳಕ್ಕೆಂದು ಲಲತೆಯ ಒತ್ತಾಯದಿಂದ ಹೋಗಿದ್ದಾಗ ಅವನ ತಾಯಿ ತಂದೆಗಳೂ ಮೇಳಕ್ಕೆ ಬಂದಿರುವ ವಿಷಯ ಒಬ್ಬ ಪಂಡಿತನಿಂದ ತಿಳಿದು. ಆ ಹುಟ್ಟು ಇಲ್ಲವೆಂದು ಬಂದವನಿಗೆ ತಂದೆ ಇಲ್ಲ, ತಾಯಿಲ್ಲ ಎಂದು ತಿಳಿದು ಮರಳಿ ಕಲ್ಕತ್ತೆಗೆ ಹೊರಟು ಬಿಡುತ್ತಾನೆ. ಸುಬ್ಬಣ್ಣನಿಗೆ ಈ ನಡುವೆ ಒಂದು ಹೆಣ್ಣು ಮಗುವು ಸತ್ತು ಹೋಗಿತ್ತು. ಇನ್ನೊಬ್ಬ ಮಗಳು ಗಂಗಾ ನದಿಯಲ್ಲಿ ಸ್ನಾನ ಮಾಡುವಾಗ ಕೊಚ್ಚಿ ಹೋದಳು. ಇದಲ್ಲದೇ ಮಗ ಶೇಷನ ಸಾವು. ಈ ಎಲ್ಲಾ ಮಕ್ಕಳನ್ನು ಕಳೆದುಕೊಂಡ ದುಃಖದಲ್ಲಿ ಹೆಂಡತಿ ಲಲಿತೆಯ ಸಾವು ಸುಬ್ಬಣ್ಣನನ್ನು ಒಂಟಿಯನ್ನಾಗಿ ಮಾಡುತ್ತದೆ ಇದರಿಂದ ದುಃಖದಿಂದ ಬೆಂದುಹೋಗುತ್ತಾನೆ.

ಇದರಿಂದ ಸುಬ್ಬಣ್ಣನ ಸಾಂಸಾರಿಕ ಜೀವನ ಅಂತ್ಯವಾಗಿ ಆಧ್ಯಾತ್ಮಕ ಜೀವನದತ್ತ ವಾಲುತ್ತಾನೆ. ತನ್ನಲ್ಲಿದ್ದ ಪಿಟೀಲು, ಸ್ವಲ್ಪ ಹಣವನ್ನು ಬಿಟ್ಟು ಎಲ್ಲವನ್ನು ಬಡವರಿಗೆ ದಾನ ಮಾಡಿ ಕಲ್ಕತ್ತೆ ಬಿಟ್ಟು ಬೊಂಬಾಯಿ ಸೇರುತ್ತಾನೆ. "ಕಟ್ಟಿಕೊಂಡವರಿಗೆ ಬಿಟ್ಟ ದುಃಖ ತಪ್ಪಿದ್ದಲ್ಲ, ಬಿಟ್ಟೇ ಇರುವವನಿಗೆ ದುಃಖವೇ ಇಲ್ಲ"(ಅದೇ, ಪು.೭೧೫) ಎಂಬುದು ಅವನ ಮಂತ್ರವಾಗುತ್ತದೆ.

ಒಂದು ದಿನ ಸುಬ್ಬಣ್ಣನಿಗೆ ತಾನು ಪರದೇಶದಲ್ಲಿದ್ದು ಭಿಕಾರಿಯಾಗಿ ಸಾಯುವುದಕ್ಕಿಂತ ಊರಿಗೆ ವಾಪಸಾಗಬೇಕೆಂದು ಮೈಸೂರಿಗೆ ಬರುತ್ತಾನೆ. ಆದರೆ, ಅಷ್ಟೊತ್ತಿಗಾಗಲೇ ತೀರಿಹೋಗಿದ್ದ ತಂದೆ ತಾಯಿ, ಅಕ್ಕಂದಿರ ಸಾವಿನ ಸುದ್ದಿ ಕೇಳಿ ಜಗಲಿ ಮೇಲೆ ಕುಳಿತಾಗ ಮನೆ ಮಂದಿಗೆ ತಾನು "ಪರಸ್ಥಳ"ದವನು ಎಂದು ಹೇಳುತ್ತಾನೆ. ಗೌರೀಶ ಕಾಯ್ಕಿಣಿಯವರು ಹೇಳುವಂತೆ "ಹುಟ್ಟಿದ

ಬೆಳೆದ ಊರೆ ಪರಸ್ಥಳವೆನಿಸುವ ಮನಸ್ಥಿತಿ ಅವನದಾಗಿದೆ. ಊರು ಮಾತ್ರವಲ್ಲ ಈ ಪ್ರಪಂಚವೇ ಪರಸ್ಥಳ. ಪರಶಿವನ ಕೈಲಾಸವೇ ಸ್ವಸ್ಥಳವೆನ್ನಬೇಕೆಂದು ಅವನಿಗೆ ಅನಿಸುತ್ತದೆ"(ಮಾವಿನಕೇರಿ ರಂಗನಾಥನ್, ೨೦೧೦, ಪು.೪೭)

"ಬೆಳೆದ ಕಡೆ ನಾವೇನು ಬೇರುಬಿಟ್ಟಿರುತ್ತೇವೆಯೇ? ಜನರಲ್ಲಿ ಬಾಳಿ ಅವರ ಮನ್ನಣೆಯನ್ನು ಪಡೆದು ನಮ್ಮ ಜೀವನದ ಬೇರು, ಬೇರೆ ಜೀವನಕ್ಕೆ ಸೇರುವ ಹಾಗೆ, ಎಲ್ಲಿ ಮಾಡಿದರೆ ಅಲ್ಲಿ ಸ್ಥಳ. ತಿಳಿದ ಜನ ಇಲ್ಲದ ಮೇಲೆ ಹುಟ್ಟಿದ ಊರು ಪರಸ್ಥಳವೇ"(ಶ್ರೀನಿವಾಸ, ೨೦೦೪, ಪು.೩೩) ಎಂದು ಕೊಳ್ಳುತ್ತಾನೆ.

ಈ ಮಾತು ಅಲೆಮಾರಿಗಳಂತೆ ಒಂದು ನೆಲೆಯಿಲ್ಲದೇ ಬದುಕುತ್ತಿರುವವರಿಗೆ ಹೆಚ್ಚು ಅನ್ವಯಿಸುತ್ತದೆ. ಹಾಗಾಗಿ ಸುಬ್ಬಣ್ಣ ಸಂಸಾರ ಕಲಹಗಳಿಗೆ ಬೇಸತ್ತು ಹೊರಟ ಕುಟುಂಬ ಕಾಶಿ, ಕಲ್ಕತ್ತ, ಮುಂಬಯಿ ಸೇರಿದಂತೆ ನಾನಾ ಕಡೆ ತಂಗಿ ಕೊನೆಗೆ ಎಲ್ಲರನ್ನು ಕಳೆದುಕೊಂಡು ಪರದೇಶಿ ಯಂತೆ ಸಾಯುವುದಕ್ಕಿಂತ ಸ್ವಂತ ಊರಲ್ಲಿ, ಹುಟ್ಟಿದ ಭೂಮಿಯಲ್ಲಿ ಲೇಸು ಎಂದು ಬಂದವನಿಗೆ ತನ್ನವರು ಎಂದೆನಿಸಿಕೊಂಡವರು ಇಲ್ಲವೆಂದಾಗ ಹುಟ್ಟಿದ ಊರು ಪರಸ್ಥಳವಾಗಿ ಹೋಗುತ್ತದೆ.

ಅಂದು ರಾತ್ರಿ ತನ್ನವರು ಎಂದೆನಿಸಿಕೊಂಡವರೆಲ್ಲರನ್ನು ಕಳೆದುಕೊಂಡಾಗ ತೊರೆಯಪುರದ ದೇವಾಲಯದ ಮುಂದೆ ಮಲಗುತ್ತಾನೆ. ತನ್ನ ಮನಸ್ಸನ್ನು ಕೆಣಕಿ ಕೊಳಲು ಊದುವಂತೆ ಮಾಡಿದ ವೇಶ್ಯೆಯ ಮಗನನ್ನೆ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ತೊರೆಯಪುರದಲ್ಲಿ ತನ್ನ ಬದುಕನ್ನು ಮತ್ತೇ ಆರಂಭಿಸುತ್ತಾನೆ. ತೊರೆಯಪುರದ ಸುಬೇದಾರರ ಮಗಳು ಲಲತೆಗೆ ಹೇಳಿಕೊಡುತ್ತ ಯಾರಿಂದಲು ಹಣ ಪಡೆಯದೇ ತೊರೆಯಪುರದಲ್ಲಿ ಹದಿನಾರು ವರ್ಷ ಕಾಲ ಕಳೆಯುತ್ತಾನೆ. ಒಂದು ದಿನ ಅಲ್ಲಿಯೇ ಸಾಯುತ್ತಾನೆ.

ಹೀಗೆ ಸುಬ್ಬಣ್ಣನ ಅಲೆಮಾರಿಯ ಬದುಕು ಸಾಯುವವರೆಗೂ ಬದುಕಿನ ನಾನಾ ತಿರುವುಗಳಿಗೆ ಸಿಕ್ಕಿ ಸಿಹಿ, ಕಹಿ ಘಟನೆಗಳನ್ನು ಅನುಭವಿಸಿ ಸಂಸಾರದ ಸುಖ, ದುಃಖದ ಜೊತೆಗೆ ಆಧ್ಯಾತ್ಮಿಕ ಬದುಕನ್ನು ಹುಡುಕಿಕೊಂಡು ಅಲೆಯುತ್ತಾನೆ. "ಮನುಷ್ಯ ಆಯಸ್ಸನ್ನು ಎಲ್ಲಿ ಬೇಕಾದರೂ ಕಳೆಯಬಹುದು. ಅದಕ್ಕೆ ಅವನು ಕಷ್ಟ ಪಡಬೇಕಾದುದಿಲ್ಲ. ಕಷ್ಟವಿರುವುದಿಲ್ಲ. ಸರಿಯಾದ ರೀತಿಯನ್ನು ಹುಡುಕುವುದರಲ್ಲಿ"(ಮಾವಿನಕೇರಿ ರಂಗನಾಥನ್, ೨೦೧೦, ಪು.೩೯) ಎಂಬ ಮಾಸ್ತಿಯವರ ಮಾತನ್ನು ಗೌರೀಶ ಕಾಯ್ಕಿಣಿಯವರು ನೆನಪಿಸಿಕೊಳ್ಳುತ್ತಾರೆ.

ಒಟ್ಟಾರೆ ಸುಬ್ಬಣ್ಣನ ಕುಟುಂಬ ನೆಮ್ಮದಿ ಹುಡುಕಿಕೊಂಡು ವಲಸೆ ಹೋದರೂ ಆ ವಲಸೆ ಎಲ್ಲಿಯೂ ನೆಲೆ ನಿಲ್ಲದೇ ಅಲೆಯುವಂತಾಗುತ್ತದೆ. ಹೀಗೆ ಜಿ.ಎಸ್.ಅಮೂರ ಹೇಳುವಂತೆ "ತಾಯಿಯ

ಅನಾದರಕ್ಕೆ ಹಿಡಿದ ಹೆಂಡತಿಯ ಮೂಕ ವೇದನೆ, ಪ್ರೀತಿಯ ಮಗನ ತಾತ್ಸಾರ ತಡೆಯಲಾಗದೇ ಹೆಂಡತಿ ಮಕ್ಕಳೊಡನೆ ಮನೆಬಿಟ್ಟು ಅಲೆಮಾರಿಯಗುತ್ತಾನೆ"(ಅದೇ, ಪು.೪೮೭) ಈ ಅಲೆಮಾರಿತನ ದಲ್ಲೂ ಒಂದೇ ಕಡೆ ನೆಲೆಯಾಗಬೇಕೆಂಬ ಯಾವ ತುಡಿತಗಳು ಈ ಕತೆಯಲ್ಲಿ ಕಂಡುಬರುವುದಿಲ್ಲ. ಹಾಗಾಗಿ ಇವನ ಹಂಗಿಲ್ಲದ ಅಲೆಮಾರಿತನ ನಾನಾ ಕಾರಣಗಳಿಗೆ ಸಿಕ್ಕಿ ಬದುಕಿನಲ್ಲಿ ಅಲೆಯುವಂತೆ ಮಾಡುತ್ತದೆ, ಇವನ ಈ ಅಲೆಮಾರಿತನಕ್ಕೆ ಹಲವು ಕಾರಣಗಳು ಇದ್ದಗಲ್ಲೂ ಇವನು ಅಲೆಯುವ ಹಂತದಲ್ಲಿ ನಾನಾ ಕಷ್ಟ ಕಾರ್ಪಣ್ಯಗಳು ಇವನನ್ನು ಮುತ್ತಿಕೊಳ್ಳುತ್ತವೆ, ತನ್ನದೆಂಬ ಊರು, ಮನೆ, ತಂದೆ,ತಾಯಿ, ಬಂಧು ಬಳಗವೆಲ್ಲವಿದ್ದು ಪರಿಸ್ಥಿತಿಗೆ ಸಿಕ್ಕಿ ನಾನಾ ಕಡೆ ಅಲೆಯುವಂತಾಗುತ್ತದೆ, ಇಂಥ ಅಲೆಯುವಿಕೆಯಲ್ಲೂ ಸುಬ್ಬಣ್ಣ ಯಾವುದೋ ಒಂದು ಕಡೆ ನೆಲೆಯಾಗದೇ ಹಂಗಿಲ್ಲದೇ ಅಲೆಮಾರಿಯಂತೆ ತನ್ನ ಬದುಕು ಸವೆಸಿ ಸಾಯುವ ಸ್ಥಿತಿ ಇವನದಾಗುತ್ತದೆ. ಜಿ.ಎಸ್.ಅಮೂರುರವರು ಹೇಳುವಂತೆ "ತಾಯಿಯ ಅನಾದರ ಕೈಹಿಡಿದ ಹೆಂಡತಿಯ ಮೂಕ ವೇದನೆ, ಪ್ರೀತಿಯ ಮಗನ ತಾತ್ಸಾರ ತಡೆಯಲಾಗದೇ ಹೆಂಡತಿ ಮಕ್ಕಳೊಡನೆ ಮನೆಬಿಟ್ಟು ಅಲೆಮಾರಿಯಾಗುತ್ತಾನೆ"(ಅದೇ, ೧೯೭೨, ಪು.೪೮೭) ಈ ಅಲೆಮಾರಿತನದ ಜೀವನದಲ್ಲಾಗುವ ಸ್ಥಿತ್ಯಂತರಗಗಳೇ ಇಡೀ ಕತೆಯ ತಿರುಳಾಗುತ್ತದೆ.

ಎಸ್.ಎಸ್.ಭೈರಪ್ಪನವರ 'ಸಾರ್ಥ' ಕಾದಂಬರಿಯು ಸಾರ್ಥ ಜನರ ಅಲೆಮಾರಿತನದ ಬದುಕನ್ನು ಚಿತ್ರಿಸುತ್ತದೆ. ಇದೊಂದು ಕ್ರಿ.ಶ. ಎಂಟನೆಯ ಶತಮಾನದಲ್ಲಿ ಭರತಖಂಡದಲ್ಲಿ ನಡೆಯಿತೆಂದು ಕಲ್ಪಿಸಿಕೊಳ್ಳಬೇಕಾದ ಸಂಗತಿಗಳನ್ನಾಧರಿಸಿದ ಕಾದಂಬರಿ ಎಂದು ಲೇಖಕರು ಮುನ್ನುಡಿಯಲ್ಲಿ ಹೇಳಿದ್ದಾರೆ. ಇವರೇ ಹೇಳುವಂತೆ ಸಾರ್ಥ ಎಂದರೆ? ಕುದುರೆ, ಹೆಸರಗತ್ತೆ, ನೂರಾರು ಗಾಡಿಗಳ ಮೇಲೆ ವಾಣಿಜ್ಯ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತಾ ದೂರ ದೂರ ದೇಶಗಳಲ್ಲಿ ಸಂಚರಿಸುವುದನ್ನು ಆ ಕಾಲದಲ್ಲಿ ಸಾರ್ಥ ಎನ್ನುತ್ತಿದ್ದರು".(ಭೈರಪ್ಪ ಎಸ್.ಎಲ್. ೧೯೯೮, ಪು.೩) ಆಗಿನ ಕಾಲದಲ್ಲಿ ಸಾರ್ಥದ ಜನರು ರಾಜನ ಆದೇಶದ ಮೇರೆಗೆ ವ್ಯಾಪಾರಕ್ಕೆಂದು ಹೊರಟರೆ ತಿರುಗಿ ಬರುವ ಖಚಿತವಿಲ್ಲದೆ ದೂರದೂರುಗಳಿಗೆ ಅಲೆಯುತ್ತಿದ್ದ ಜನರ ಜೀವನ ಒಂದು ರೀತಿ ಅಲೆಮಾರಿಯಂತಾಗುತ್ತಿತ್ತು.

ಈ ಕಾದಂಬರಿಯ ನಾಯಕ ನಾಗಭಟ್ಟ ಸಾರ್ಥದ ಮರ್ಮವನ್ನು ತಿಳಿಯಲು ಮನೆ ಮಾರು ಹೆಂಡತಿಯನ್ನು ಬಿಟ್ಟು ಸಾರ್ಥದ ಜನರೊಂದಿಗೆ ಹೋಗುತ್ತಾನೆ. ಅಲ್ಲಿ ಹಲವಾರು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರವೃತ್ತಿಗಳಿಗೆ ಒಳಗಾಗಿ ಮತ್ತೇ ತಿರುಗಿ ಬಾರದೇ ಅಲ್ಲೇ ನೆಲೆಯಾಗುತ್ತಾನೆ. ನಾಗಭಟ್ಟ ದಕ್ಷಿಣದ ರಾಷ್ಟ್ರಕೂಟ ಹಾಗೂ ಉತ್ತರದ ಗೂರ್ಜರ ಪ್ರತಿಹಾರ ಸಾಮಾಜ್ಯಗಳ ನಡುವೆ ತಾರಾನಲೆ ಎಂಬ ಚಿಕ್ಕ ರಾಜ್ಯದಲ್ಲಿ ಅಮುರುಕನೆಂಬ ರಾಜನ ಮಂತ್ರಿಯಾಗಿ

ಸ್ನೇಹಿತನಾಗಿದ್ದವನು. ಸಾರ್ಥದ ಮರ್ಮವನ್ನು ತಿಳಿಯಲು ರಾಜನ ಮಾತಿನಂತೆ ಉನ್ನತ ಶಿಕ್ಷಣಕ್ಕಾಗಿ ಕಾಶಿಗೆ ಹೋಗುತ್ತಿನೆಂದು ಹೆಂಡತಿಗೂ ಸುಳ್ಳು ಹೇಳಿ ಸಾರ್ಥದವರ ಜೊತೆ ಹೊರಡುತ್ತಾನೆ.

ಇಲ್ಲಿಂದ ಆರಂಭವಾಗುವ ನಾಗಭಟ್ಟನ ಪಯಣ ನಾನಾ ತಿರುವುಗಳನ್ನು ಪಡೆದುಕೊಳ್ಳುತ್ತದೆ. ಮೊದಲಿಗೆ ಸಾರ್ಥದವರೊಂದಿಗೆ ಹೋಗಿ ಮಧುರೆ ತಲುಪುತ್ತಾನೆ. ಕಾರಣ ಹೀಗಾಗಲೇ ಕಾಶಿಗೆ ಉನ್ನತ ಶಿಕ್ಷಣಕ್ಕಾಗಿ ಹೋಗುತ್ತಿದ್ದೇನೆ ಎಂಬ ಸುಳ್ಳು ಹೇಳಿದ್ದರಿಂದ ಮಧುರೆ ಕಾಶಿಗೆ ಸಮೀಪವಿರುವ ಸ್ಥಳವಾಗಿದ್ದರಿಂದ ಸಾರ್ಥದ ಜನ ನಾಗಭಟ್ಟನನ್ನು ಅಲ್ಲಿಯೇ ಬಿಟ್ಟು ಹೋಗುತ್ತಾರೆ.

ನಾಗಭಟ್ಟ ಮುಂದೆ ಏನು ಮಾಡಬೇಕೆಂದು ತೋಚದಿದ್ದಾಗ ಅಲ್ಲಿದ್ದ ಬೌದ್ಧಧರ್ಮದ ಪ್ರಭಾವ ನಾಗಭಟ್ಟನನ್ನು ವಿಚಾರಶೀಲನನ್ನಾಗಿ ಮಾಡುತ್ತದೆ. ಬೌದ್ಧಧರ್ಮಕ್ಕೂ ಮತ್ತು ವೈದಿಕ ಧರ್ಮಕ್ಕೂ ಇದ್ದ ಸೂಕ್ಷ್ಮಗಳನ್ನು ತಿಳಿದುಕೊಳ್ಳುತ್ತಾನೆ. ಜೊತೆಗೆ ರಾಜಪ್ರತಿನಿಧಿಯಾದ ಜಯಸಿಂಹ ನೊಂದಿಗೆ ಸ್ನೇಹ ಬೆಳೆದು ಆತನ ಒತ್ತಾಯಕ್ಕೆ ಕೃಷ್ಣಾಷ್ಟಮಿಯ ನಿಮಿತ್ಯ ಏಳು ರಾತ್ರಿ ಕೃಷ್ಣ ಪಾತ್ರಧಾರಿಯಾಗಿ ಕೃಷ್ಣನ ವಿವಿಧ ಲೀಲೆಗಳ ನಾಟಕವಾಡುತ್ತಾನೆ. ಇದಾದ ನಂತರ ಆಕಸ್ಮಿಕವಾಗಿ ಬೇಟೆಯಾದ ವಾಮಚಾರಿಯ ಪರಿಚಯದಿಂದ ಬೇರೆ ವ್ಯಕ್ತಿಯ ಮನಸ್ಸಿನೊಳಗೆ ಪ್ರವೇಶ ಮಾಡುವದನ್ನು ಕಲಿಯುತ್ತಾನೆ. ಕೊನೆಗೆ ಎಲ್ಲದರ ಬಗ್ಗೆ ನಿರಾಸೆ ತಾಳಿ ವಜ್ರಾಸಾನದ ಮಾರ್ಗದರ್ಶನದಂತೆ ನಲಂದಾಕ್ಕೆ ಹೋಗಿ ಅಲ್ಲಿಂದ ಗಯಕ್ಕೆ ಹೋಗಿ ಸಾಧನೆ ಮಾಡಲು ಇಚ್ಛಿಸುತ್ತಾನೆ. ಕೊನೆಗೆ ಇವನಿಗೆ ಪಾತ್ರಧಾರಿಯಾಗಿದ್ದ ಕತೆಯ ನಾಯಕಿ ಚಂದ್ರಿಕಾಳೊಂದಿಗೆ ಪ್ರೇಮ ಉಂಟಾಗಿ ಮದುವೆಯಾಗಿ ಅಲ್ಲೆ ನೆಲೆಯಾಗುತ್ತಾನೆ. ಹೀಗೆ ನಾಗಭಟ್ಟನಿಗೆ ಒಂದು ನಿರ್ದಿಷ್ಟ ಕಾರಣಕ್ಕೆ ವಲಸೆ ಹೋರಟರು ಆ ಗುರಿ ಉದ್ದೇಶಗಳನ್ನು ಈಡೆರಿಸಿಕೊಳ್ಳುತ್ತಲೇ. ಅಲೆಮಾರಿಯಾಗು ತ್ತಾನೆ. ಮತ್ತೇ ತಿರುಗಿ ಬರುವ ಆಸೆಯಿಂದ ಹೊರಟಿದ್ದಾಗ ತಿಳಿಯುವ ರಾಜನ ಮೋಸ, ಹೆಂಡತಿ ರಾಜನ ಅನ್ಯೆತಿಕ ಸಂಬಂಧ, ನಾಗಭಟ್ಟನನ್ನು ಇಲ್ಲೇ ಇರುವಂತೆ ಮಾಡುತ್ತದೆ.

ಇದು ನಾಗಭಟ್ಟನ ಅಲೆಮಾರಿತನದ ಬದುಕು. ಇವನು ತುತ್ತು ಅನ್ನಕ್ಕಾಗಿ ಅಲೆಮಾರಿಯಾಗಿ ಬದುಕು ನಡೆಸಲಿಲ್ಲ. ತನ್ನದೇ ಆದ ಊರು, ಮನೆ, ಹೆಂಡತಿ ಇದ್ದರೂ ರಾಜನ ಆಜ್ಞೆ ಮೇರೆಗೆ ಹೊರಟ ಸಾರ್ಥದ ಮರ್ಮನನ್ನು ತಿಳಿಯುತ್ತ ಭಿನ್ನ ಸಂಸ್ಕಾರ, ಧರ್ಮ, ಆಚಾರಗಳಿಗೆ ಸೇರಿಕೊಂಡು ಹೆಂಡತಿ, ರಾಜನ ಮೋಸ ನಾಗಭಟ್ಟನನ್ನು ತಿರುಗಿ ಬರದಂತೆ ಮಾಡಿತ್ತು. ಚಿಕ್ಕ ವಯಸ್ಸಿನಿಂದಲೂ ದೇಶಸಂಚಾರ ಮಾಡಬೇಕೆಂಬ ಅಭಿಲಾಷೆ ಇದ್ದವನಿಗೆ ರಾಜನ ಆಜ್ಞೆ ಇನ್ನಷ್ಟು ಸ್ಫೂರ್ತಿ ತುಂಬುತ್ತದೆ. ಮೊದಮೊದಲು ಖುಷಿಯಿಂದ ಇದ್ದರೂ ಮಧುರೆಗೆ ಬಿಟ್ಟು ಹೋದ ನಂತರ ನಾಗಭಟ್ಟ ಒಂಟಿಯಾಗುತ್ತಾನೆ. "ನಾನು ಈ ನಗರದಲ್ಲಿ ಗೊತ್ತು ಗುರಿ ಇಲ್ಲದೇ ಇದ್ದೇನೆಂಬ ಭಾವನೆ

ತುಂಬಿಕೊಂಡು ದಕ್ಷಿಣಾಭಿಮುಖ ಹೋಗುವ ಯಾವುದಾದರೂ ಸಾರ್ಥ ಜನರೊಡನೆ ಊರಿಗೆ ಹಿಂತಿರುಗಲೇ? ಎಂಬ ಆಲೊಚನೆ ಬರತೊಡಗುತ್ತದೆ."(ಅದೇ, ಪು.೩೫).

ಒಟ್ಟಾರೆ ನಾಗಭಟ್ಟ ತನ್ನ ಇಚ್ಛೆಯಿಂದಲೇ ಹೊರಟ ದೇಶಸಂಚಾರ ಹಲವಾರು ಅನುಭವಗಳನ್ನು ಪಡೆದು ಅನೇಕ ಧರ್ಮಗಳ ಸಂಸ್ಕೃತಿ ಆಚಾರ-ವಿಚಾರಗಳಿಗೆ ಒಳಗಾಗಿ ಪಾತ್ರದಾರಿಯಾಗಿ, ವಾಮಚಾರಿಯಾಗಿ ತನ್ನ ಜೀವನ ಕಳೆಯುತ್ತಾನೆ. ಇವನು ಒಬ್ಬ ಬ್ರಾಹ್ಮಣನಾದ್ದ ರಿಂದ ಎಲ್ಲೂ ಸಹ ಬಡತನದ ಹಸಿವಿನ ಸಮಸ್ಯೆ ಕಾಣಿಸಿಕೊಳ್ಳುವುದಿಲ್ಲ. ಮಧುರೆವರೆಗೂ ಸಾರ್ಥದವರು ನೋಡಿಕೊಂಡರೆ ಮಧುರೆಯಲ್ಲಿ ಬುದ್ಧ, ವೈಷ್ಣವರು ನೋಡಿಕೊಳ್ಳುತ್ತಾರೆ. ಮುಂದೆ ಒಂದುಚೂರು ಒಂಟಿಯಾದ ಆಲೋಚನೆಗಳು ಕಾಣಿಸಿಕೊಂಡು ಅಲೆದರೂ ಅಚಾನಕ್ಕಾಗಿ ಸಿಗುವ ವಾಮಚಾರಿಯ ಮಾಟ, ಮಂತ್ರ, ಎಲ್ಲವನ್ನು ತಿಳಿದುಕೊಳ್ಳುತ್ತಾನೆ. ಕೊನೆಗೆ ಚಂದ್ರಿಕಳೊಂದಿಗೆ ಮದುವೆಯಾಗಿ ನೆಲೆಯಾಗುತ್ತಾನೆ. ಹೀಗೆ ಒಂಟಿ ಜೀವನದ ಅಲೆಮಾರಿತನದ ಬದುಕನ್ನು ಮತ್ತು ಅಂದಿನ ಚಾರಿತ್ರಿಕ ದಾಖಲೆಗಳನ್ನು ಕೃತಿ ಚಿತ್ರಿಸುತ್ತದೆ.

ಚದುರಂಗರವರ 'ಹೆಜ್ಜಾಲ' ಕಾದಂಬರಿಯ ನಾಯಕ ಕಾಲೂರ ಈತನ ಹೆಸರಿನಂತೆಯೇ ಇವನ ಜೀವನ. ಒಂದು ಕಡೆ ಕಾಲೂರದೇ ನಾನಾ ಪರಿಸ್ಥಿತಿಗೆ ಸಿಕ್ಕಿ ಅಲೆಮಾರಿಯಂತೆ ಬದುಕಿದ ಕಾಲೂರ ಬದುಕಿನ ಚಿತ್ರಣವೇ ಈ ಕತೆಯ ವಸ್ತು. ತನ್ನ ಸ್ನೇಹಿತ ಗಂಗೂರನ ಒತ್ತಾಯಕ್ಕೆ ಮಣಿದು ತನ್ನ ಬಾಲ್ಯದಿಂದ ಇಂದಿನವರೆಗೂ ನಡೆದ ತನ್ನ ಸಿಹಿ ಕಹಿ ನೆನಪುಗಳನ್ನು ಹಂಚಿಕೊಳ್ಳುವುದರ ಮೂಲಕ ತನ್ನ ಕತೆಯನ್ನು ಆರಂಭ ಮಾಡುತ್ತಾನೆ. ತನ್ನ ತಾಯಿಯೊಂದಿಗೆ ಆಟ, ಪಾಠಗಳೊಂದಿಗೆ ಬೆಳೆಯುತ್ತಿದ್ದ ಕಾಲೂರನಿಗೆ ಕಾಲನಂತರ ತಾನು ಹಾದರಕ್ಕೆ ಹುಟ್ಟಿದ ಮಗ ಮತ್ತು ನನ್ನ ತಂದೆ ಆ ಊರಿನ ಗೌಡ ನಾಗಪ್ಪನೇ ಎಂಬ ವಿಷಯ ತಿಳಿದು ಕಂಗಾಲಾಗುತ್ತಾನೆ, ಆದರೆ ತಂದೆ ಇದ್ದು ಯಾರು ಸಹಾಯವು ಇಲ್ಲದಂತೆ ಸಾಕಿ ಸಲುಹಿದ ತಾಯಿಯ ಮೇಲೆ ಪ್ರೀತಿ ಹುಟ್ಟುತ್ತದೆ. ಇದೇ ವಿಷಯ ಊರಿಗೆಲ್ಲ ತಿಳಿದು ಕಾಲೂರಿನಿಗೆ ನ್ಯಾಯ ಕೊಡಿಸಬೇಕೆಂದಾಗ ಗೌಡನ ತಾಯಿಯಾದ ಅಜ್ಜಮನೇ, ಆ ಊರಿನ ನ್ಯಾಯ ಹೇಳುತ್ತಿದ್ದರಿಂದ ತನ್ನ ಮಗನ ಪರವಾಗಿ ವಹಿಸಿಕೊಳ್ಳದೇ ನಾಗಪ್ಪನ ಮಕ್ಕಳು ಇಬ್ಬರಿಗೂ ಸಮಾನವಾಗಿ ಆಸ್ತಿ ವಹಿಸ ಬೇಕೆಂದಾಗ ನಾಗಪ್ಪನ ಹೆಂಡತಿ ಕೀಳುಜಾತಿಯ ಮಗನಿಗೆ ಆಸ್ತಿ ಸೇರುವುದನ್ನು ಸಹಿಸದೇ ಸಾಯಲು ಮುಂದಾದಾಗ ಅಜ್ಜಮ್ಮ, ತನ್ನ ತಾಯಿಯ ಆಸ್ತಿಯನ್ನೇ ಕಾಲೂರನಿಗೆ ಬರೆದುಕೊಟ್ಟು ತನ್ನ ನ್ಯಾಯ ನಿಷ್ಠೆಯನ್ನು ಪ್ರದರ್ಶಿಸುತ್ತಾಳೆ.

ಈ ಮೊದಲು ಹೇಗೋ ಕಾಲೂರು, ಕಾಲೂರಿನ ತಾಯಿ ಬಡತನದಲ್ಲಿ ಬದುಕುತ್ತಿದ್ದವರಿಗೆ ಅಜ್ಜಮ್ಮನ ತೀರ್ಮಾನದಿಂದ ಬಂದ ಜಮೀನಿನಿಂದ ಬೆಳೆ ಬೆಳೆದು ಸುಖವಾಗಿ ಇರುತ್ತಾರೆ. ಈ

ನಡುವೆ ತಾಯಿ ಕಾಲೂರನಿಗೆ ಬಡವರ ಮನೆಯ ಸ್ಯಾವಂತಿಯನ್ನು ತಂದು ಮದುವೆ ಮಾಡುತ್ತಾಳೆ. ಸ್ಯಾವಂತಿಯು ಅತ್ತೆಯನ್ನು ತಾಯಿಯಂತೆ ನೋಡಿಕೊಳ್ಳುವ ಸ್ವಭಾವದ ಹೆಣ್ಣು. ಆದರೂ ಕಾಲೂರನ ತಾಯಿ ಒಂದು ದಿನ ಕಾಯಿಲೆ ಬಿದ್ದು ತೀರಿ ಹೋಗುತ್ತಾಳೆ. ಇನ್ನು ಉಳಿದ ಗಂಡ ಹೆಂಡತಿ ಸ್ವಲ್ಪ ದಿನಗಳ ನಂತರ ತಾಯಿ ಸತ್ತ ದುಃಖವನ್ನು ಮರೆತು ಸುಖವಾಗಿ ಇರಬೇಕು ಎನ್ನುವಷ್ಟರಲ್ಲಿ ನಾಗಪ್ಪನ ಮೊದಲನೇ ಮಗ ರಾಜಣ್ಣ ಸೂಳೆಯ ಮಗನಿಗೆ ತನ್ನ ಅಜ್ಜಿಯ ಆಸ್ತಿ ಸೇರಿದ್ದನ್ನು ಸಹಿಸದೇ ಜಮೀನಿನ ಪತ್ರವನ್ನು ಕಳವು ಮಾಡಿಸುತ್ತಾನೆ. ಇದಾದ ಸ್ವಲ್ಪ ದಿನದಲ್ಲಿ ಗುಡಿಸಲಲ್ಲಿ ಬೆಂಕಿ ಹಚ್ಚಿಸುತ್ತಾನೆ. ಇದರಿಂದ ಕಾಲೂರನಿಗೆ ತಡೆಯಲಾಗದ ಸಿಟ್ಟು ಬಂದು ಕೊಂದು ಹಾಕುತ್ತೇನೆ ಎಂದು ಹೋರಟಾಗ ಸ್ಯಾವಂತಿ ಮತ್ತು ಮಗುವಿನ ಮುಖ ನೋಡಿ ಈ ಊರೇ ಬಿಟ್ಟು ಹೊರಡುತ್ತಾನೆ. ಇಲ್ಲಿಂದ ಆರಂಭವಾದ ಕಾಲೂರನ ಅಲೆಮಾರಿತನ ಸಾಯುವವರೆಗೂ ನಿಲ್ಲದೇ ನಾನಾ ಕಷ್ಟ ಕಾರ್ಪಣ್ಯಗಳಿಗೆ ಗುರಿಯಾಗುತ್ತಾನೆ.

'ನಮ್ಮಂತ ದುಡಿಯೊರಿಗೆ ಯಾವ ಊರಾದ್ರೇನು? ಬದುಕೋ ದಾರಿ ಸಿಕ್ಕೇ ಸಿಕ್ತದೆ"(ಚದುರಂಗ, ಪು.೧೬೯) ಎಂದು ಗಂಡನ ಕೈಯಿಂದ ಮಚ್ಚನ್ನು ಕಸಿದು, ಗಂಡನ ಕೋಪವನ್ನು ಕಡಿಮೆಗೊಳಿಸಿ ಕಾಲೂರನಿಗೆ ದಾರಿಯುದ್ದಕ್ಕೂ ಹೆಂಡತಿ ಮಾರ್ಗದರ್ಶಕಳಂತೆ ಎಲ್ಲಿಯೂ ದುಡಕದಂತೆ ಕಾದು ಬದುಕು ನಡೆಸುತ್ತಾಳೆ.

ಅಲ್ಲಿಯವರೆಗೂ ತಾಯಿಯ ಸ್ಥಾನದಲ್ಲಿ ನಿಂತು ನೋಡಿಕೊಳ್ಳುತ್ತಿದ್ದ ಮಾಯಾಮ್ಮ, ಪುಟ್ಟ ಬಸಮ್ಮನಂತಹ ಎಷ್ಟೋ ಜನರ ಕಣ್ಣಲ್ಲಿ ನೀರು ಹರಿದಾಡುತ್ತದೆ. "ಪುಟ್ಟುಬಸಮ್ಮನ ಪಾದ ಮುಟ್ಟಿ ನಮಸ್ಕಾರ ಮಾಡಿ, ನಾನು ನನ್ನ ಹೆಂಡ್ತಿ ಇಬ್ರೂ ಮಗು ಎತ್ಕೊಂಡು ಹುಟ್ಟೂರು ಬುಟ್ಟು ಅಲ್ಲಿಂದ ತಳ ತಳಾರವಾಗಿ ನಡೀತ ಹೋದೊ. ನನ್ನ ಮನಸ್ಸಿನೊಳಗೆ ಅವ್ವ ಅಜ್ಜಮ್ಮನೋರ ಜೊತೆಗೆ ಮಾಯಮ್ಮನೂ ತುಂಬ್ಕೊಂಡಿದ್ದು"(ಅದೇ, ಪು.೧೭೦) ಎಂದು ಗಂಗೂರನೊಂದಿಗೆ ಕಾಲೂರ ತನ್ನ ಹಳೆಯ ನೆನಪಿನ ದುಃಖವನ್ನು ತೋಡಿಕೊಳ್ಳುತ್ತಾನೆ.

ನಂದು ಒಂದೇ ಗುರಿ ದಾರಿಲಿ ಸಿಕ್ಕೊ ಯಾವುದಾದರೂ ತ್ವಾಟದಲ್ಲಿ ಕೆಲ್ಸಕ್ಕೆ ಸೇರೋದು ಎಂದು ಮೊದಲೇ ತೀರ್ಮಾನಿಸಿ ಬಂದವನಿಗೆ ದಾರಿಯುದ್ದಕ್ಕೂ ಕಂಪಲಾಪುರ, ಪಿರಿಯಾಪಟ್ಟಣ ದಂತಹ ಯಾವ ಊರುಗಳಲ್ಲಿಯೂ ಕೆಲಸ ಸಿಗದೆ ಅಲೆಯುತ್ತಾನೆ, ಏಕೆಂದರೆ ತ್ವಾಟಗಳನ್ನು ಸ್ವಂತ ಯಜಮಾನರೆ ನೋಡಿಕೊಳ್ಳುತ್ತಿದ್ದರೂ ಬೇಕಾದಾಗ ಕೂಲಿ ಆಳುಗಳನ್ನು ನೇಮಿಸ್ಕೊತ ಇದ್ದರು.

ತನ್ನ ನಡಿಗೆಯಲ್ಲೂ ತನ್ನ ತ್ವಾಟ ಕಳೆದುಕೊಂಡ ಚಿಂತೆಯಲ್ಲೇ ಇದ್ದವನಿಗೆ ಸ್ಯಾವಂತಿ "ಈಗ ನಿಂಗೆ ತ್ವಾಟದ್ದೇ ಒಂದು ಗೀಳು ಬ್ಯಾರೆ ಹಿಡ್ಕೊಂಡು ಬುಟ್ಟವೆ ತ್ವಾಟವೊ, ಹೊಲವೊ,

ಸದ್ಯಕ್ಕೆ ಯಾವ್ದೊ ಒಂದು ಕೆಲ್ಸ ಹಿಡ್ಡು ಗಮ್ಮನೆ ನಮ್ಮ ಜೀವನ ಸಾಕೋದು ನೋಡು"(ಅದೇ, ಪು.೧೩) ಎಂದಾಗ ತ್ವಾಟಾನೇ ಮಾಡ್ಬೇಕು ಅನ್ನೋ ಹಟ ಬಿಟ್ಟು ಯಾವ ಕೆಲ್ಸ ಸಿಕ್ಕಿದ್ರೂ ಸರಿ ಅದ್ನೇ ಮಾಡೋದು ಎಂದು ತೀರ್ಮಾನ ಮಾಡಿಕೊಳ್ಳುತ್ತಾನೆ.

ಹೀಗೆ ದಾರಿಯಲ್ಲಿ ಸಿಕ್ಕ ವ್ಯಕ್ತಿಯ ಪರಿಚಯದಿಂದ ಬೆಟ್ಟೂದೂರಿನ ಕೂಸಪ್ಪನೋರು ಕೆಲ್ಸಕ್ಕೆ ಸೇರಿಕೊಳ್ಳುತ್ತಾರೆ. ಮನೆಯಲ್ಲಿ ಕೂಸಪ್ಪನೋರ ತಂಗಿ ಬಾಯಮ್ಮದದೇ ಕಾರುಬಾರು ಸ್ಯಾವಂತಿ ತನ್ನ ಮಗನಿಗೆ ಹಚ್ಚಕ್ಕೆ ಅಂತ ಹರಳೆ ಎಣ್ಣೆ ಕೇಳಿದರೆ "ಮಗಾನೂ ಕಾಣೆ, ಗಿಗಾನು ಕಾಣೆ, ಈಗ್ಲೆ ಇಸ್ಟು ಆಸೆ ಪಡೋಳು ಮುಂದಕೆ ಇನ್ನೂ ಏನೇನು ಬೇಕು ಅಂದಿಯೋ? ಅದೆಲ್ಲ ನನ್ನ ತಾವು ನಡೆಯಕ್ಕಿಲ್ಲ ನೀನಾಗ್ಲಿ, ನಿನ್ನ ಗಂಡನ ಆಗ್ಲಿ ಯಾವುದನ್ನೂ ಬಾಯಿಬುಟ್ಟು ಕೇಳಕೂಡ್ದು. ನಾನು ಕೊಟ್ಟಿದ್ನ ಈಸ್ಕೊಂಡು ತೆಪ್ಪಗೆ ಕೆಲ್ಸ ಮಾಡ್ಕೊಂಡಿರಬೇಕು."(ಅದೇ, ಪು.೧೫) ಎಂದು ಹೇಳುತ್ತಾಳೆ.

ಹೀಗೆ ಇಂತಹ ನಿಷ್ಠುರ ಮಾತುಗಳನ್ನು ಸಹಿಸಿಕೊಂಡು ಬದುಕು ಸವೆಸುತ್ತಿದ್ದವರಿಗೆ ಒಂದು ಸಾರಿ ಸ್ಯಾವಂತಿ ಕುರಿ ಮೇಯಿಸಲು ಹೋದಾಗ ಬಾಯಮ್ಮನ ಮುದ್ದಿನ ಕುರಿಯೇ ಹಾವಿನ ಬಾಯಿಗೆ ಆಹುತಿಯಾಗುತ್ತದೆ. ಇದರಿಂದ ಬಾಯಮ್ಮನ ಆಕ್ರೋಶ ಹೆಚ್ಚಾಗಿ "ನಂಗೆ ಅದೇ ಕುರಿಮರಿ ತಂದ್ಕೊಡು, ಇಲ್ಲ ಅದಕ್ಕೆ ಸಮ ಹಣ ಕಟ್ಕೊಡು ಇಲ್ಲ ಅದರ ಹಣ ತೀರೋಗಂಟ ಗಂಡ ನೀನು ಇಬ್ರೂವೇ ನಮ್ಮ ಹಟ್ಟೀಲಿ ಜೀತ ಮಾಡ್ಕೊಂಡು ಬಿದ್ದಿರಿ ಎಂದು ಆಡಿದ ಮಾತಿಗೆ ಸ್ಯಾವಂತಿ ನಾವೂ ಅವರ ಹಟ್ಟೀಲಿ ಉಂಡೊ, ಅಶ್ರಯ ಪಡ್ದೊ ಅದ್ರೆ ರುಣದ ಹತ್ತಸ್ಟನ್ನ ಗೇದು ತೀರಸಿಲ್ವಾ? ನಮ್ಮ ದುಡಿಮೆಯಿಂದ ಅವಳಿಗೆ ಹತ್ತು ಕುರಿ ತಕ್ಕೊಳೋ ಅಷ್ಟು ಸಂಪಾದ್ನೆ ಆಗಿದೆ. ಒಂದು ಕುರಿಮರಿ ಕಳೆದದ್ದು ಯಾವ ಲೆಕ್ಕ?"(ಅದೇ, ಪು.೧೭) ಎಂದು ಸ್ಯಾವಂತಿ ಗಂಡನನ್ನು ಕರೆದುಕೊಂಡು ಬೆಳಕು ಅರಿಯುವ ಮುಂಚೆ ಎದ್ದು ಆ ಮನೆವರಿಗೆ ಹೇಳದೇ ಸ್ವಲ್ಪ ದೂರದಲ್ಲಿ ಇದ್ದ ಮಠದತ್ತ ಸಾಗುತ್ತಾರೆ. ಈ ಸಂದರ್ಭವನ್ನು ನೋಡಿದಾಗ ಸ್ಯಾವಂತಿ, ಕಾಲೂರನಿಗಿಂತ ವಿಚಾರವಂತಳಾಗಿದ್ದಳೇ ಎಂಬುದು ಅರ್ಥವಾಗುತ್ತದೆ. ಬಾಯಮ್ಮನ ಮಾತುಗಳಿಂದ ನೊಂದರು ನೆಮ್ಮದಿಯನ್ನು ಕಳೆದುಕೊಂಡು ಬದುಕುವುದಕ್ಕಿಂತ ಬೇರೆ ಕಡೆ ಹೋಗಿ ನೆಮ್ಮದಿ ಕಂಡುಕೊಳ್ಳಬೇಕೆಂದು ತಮ್ಮ ದಾರಿಯನ್ನು ಮುಂದುವರಿಸುತ್ತಾರೆ.

ಇವರು ನಂತರದ ಬದುಕಿನ ದಾರಿ ಬೆಟ್ಟದಪುರದ ಸ್ವಾಮಿಗಳ ಮಠ ದತ್ತ ಸಾಗುತ್ತದೆ, ತೋಟದಲ್ಲಿ ಏನಾದರೂ ಕೆಲಸ ಕೇಳಲು ಬಂದವರಿಗೆ ಕೆಲಸ ಖಾಲಿ ಇಲ್ಲ ಎಂಬ ಉತ್ತರ ದೊರೆತರೂ ಸ್ವಾಮಿಯ ಬರುವಿಕೆಗಾಗಿ ಹತ್ತು ದಿನ ಕಾದರೂ ಸ್ವಾಮಿಜೀ ಬರದಿದ್ದರಿಂದ ಅಲ್ಲಿಂದ ಮತ್ತೇ ತಮ್ಮ ಪಯಣ ಬೇರೆ ಕಡೆಗೆ ಸಾಗಿಸುತ್ತಾರೆ. ದಾರಿಯ ಮಧ್ಯೆ ಎಲ್ಲಿ ಹೋಗಬೇಕೆಂಬ

ಗುರಿ ಗೊತ್ತಿರದಿದ್ದರೂ ಅಲ್ಲಿ ಅಲ್ಲಿ ಸ್ಯಾವಂತಿ ಕಾಲೂರ ತಮಾಷೆ, ಪ್ರೀತಿಯ ಮಾತುಗಳು ಕೂಡ ಬಡತನದ ನೋವಿನಲ್ಲೂ ಸಹ ಸಂತೋಷವನ್ನು ಕಾಣುತ್ತಿದ್ದರು. ಉದಾಹರಣೆಗೆ ಕೆರೇಲಿ ತಾವರೆ ಹೂವಿನ ಮುಡಿಯುವ ಆಸೆಯನ್ನು ಸ್ಯಾವಂತಿ ಬಯಸುವುದು, ಕಾಲೂರ ಎಲ್ಲ ಸಮಸ್ಯೆಗಳನ್ನು ಮರೆತು ತನ್ನ ಚಿಕ್ಕ ವಯಸ್ಸಿನಲ್ಲಿ ಊದುತ್ತಿದ್ದ ರಂಗಮಾಲುವನ್ನು ಊದಿ ಸಂತೋಷಪಡುವಂತಹ ಸಂದರ್ಭಗಳನ್ನು ಇಲ್ಲಿ ನೋಡಬಹುದು.

ಈಗೇ ದಾರಿ ಸಾಗಿಸುತ್ತ ರಾಮನಾತಪುರ ತಲುಪಿ ಅಲ್ಲಿ ಹಸಿವು, ನಿದ್ದೆ ಎರಡರಿಂದಲೂ ಮುಕ್ತಿ ದೊರೆಯದೆ, ಒಂದು ಮನೆಯ ಜಗಲಿ ಮೇಲೆ ಮಲಗಿದ್ದಾಗ ಆ ಮನೆಯ ಯಜಮಾನನ ಹತ್ತಿರ ತನ್ನ ಹಿಂದಿನ ಕತೆಯನ್ನು ತಿಳಿಸಿ ಹೇಳುತ್ತಾನೆ. ಸದ್ಯದ ಮಟ್ಟಿಗೆ ತಮ್ಮದೇ ಆದ ದಿನಸಿ ಅಂಗಡಿಯಲ್ಲಿ ಕೆಲಸ ಕೊಟ್ಟು, ಜೊತೆಗೆ ಬೇರೆ ಕಡೆ ಕೆಲಸ ಕೊಡಿಸುವ ಭರವಸೆಯನ್ನು ಕೊಡುತ್ತಾನೆ, ಅದೇ ಸಮಯಕ್ಕೆ ಊರು ಹಬ್ಬ ಬಂದಿದ್ದರಿಂದ ಮನೆಯ ಕೆಲಸವನ್ನು ಸ್ಯಾವಂತಿ ಮಾಡಿದರೆ, ಅಂಗಡಿಯ ಗಿರಾಕಿಗಳನ್ನು ಕಾಲೂರ ನಿಭಾಯಿಸಿದ. ಅಷ್ಟೊತ್ತಿಗೆ ಕಾಲೂರನ ನಿಯತ್ತಿನ ಕೆಲಸವನ್ನು ಪರೀಕ್ಷಿಸಿ, ಶ್ರೀನಿವಾಸಪುರದ ಅಯ್ಯನೋರ ತ್ವಾಟದ ಕೆಲಸಕ್ಕೆ ನೇಮಿಸಿಕೊಳ್ಳುತ್ತಾರೆ. ಜೊತೆಗೆ ಇಷ್ಟು ದಿನ ಮನೆಯಲ್ಲಿ ಅಂಗಡಿಯಲ್ಲಿ ದುಡಿದ ದಂಪತಿಗಳಿಗೆ ಸ್ಯಾವಂತಿಗೆ ದಿನಕ್ಕೆ ಎರಡಾಣೆ ಹಂಗೆ ಹನ್ನೆರಡು ಆಣೆ, ಕಾಲೂರನಿಗೆ ದಿನಕ್ಕೆ ನಾಕಾಣೆ ಹಂಗೆ ವಾರಕ್ಕೆ ಒಂದು ಮುಕ್ಕಾಲು ರೂಪಾಯಿ ಕೊಟ್ಟು ಕಳುಹಿಸುತ್ತಾರೆ.

ಇಲ್ಲಿ ಶೆಟ್ಟಿ ಕಾಲೂರನ ನಿಯತ್ತನ್ನು ಪರೀಕ್ಷಿಸುವ ನೆಪದಲ್ಲಿ ಹಬ್ಬಕ್ಕೆಂದು ಬಂದ ಅಂಗಡಿಯ ಗಿರಾಕಿಗಳಿಗೆ ಚಾಕರಿ ಮಾಡಿಸಿಕೊಂಡು ಕಳುಹಿಸುತ್ತಾನೆ. ಆದರೆ "ಯಾರ ಹತ್ರ ಸೇರಿಸ್ಬೇಕು ಅನ್ನೋದು ತಿಳಿಯೋಗಂಟ ನೀನು ನಮ್ಮ ಅಂಗಡೀಲಿ ಕೆಲ್ಸ ಮಾಡ್ತ ಇರು, ನಿನ್ನ ಹೆಂಡ್ತಿ ನಮ್ಮ ಮನೆ ಕೆಲ್ಸ ಮಾಡಿಕೊಂಡಿರ್ಲಿ ಅಂದ್ರು. ಆ ಕ್ಷಣಕ್ಕೆ ನನ್ನ ಕಷ್ಟದ ಹೊತ್ತಲ್ಲಿ ಸೆಟ್ಟರು ದ್ಯಾವರಂಗೆ ಕಂಡ್ರು ಆಮ್ಯಾಲೆ ಬತ್ತಾ ಬತ್ತಾ ಗೋತ್ತಾಯ್ತು. ರಥೋತ್ಸವದ ಕಾಲ ಮನೆ ತುಂಬ ಜನ, ಹೆಣ್ಣುಮಕ್ಕಳು, ಅಳಿಯಂದಿರು ನೆಂಟರು ಇದ್ದರು ಎಲ್ಲಾ ತುಂಬೋಗಿದ್ರು. ಅವರ ಬಟ್ಟೆ ಒಗಿಯೋದು, ಪಾತ್ರೆ ಪಗಡ ತಿಕ್ಕೋದು, ಒಂದಾ, ಎರಡಾ, ಎಷ್ಟು ಮಾಡಿದ್ರೂ ಮುಗಿಯದ ಕೆಲಸ್ಸ. ಕೆಲಸಕ್ಕೆ ಅಂತ ನಮ್ಮ ಉಳಿಸ್ಕೊಂಡ ಸೆಟ್ಟರ ಜಾಣತನ ಆಮ್ಯಾಲೆ ಗೊತ್ತಾಯ್ತು"(ಅದೇ, ಪು.೧೪೯) ಎನ್ನುವ ಮಾತು ಬಡವರ ಅಸಹಾಯಕತೆಯನ್ನು ಶ್ರೀಮಂತ ವರ್ಗ ಬಳಸಿಕೊಳ್ಳುವ ರೀತಿಯನ್ನು ಇಲ್ಲಿ ಗಮನಿಸಬಹುದು.

ಆದರೆ ಕೊನೆಯಲ್ಲಿ ಕಾಲೂರ "ಆದ್ರೂ ಸೆಟ್ಟರ ಏರ್ಪಾಡು ನಮಗೆ ಸೊಲ್ಪ ಕಾಲ ಉಸಿರು ಹುಯ್ಯೊತೊಳಕ್ಕೆ ದಾರಿ ಆಯ್ತು"(ಅದೇ, ಪು.೧೪೯)ಎನ್ನುವ ಮಾತು ಕಾಲೂರನ ಕುಟುಂಬಕ್ಕೆ

ಸ್ವಲ್ಪ ಮಟ್ಟಿನ ನೆಲೆ ಅಥವಾ ಸಹಾಯ ದೊರಕಿದ್ದನ್ನು ನೆನಪಿಸಿಕೊಳ್ಳುತ್ತಾನೆ. ರಥೋತ್ಸವಕ್ಕೆ ಸೆಟ್ಟರು ತಮಮ್ ಕೂಲಿ ಕೊಟ್ಟು ಇವತ್ತ ಒಂದಿನ ಖುಷಿಯಾಗ ಇರಿ ಎಂದು ಕಳಿಸಿದಾಗ ಕಾಲೂರ, ಸ್ಯಾವಂತಿ ಮಗ ಜಾತ್ರೆಯಲ್ಲಿ ಸುತ್ತಾಡಿ ಖುಷಿ ಪಟ್ಟಿದ್ದರು.

ಒಂದು ದಿನ ಸೆಟ್ಟರು ಹೇಳಿದಂತೆ ಕಾಲೂರನಿಗೆ ಶ್ರೀನಿವಾಸಪುರದ ಚೆನ್ನಕೇಶವಯ್ಯನೋರ ತ್ವಾಟದ ಕೆಲಸಕ್ಕೆ ಸೇರಿಸಿ, ಬಂದಿದ್ದರು. ಅಲ್ಲಿ ಇವರಿಗಿದ್ದ ಕೆಲಸವೆಂದರೆ ಜಾತ್ರೆಯಲ್ಲಿ ನಡೆಯುವ ಹೋರಿಗಳ ನಡುವೆ ನಡೆಯುವ ಬಹುಮಾನ ಸ್ಪರ್ಧೆಯಲ್ಲಿ ಜಯಗಳಿಸುವಂತೆ ಹೋರಿಗಳನ್ನು ನೋಡಿಕೊಳ್ಳುವುದು. ಹೋದ ಸಾರಿಯು ಸಹ ಇವರದೇ ಹೋರಿ ಬಹುಮಾನ ಗಳಿಸಿದ್ದು, ಅಯ್ಯನೋರಿಗೆ ಇನ್ನಷ್ಟು ಸ್ಫೂರ್ತಿಯನ್ನು ತುಂಬಿತ್ತು.

ಈ ಕೆಲಸವನ್ನು ಒಡೆಯ ಹೇಳಿದ್ದಕ್ಕಿಂತ ಹೆಚ್ಚಿನದಾಗೆ ಚಾಕರಿ ಮಾಡಿ ಹೋರಿಗಳನ್ನು ಗೆಲ್ಲುವಾಗೆ ಕಾಲೂರ, ಸ್ಯಾವಂತಿ ಮಾಡುತ್ತಾರೆ. ಕೊನೆಗೆ ಅಯ್ಯನೋರಿಂದ "ನಾನು ಕಾಲ್ನಲ್ಲಿ ತೋರಿಸಿದ್ನ ಅವ್ರು ತಲೇಲಿ ಮಾಡ್ತಾರೆ"(ಅದೇ, ಪು.೧೯೯) ಎಂಬ ಹೊಗಳಿಕೆಯನ್ನು ಕೂಡ ಪಡೆದುಕೊಳ್ಳುತ್ತಾರೆ. ಇವರ ನಂತರದ ಬದುಕು ಸೆಟ್ಟರು ಹೇಳಿದಂತೆ ಶ್ರೀನಿವಾಸಪುರದ ಚೆನ್ನಕೇಶವಯ್ಯನೋರ ಮನೆಯಲ್ಲಿ ನಡೆಯುತ್ತದೆ. ಚೆನ್ನಕೇಶವಯ್ಯ ಹೆಂಡತಿ ಸಾವಿತ್ರಿಗಿರುವ ಮೂರು ಮಕ್ಕಳಲ್ಲಿ ಹಿರಿಯ ಮಗ ಹಾವು ಕಡಿದು ಸತ್ತರೆ ಎರಡನೆ ಮಗ ಓದಿ ಬೊಂಬಾಯಿಯಲ್ಲಿ ಅಪ್ಪ ಅಮ್ಮನಿಗೂ ಹೇಳದೆ ಒಬ್ಬ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಿ ಉದ್ಯೋಗ ಮಾಡುತ್ತ ಅಲ್ಲಿಯೇ ನೆಲೆಯಾಗಿದ್ದ. ಮೂರನೆ ಮಗಳು ಚಂಪನೂ ಹೆರಿಗೆಯಲ್ಲಿ ತೀರಿಹೋಗಿ, ಹುಟ್ಟಿದ ಕೈಕಾಲು ಸ್ವಾಧೀನ ಇಲ್ಲದ ಹೆಣ್ಣು ಮಗುವನ್ನು ಈ ದಂಪತಿಗಳು ನೋಡಿಕೊಳ್ಳುತ್ತಿದ್ದರು. ಈ ಹುಡುಗಿಯನ್ನು ನೋಡಿಕೊಳ್ಳುವ ಕೆಲಸಕ್ಕೆ ಸ್ಯಾವಂತಿ ಕಾಲೂರನನ್ನು ಸೆಟ್ಟರು ನೇಮಿಸಿದ್ದರು.

"ಇವರು ಬಡವರು ಎಲ್ಲಿಂದಲೋ ಕೆಲ್ಸ ಹುಡುಕ್ಕೊಂಡು ಬಂದವರೆ, ಇವರಿಗೆ ನಾನೇ ಅನ್ನೋರು ಯಾರು ಇಲ್ಲ. ನಾನು ಜಾತ್ರೆ ಕಾಲದಲ್ಲಿ ನಮ್ಮ ಮನೇಲಿ ಇಟ್ಕೊಂಡು ಪರೀಕ್ಷೆ ಮಾಡಿವ್ನಿ ಎಂತ ಕೆಲ್ಸ ಕೊಟ್ರು ಗೊಣಗದೇ ಮಾಡ್ತಾರೆ. ನಿಮ್ಮ ಮನೆಗೆ ಸರಿಹೊಂದಬೌದು ಅಂತ ಕರ್ಕೊಂಡು ಬಂದೆ"(ಅದೇ, ಪು.೧೯೭)ಎಂದು ಶೆಟ್ಟರು ಬಿಟ್ಟು ಹೋಗುತ್ತಾರೆ.

ಹೀಗೆ ಸ್ಯಾವಂತಿಗೆ ಆ ಹುಡುಗಿಯ ಚಾಕರಿ, ಕಾಲೂರನಿಗೆ ತ್ವಾಟದ ಕೆಲಸ ಒಂದು ಲೆಕ್ಕದಲ್ಲಿ ಕಾಲೂರ ಬಯಸಿದಂತೆ ತ್ವಾಟವೇ ಸಿಕ್ಕಿತು. ಹೇಗೋ ಸ್ವಾವಂತಿ ಆ ಹೆಣ್ಣು ಕೊಡುವ ಕಾಟ, ಕಚ್ಚಿದ ಗಾಯ ಎಲ್ಲಾ ಸಹಿಸಿಕೊಂಡು ಹೋದಳು. ಇನ್ನೇನು ಎಲ್ಲಾ ಹೊಂದಿಕೊಂಡು "ನಮ್ಮ ಗುಡಿಸಲು ಬೆಂದೋಗಿ ನಮ್ಮ ಆಲದೂರು ಬಿಟ್ಟು ಬುಟ್ಟು ಬಂದಾಗ್ನಿಂದ ನಾವು ಯಾರ ತಾವೂ ಇಷ್ಟು ನೆಮ್ಮದಿಯಿಂದ ಇರಲಿಲ್ಲ"(ಅದೇ, ಪು.೨೦೨) ಎನ್ನುವಷ್ಟರಲ್ಲಿ ಮತ್ತೆ ಆ ಹುಡುಗಿಗೆ

ಹುಚ್ಚು ಹಿಡಿದು ಸತ್ತೇ ಹೋಗುತ್ತದೆ. ಇದೇ ಚಿಂತೆಯಲ್ಲಿ ಆ ಹುಡುಗಿಯ ತಾಯಿ, ತಂದೆ ತೀರಿ ಹೋದರು. ಅಯ್ಯನೋರು ಸಾಯುವ ಮುನ್ನ ಮಗಳ ಕಾಟವನ್ನು ಸಹಿಸಿಕೊಂಡು ನೋಡಿಕೊಂಡಿದ್ದಕ್ಕಾಗಿ ಕಾಲೂರನಿಗೆ ಒಂದು ಎಕರೆ ಹೊಲ ಕೊಡಬೇಕು ಎನ್ನುವಷ್ಟರಲ್ಲಿ ಅಯ್ಯನೂರು ತೀರಿ ಹೋಗುತ್ತಾನೆ. ಇವರೆಲ್ಲರ ಕಾಲ ನಂತರ ಉಳಿದ ಬಾಂಬೆಯಲ್ಲಿದ್ದ ಮಗ ಸೊಸೆ ಬಂದು ಈ ಆಸ್ತಿಯನ್ನೆಲ್ಲ ಮಾರಾಟಕ್ಕಿಡುತ್ತಾರೆ.

ಕಾಲೂರ ಮತ್ತೇ ತನ್ನ ಪಯಣ ಮುಂದುವರೆಸುತ್ತಾನೆ. ಹೋಗುವ ಮುನ್ನ ಬಾಂಬೆಯಲ್ಲಿದ್ದ ಮಗ ಕಾಲೂರನಿಗೆ ನೂರು ರೂಪಾಯಿ ಕೊಟ್ಟು ಕಳುಹಿಸುತ್ತಾನೆ. ಆದರೆ, ಆ ನೂರು ರೂಪಾಯಿಯಿಂದ ಸ್ವಂತ ಅಂಗಡಿನಾದರೂ ಮಾಡಬೇಕೆಂಬ ಆಸೆಗೆ ಒಂದು ಅಂಗಡಿಯ ಮಾಲೀಕ ಹತ್ತಿರ ಚಿಲ್ಲರೇ ಕೇಳಲು ಹೋದಾಗ ೧೦೦ ರೂಪಾಯಿ ಕೊಟ್ಟೆ ಇಲ್ಲ ಎಂದು ವಾದ ಮಾಡಿ ಕೊನೆಗೆ ೧೦ ರೂಪಾಯಿ ಮಾತ್ರ ತೆಗೆದುಕೊಂಡು ಅಲ್ಲೇ ಇದ್ದ ಕಾಫಿ ತೋಟದ ಮೇಸ್ತ್ರಿ ಪರಿಚಯವಾಗಿ ಕೆಲಸಕ್ಕೆ ಹೊರಡುತ್ತಾರೆ.

ಇಲ್ಲಿಂದ ಕಾಲೂರನ ಸಂಸಾರ ಮತ್ತೊಂದು ತಿರುವನ್ನು ಪಡೆದುಕೊಳ್ಳುತ್ತದೆ. ಕಾಫಿ ತೋಟದಲ್ಲಿ ಕೆಲಸ ಮಾಡಲು ಹೋದ ಕಾಲೂರ ಮತ್ತು ಸಾವಂತಿ ದುಡಿಮೆಯಿಂದ ಸ್ವಲ್ಪ ಮಟ್ಟಿನ ನೆಮ್ಮದಿ, ಹಣ ಎರಡನ್ನು ಗಳಿಸಿಕೊಳ್ಳುತ್ತಾರೆ. ಆದರೆ ಸ್ವಲ್ಪ ದಿನಗಳ ನಂತರ ಮೇಸ್ತ್ರಿ ಪಿಲಿಪ್ಪುನ ಲೈಂಗಿಕ ಕಿರುಕುಳಕ್ಕೆ ಸ್ಯಾವಂತಿ ಬಲಿಯಾಗುತ್ತಾಳೆ. ಪಿಲಿಪ್ಪು ಕಾಲೂರನಿಗೆ ಕುಡಿತದ ಚಟಕ್ಕೆ ಬಲಿಯಾಗಿಸಿ ಹೆಂಡತಿ ಊರಿಗೆ ಹೋದ ನೆಪ ಹೇಳಿ ಪದೇ ಪದೇ ಕಾಲೂರನ ಮನೆಗೆ ಊಟಕ್ಕೆ ಬರುವ ನೆಪವೊಡ್ಡಿ ಸ್ಯಾವಂತಿಯ ಮೇಲೆ ಹಲ್ಲೆ ಮಾಡಿದಾಗ, ಸ್ಯಾವಂತಿ ಹೇಗೋ ಅವನಿಂದ ಪಾರಾಗಿ ಬೆಳಿಗ್ಗೆ ಗಂಡನಿಗೆ ಈ ವಿಚಾರ ತಿಳಿಸಿದರೆ ಕಾಲೂರ ಹೆಂಡತಿಯ ಮೇಲೆಯೇ ಸಂಶಯಿಸಿದ ಕಾರಣ ಸ್ಯಾವಂತಿ ಬಾವಿಗೆ ಬಿದ್ದು ತೀರಿ ಹೋಗುತ್ತಾಳೆ.

ಅಲ್ಲಿಂದ ಕಾಲೂರನ ಒಂಟಿ ಪಯಣ ಆರಂಭವಾಗುತ್ತದೆ. ತನ್ನ ತಪ್ಪಿನ ಪ್ರಾಯಶ್ಚಿತವಾಗಿ ಕಾಲೂರ ಕಾಫಿ ತೋಟವನ್ನು ಬಿಟ್ಟು ಮತ್ತೇ ಸೆಟ್ಟರ ಹತ್ತಿರ ಬಂದು ನಡೆದ ವಿಚಾರವೆಲ್ಲ ಹೇಳುತ್ತಾನೆ ನಂತರ ಸೀನಪ್ಪನೋರ ಹತ್ತಿರ ಹೋರಿ ನೋಡಿಕೊಳ್ಳಲೆಂದು ನೇಮೀಸುತ್ತಾರೆ. ಇದೇ ಕಾಲೂರನ ಕೊನೆಯ ಊರಾಗುತ್ತದೆ.

ಮೊದಮೊದಲು ಕಾಲೂರನಿಗೂ ಹೋರಿ ಸರಿಯಾಗಿ ಹೊಂದಿಕೊಳ್ಳದೇ ಹೋದುದ್ದರಿಂದ ಕಾಲೂರನನ್ನು ತ್ವಾಟದ ಮನೆಯ ಕೆಲಸಕ್ಕೆ ನೇಮಿಸಿಕೊಳ್ಳುತ್ತಾನೆ. ಅಲ್ಲಿಯೇ ಪರಿಚಯವಾದ ಗಂಗೂರ ಸೀನಪ್ಪನೊರ ಬದ್ದ ವೈರಿ ರಂಗಪ್ಪನ ತ್ವಾಟದಲ್ಲಿ ಕೆಲಸ ಮಾಡುತ್ತಿದ್ದ ಸೀನಪ್ಪ, ರಂಗಪ್ಪನ ಕುಟುಂಬದಲ್ಲಿ ಕಲಹಗಳಿದ್ದರೂ ಗಂಗೂರ, ಕಾಲೂರ ನಡುವೆ ಆತ್ಮೀಯ ಸ್ನೇಹವಿತ್ತು. ಹಾಗಾಗಿಯೇ

ಕಾಲೂರ ತನ್ನ ಹಿಂದಿನ ಜೀವನದ ಸಿಹಿ ಕಹಿ ನೆನಪುಗಳನ್ನೆಲ್ಲಾ ಹೇಳಿಕೊಂಡಿದ್ದ. ಸೀನಪ್ಪ ರಂಗಪ್ಪನಿಗಿಂತ ಒಳ್ಳೆಯ ಸ್ವಭಾವದವನಾಗಿದ್ದ. ಆಳುಗಳು, ದನಕರುಗಳು ಕಂಡರೆ ಅಷ್ಟೇ ಪ್ರೀತಿ ಇತ್ತು. ಹಾಗಾಗಿಯೇ ತನ್ನ ಪ್ರೀತಿಯ ಹೋರಿಯನ್ನು ನೋಡಿಕೊಳ್ಳಲು ಯಾವಾಗಲೂ ಒಬ್ಬ ಆಳನ್ನು ನೇಮಿಸಿದ್ದ. ಜೊತೆಗೆ ಪುರಾಣ, ಪುಣ್ಯಕತೆಗಳನ್ನು ಹೇಳುತ್ತಿದ್ದರು. ಗಂಗೂರ ಕಾಲೂರ ವಾರದಲ್ಲಿ ಒಂದು ರಾತ್ರಿಯಾದರೂ ಹೋಗಿ ಕಥೆಗಳನ್ನು ಕೇಳಿ ಬರುತ್ತಿದ್ದರು.

ರಂಗಪ್ಪ ಸೀನಪ್ಪ ಅಣ್ಣ ತಮ್ಮಂದಿರಾಗಿದ್ದರೂ ದಾಯದಿಗಳಂತೆ ಕಿತ್ತಾಡುತ್ತಿದ್ದು ಹೆಚ್ಚು. ಈ ತರಹದ ಕಲಹಗಳಿಂದ ಬೇಸತ್ತು ಕಾಲೂರ ಅಲ್ಲಿ ಕೆಲಸ ಬಿಟ್ಟು ಬೇರೆ ಕಡೆ ಹೊರಡಲು ನಿರ್ಧರಿಸಿದ್ದನಾದರೂ ಗಂಗೂರನ ಒತ್ತಾಯಕ್ಕೆ ಗಂಗೂರನ ಮನೆಯಲ್ಲಿ ಉಳಿಯುವಂತಾಗಿತ್ತು. ಆದರೆ ಕಾಲೂರ ಮತ್ತು ಗಂಗೂರನ ಹೆಂಡತಿಯ ಮೇಲೆ ಸಂಶಯ ಪಡುವ ಜನರ ಮಾತಿನಿಂದ ಬೇಸತ್ತು ಕಾಲೂರ ಗಂಗೂರನ ಮನೆ ಬಿಟ್ಟು ಒಂದು ಆಲದ ಮರದಲ್ಲಿ ವಾಸಿಸುತ್ತಾ ಹೋಗಿ ಅಲ್ಲೇ ಒಂದಿನ ಸಾವನ್ನಪ್ಪುತ್ತಾನೆ. ಹೀಗೆ ಕಾಲೂರ ತನ್ನ ಜೀವಿತದ ಕೊನೆಯವರೆಗೂ ಒಂದು ಊರಿನಿಂದ ಮತ್ತೊಂದು ಊರಿಗೆ ಅಲೆಯುತ್ತ ಹಲವು ಕುಟುಂಬಗಳ ಜೀವನದ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಜೀವನ ನಡೆಸುತ್ತಾ ಕೊನೆಗೆ ಒಂಟಿಯಾಗಿ ಎಲ್ಲರನ್ನು ಕಳೆದುಕೊಂಡು ಸಾಯುತ್ತಾನೆ.

ಒಟ್ಟಾರೆ ಇದೊಂದು ಕಾಲೂರನ ಅಲೆಮಾರಿ ಜೀವನದ ವಿವಿಧ ಮಜಲುಗಳನ್ನು ನೋಡ ಬಹುದು. ತನ್ನದೆಂಬ ಊರು, ಮನೆ, ಇದ್ದರೂ ಹಲವು ಸಮಸ್ಯೆಗಳಿಗೆ ಒಳಗಾಗಿ ಊರು ಬಿಡುವಂತಾಗಿ ತನ್ನ ಕುಟುಂಬದ ಜೊತೆ ನಾನಾ ಕಷ್ಟಗಳಿಗೆ ಗುರಿಯಾಗುತ್ತಾನೆ. ಆದರೆ ತನ್ನ ಹೆಂಡತಿ ಮಗುವೂ ಸತ್ತಾಗ ನಿಜಕ್ಕೂ ಇದ್ದು ಸತ್ತವನಂತೆ ಬದುಕುತ್ತಾನೆ. ಅಚಾನಕ್ಕಾಗಿ ಪರಿಚಯ ವಾಗುವ ಸೆಟ್ಟರಿನಿಂದಾಗಿ ಕಾಲೂರ ಮೂರು ಮನೆಗಳಲ್ಲಿ ಬದುಕು ನಡೆಸುತ್ತಾನೆ. ಸಿಂಗಾರಿಗೌಡ, ಚೆನ್ನಕೇಶವಯ್ಯ ಮತ್ತು ಸೀನಪ್ಪನವರ ಮನೆಯ ಕೆಲಸಗಳಿಗೆ ಸೇರಿಸಿದ ಸೆಟ್ಟರು ಕಾಲೂರ ತಾತ್ಕಾಲಿಕ ಬದುಕಿಗೆ ನೆರವಾಗುತ್ತಾರೆ. ಎಲ್ಲಿ ಇಲ್ಲವೆಂದಾಗ ತಮ್ಮ ಅಂಗಡಿಯಲ್ಲಿ ಕೆಲಸಕ್ಕಿಟ್ಟುಕೊಂಡು ಕೂಲಿ ಕೊಡುತ್ತಾರೆ. ಹೀಗೆ ಕಾಲೂರ ಬಡತನ, ದಾರಿದ್ರ್ಯ, ಸಾಮಾಜಿಕ ಅಸಮಾನತೆ, ಮೋಸ, ವಂಚನೆಗೆ ಗುರಿಯಾಗಿ ಸಮಾಜದಲ್ಲಿ ಪರಿಪಾಟಲನ್ನು ಅನುಭವಿಸುತ್ತಾನೆ.

ಎಲ್ಲ ಕಷ್ಟ ಸುಖಗಳಲ್ಲಿಯೂ ಮಾರ್ಗದರ್ಶಕಳಂತೆ ಇದ್ದ ಹೆಂಡತಿ ಸ್ಯಾವಂತಿಯ ಮೇಲಿನ ಅನುಮಾನವೇ ಕಾಲೂರನ ಜೀವನಕ್ಕೆ ದೊಡ್ಡ ಪೆಟ್ಟು ಕೊಡುತ್ತದೆ. ಇದರಿಂದ ಹೆಂಡತಿಯನ್ನೇ ಕಳೆದುಕೊಳ್ಳುತ್ತಾನೆ. ಹೆಂಡತಿ ಮಗುವಿನೊಂದಿಗೆ ತನ್ನ ಅಲೆಮಾರಿ ಜೀವನ ನಡೆಯುವಾಗ ಒಂದಿಷ್ಟು ಭರವಸೆ, ನಗು, ಆಸೆ ಎಲ್ಲವೂ ಇತ್ತು. ಆದರೆ ನಂತರ ನಡೆಯುವ ಕಾಲೂರನ ಜೀವನದಲ್ಲಿ ಯಾವ ಅರ್ಥವೂ ಸಿಗದಂತಾಗುತ್ತದೆ.

ಬಡವರಾಗಿ, ನಿರ್ಗತಿಕರಾಗಿ ನಾನಾ ಕಾರಣಗಳಿಗೆ ಪರಿಸ್ಥಿತಿಗೆ ಸಿಕ್ಕಿ ಅಲೆಮಾರಿಯಂತೆ ಬದುಕಿದ್ದವರಿಗೆ ಚೆನ್ನಕೇಶವಯ್ಯನವರ ಮಗ ಕೊಟ್ಟ ನೂರು ರೂಪಾಯಿಂದ ಮತ್ತೇ ತಮ್ಮ ಬದುಕು ಹಸನಾಗುತ್ತದೆ ಎನ್ನುವಷ್ಟರಲ್ಲಿ ಅಂಗಡಿ ಮಾಲೀಕ ಮಾಡಿದ ಮೋಸ ಬಡವರನ್ನು ಇನ್ನಷ್ಟು ಕೆಳಮಟ್ಟಕ್ಕೆ ನೂಕುತ್ತದೆ. ಜೊತೆಗೆ ಕೆಲಸ ಕೊಡಿಸುವ ನೆಪದಲ್ಲಿ ಕಾಫಿ ತೋಟಕ್ಕೆ ಕರೆದುಕೊಂಡು ಹೋದ ಫಿಲಪ್ಪ ಮೇಸ್ತ್ರಿಯ ಲೈಂಗಿಕ ಶೋಷಣೆ ಮಹಿಳೆಯ ಮೇಲಿನ ಪುರುಷ ದೌರ್ಜನ್ಯವನ್ನು ಬಿಂಬಿಸುತ್ತದೆ.

ಈ ಎಲ್ಲಾ ಅಂಶಗಳ ಜೊತೆ ಕುಟುಂಬಗಳ ನಡುವೆ ನಡೆಯುವ ಮೇಲ್ವರ್ಗದವರ ತುಳಿತ ಎಲ್ಲವೂ ಈ ಕತೆಯ ಪ್ರಮುಖ ಅಂಶಗಳಾಗಿ ಪಾತ್ರಗಳ ಮೂಲಕ ಭಾವನಾತ್ಮಕವಾಗಿ ಅಭಿವ್ಯಕ್ತವಾಗಿದೆ.

ಸುಮತೀಂದ್ರ ನಾಡಿಗರ 'ಬೇರು ಬಿಟ್ಟವನು' ಕತೆಯಲ್ಲಿ ಉದ್ಯೋಗ, ಶಿಕ್ಷಣ, ಸಂಸಾರವೆಂದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಮಾರಿಯಂತೆ ಬದುಕುವುದನ್ನು ವಿರೋಧಿಸಿ ಎಲ್ಲದರೂ ಒಂದು ಕಡೆ ಮರಗಳಂತೆ ಬೇರು ಬಿಡಬೇಕೆಂಬ ಹಂಬಲ ವ್ಯಕ್ತಿಯನ್ನು ಕಾಡುತ್ತದೆ. ಈ ಕತೆಯ ನಾಯಕ ಉದ್ಯೋಗಕ್ಕಾಗಿ ಬೆಂಗಳೂರನ್ನು ಬಿಟ್ಟು ಅಮೇರಿಕದಲ್ಲಿ ವಾಸಮಾಡುತ್ತಿರುತ್ತಾನೆ, ಆದರೆ ಆಗಾಗ ಬೆಂಗಳೂರಿನಲ್ಲಿರುವ ಹೆಂಡತಿ ಮಕ್ಕಳೊಂದಿಗೆ ಇರಲು ಬಂದು ಹೋಗುವವ. ಇದರಿಂದ ಬೆಸತ್ತು ಒಂದು ಸಾರಿ ಬೆಂಗಳೂರಿನ ಲಾಲಾಬಾಗ್‌ಗೆ ಹೋದಾಗ ತನ್ನ ಮನದ ಚಿಂತೆಯನ್ನು ಮರದ ಜೊತೆ ಹಂಚಿಕೊಂಡಾಗ, ಮರ ನಾಯಕನ ಕಾಲುಗಳನ್ನು ಭೂಮಿಯಲ್ಲಿ ಬೇರುಬಿಡುವಂತೆ ಮಾಡುತ್ತದೆ. ಇದರಿಂದ ಅವನ ಕಾಲೇ ಕಳೆದುಕೊಳ್ಳುವಂತಾಗುತ್ತದೆ.

ಅಂದರೆ ನಾಯಕನಿಗದು ಸ್ಥಿರವಾಸ್ತವ್ಯದ ಕನಸು ಇಷ್ಟೆಲ್ಲ ಪಜೀತಿಗೆ ಬೀಳುವಂತೆ ಮಾಡುತ್ತದೆ. ಆದರೂ ಕಾಲು ಕಳೆದುಕೊಂಡಾಗಲಾದರೂ ಒಂದು ಕಡೆ ನಿಂತನೆಲ್ಲ ಎಂಬ ನನಸು ಕಥಾ ನಾಯಕನಿಗೆ ನೆಮ್ಮದಿ ತರಿಸುತ್ತದೆ. ಹೆಂಡತಿ ಮಕ್ಕಳನ್ನು ಬಿಟ್ಟು ಅನಾಥನಂತೆ ಒಂಟಿಯಾಗಿ ಜೀವಿಸುತ್ತಿದ್ದ ಚಂದ್ರಶೇಖರನ ಅಮೇರಿಕ ಜೀವನ ಸಾಕಾಗಿತ್ತು. ಅಲ್ಲಿಯ ನಂತರ ಬೆಂಗಳೂರಿಗೆ ಬಂದರೇ ಮತ್ತೇ ತಿರುಗಿ ಹೋಗಬೇಕೆಂಬ ಅನಿವಾರ್ಯತೆ ಈ ಎರಡರ ಮಧ್ಯೆ ಸಿಲುಕಿಕೊಂಡ ಚಂದ್ರಶೇಖರನ ಜೀವನ ಒಂದೇ ಕಡೆ ಬದುಕಬೇಕೆಂದು ತೊಳಲಾಡುತ್ತಾನೆ.

"ಮರಗಳನ್ನು ನೋಡಿದರೆ ನನಗೆ ಹೊಟ್ಟೆಕಿಚ್ಚಾಗುತ್ತದೆ. ಏಕೆಂದರೆ ಅವು ಬೇರು ಬಿಟ್ಟಿವೆ. ಊರಿಗೆ ತಿರುಗುತ್ತಿರುವ ನಾನು ಯಾವೊಂದು ಕಡೆಯಲ್ಲೂ ಬೇರು ಬಿಡಲಿಲ್ಲ. ನನ್ನ ಬದುಕಿಗೊಂದು ಕೇಂದ್ರವೇ ಇಲ್ಲ"(ಸುಮತೀಂದ್ರ ನಾಡಿಗ, ೨೦೦೯, ಪು.೨೪೩) ಎಂದು ತನ್ನ ದುಃಖವನ್ನು ಅಥವಾ ವ್ಯಥೆಯನ್ನು ಮರದ ಹತ್ತಿರ ತೋಡಿಕೊಳ್ಳುತ್ತಾನೆ. ಈ ಅಂಶವನ್ನು ಗಮನಿಸಿದಾಗ

ಅಲೆಮಾರಿತನವೆನ್ನುವಂತಹ ಪ್ರಶ್ನೆಯೇ ಮಾನವ ಬದುಕಿನಲ್ಲಿ ಎಷ್ಟೊಂದು ಬೇಸರ ಪ್ರಕ್ರಿಯೆಯಾಗಿದೆ ಎಂಬುದನ್ನು ಇಲ್ಲಿ ಗಮನಿಸಬಹುದು.

ಪ್ರತಿಯೊಬ್ಬರಿಗೂ ತಮ್ಮ ಬದುಕನ್ನು ಒಂದೇ ಕಡೆ ನಡೆಸಬೇಕೆಂಬ ಆಸೆ, ತುಮಲ ಇದ್ದೇ ಇರುತ್ತದೆ. ಸಮಾಜದ ಸಂಕೀರ್ಣತೆ ಕೆಲವೊಂದು ಜಂಜಾಟ, ಅನಿವಾರ್ಯತೆಗಳಿಗೆ ಮನುಷ್ಯರು ಬಲಿಯಾಗುತ್ತಾರೆ. ಕೆಲವರು ಇಷ್ಟವಿರದಿದ್ದರೂ ಉದ್ಯೋಗ, ಬದುಕಿನ ನಿರ್ವಹಣೆಗೆ ಅವಶ್ಯವಾಗಿದ್ದ ರಿಂದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುವ ವಿಪರ್ಯಾಸ ತಲೆದೂರುತ್ತದೆ ಎಂಬುದನ್ನು ಈ ಕತೆಯಿಂದ ತಿಳಿದುಕೊಳ್ಳಬಹುದಾಗಿದೆ.

ಈ ಕತೆಯ ನಾಯಕನಿಗೆ ಒಂದೇ ಕಡೆ ನೆಲೆವೂರಿ ತನ್ನ ಹೆಂಡತಿ ಮಕ್ಕಳೊಡನೆ ಬದುಕಬೇಕೆಂಬ ತುಡಿತ ಪದೇ ಪದೇ ವ್ಯಕ್ತಪಡಿಸುತ್ತಾನೆ. ಆದರೆ ಇದರಿಂದ ಪಜೀತಿಗೊಳಗಾಗುವುದು ಈ ಕಥೆಯಲ್ಲಿ ಹಾಸ್ಯಸ್ಪದವಾಗಿ ಮೂಡಿಬಂದಿದೆ. ಇವನ ಅಲೆಮಾರಿತನದಲ್ಲೂ ಒಂದು ಬದುಕು ಇದೆ. ಈ ತರಹದ ಬದುಕಿನಿಂದ ಇವನಿಗೆ ಜಿಗುಪ್ಸೆ, ನಿರಾಸೆಗೊಳಪಡುತ್ತಾನೆ. ಇದೆ. ಆದರೆ ಬದುಕು ನಡೆಸುವುದಕ್ಕೆ ಬೇರೆ ದಾರಿಯಿಲ್ಲದೇ ತನ್ನ ಬದುಕನ್ನು ನಡೆಸುತ್ತಾನೆ. ಆದರೆ ಕೊನೆಗೆ ತನ್ನ ಕಾಲು ಕಳೆದು ಕೊಂಡಾಗಲೂ ತನ್ನ ಬೇರನ್ನು ಬಿಟ್ಟಿದ್ದೇನೆ ಎಂದು ಸಂತಸಪಡುತ್ತಾನೆ.

ಒಟ್ಟಾರೆಯಾಗಿ ಹೇಳುವುದಾದರೆ ಮೂಲನೆಲೆ ಮತ್ತು ಸ್ಥಿರವಾಸ್ತವ್ಯಗಳ ಹಂಗಿಲ್ಲದೇ ಅಲೆಮಾರಿಗಳಂತೆ ಬದುಕುವ ಈ ನಾಲ್ಕು ಕಾದಂಬರಿಗಳಲ್ಲಿ ಸುಬ್ಬಣ್ಣ, ಕಾಲೂರ ಮತ್ತು ನಾಗಭಟ್ಟನ ಪಾತ್ರಗಳು ಒಂದಕ್ಕಿಂತ ಒಂದು ಭಿನ್ನ ಉದ್ದೇಶಗಳಿಗೆ, ಅನಿವಾರ್ಯಗಳಿಗೆ ಅಲೆಯುತ್ತಾರೆ. ಸುಬ್ಬಣ್ಣನ ಅಲೆಯುವಿಕೆ ಮನೆಯಲ್ಲಿ ನಡೆಯುವ ಜಗಳ, ಮನಸ್ತಾಪಗಳಿಂದ ನೆಮ್ಮದಿಯನ್ನು ಹುಡುಕಿ ಹೊರಟರೆ ಕಾಲೂರನದು ಸಮಾಜದಲ್ಲಿನ ಶ್ರೀಮಂತರು ಅಥವಾ ಮೇಲ್ವರ್ಗದವರ ಶೋಷಣೆ, ಅನ್ಯಾಯ, ವಂಚನೆಗಳಿಂದ ಉಂಟಾಗುತ್ತದೆ. ಹಾಗೆಯೇ ಸಾರ್ಥದಲ್ಲಿ ಬರುವ ನಾಗಭಟ್ಟನದು ರಾಜನ ವಂಚನೆ, ಮೋಸದಿಂದ ಅಲೆಮಾರಿತನ ಸಂಭವಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಸ್ಥಿರವಾಸ್ತವ್ಯದ ಹಂಗಿಲ್ಲದೆ ಅಲೆಮಾರಿಗಳಂತೆ ಬದುಕು ನಡೆಸಿದ ಇಲ್ಲಿ ಬರುವ ನಾಲ್ಕು ಕತೆಯ ನಾಯಕ ಪಾತ್ರಗಳು ಕೆಲವು ಉದ್ದೇಶ ಮತ್ತು ಅನಿವಾರ್ಯತೆಗಳಿಂದ ಊರನ್ನು ತೊರೆದು ಅಲೆಯುತ್ತಾರೆ ಸಾರ್ಥದಲ್ಲಿ ಬರುವ ನಾಗಭಟ್ಟನ ಪಾತ್ರ ರಾಜನ ಸ್ವಾರ್ಥ ಉದ್ದೇಶಕ್ಕಾಗಿ ಅಲೆಮಾರಿಯಂತೆ ಚಲಿಸುವ ಸ್ಥಿತಿ ಎದುರಾದರೆ, ಹೆಜ್ಜಾಲದಲ್ಲಿ ಕಾಲೂರನ ಕುಟುಂಬ ಬದುಕಿನ ನಿರ್ವಹಣೆಗೆ ಶ್ರೀಮಂತ ವರ್ಗದಿಂದ ಮೋಸ ಹೋಗಿ ಊರಿಂದ ಊರಿಗೆ ಚಲಿಸುವ ಪ್ರಸಂಗ ಉಂಟಾಗುತ್ತದೆ. ಅದೇ ರೀತಿ 'ಸುಬ್ಬಣ್ಣ' ಕತೆಯ ನಾಯಕ ಸುಬ್ಬಣ್ಣ

ಮನೆಯಲ್ಲಿನ ಮನಸ್ತಾಪದಿಂದ ಮನೆ ಬಿಟ್ಟು ಬಂದಾಗ ಬದುಕಿನಲ್ಲಿ ಉಂಟಾದ ಏರುಪೇರುಗಳಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುವ ಸ್ಥಿತಿ ಸಂಭವಿಸುತ್ತದೆ. ಹಾಗೆಯೆ ಬೇರು ಬಿಟ್ಟವನು ಕತೆಯ ನಾಯಕ ಚಂದ್ರು ಬೆಂಗಳೂರಿನಿಂದ ಅಮೇರಿಕಾಗೆ ಉದ್ಯೋಗಕ್ಕಾಗಿ ಅಲೆಯುವಾಗ ಪಡುವ ವೇದನೆಗಳು ವಲಸೆಗರಿಗೂ, ಅಲೆಮಾರಿಗಳಿಗೂ ಇರುವ ಚಲನೆಯಲ್ಲಿನ ಸಾಮ್ಯತೆಯನ್ನು ನಿವೇದಿಸುತ್ತವೆ.

ಅದೇ ರೀತಿ ಹೆಜ್ಜಾಲದಲ್ಲಿ ಕಾಲೂರನ ಕುಟುಂಬ ಬದುಕಿನ ನಿರ್ವಹಣೆಗೆ ಶೆಟ್ಟರು, ಚೆನ್ನಕೇಶವಯ್ಯ, ಸೀನಪ್ಪ, ಕಾಫಿ ತೋಟದಂತಹ ಹಲವು ಕಡೆ ದುಡಿಯುವುದಕ್ಕಾಗಿ ಅಲೆಯುವ ಸಂದರ್ಭ ಬದುಕಿಗಾಗಿ ಅಲೆಯುವಿಕೆಯನ್ನು ಎತ್ತಿತೋರಿಸುತ್ತದೆ.

ಸಾಮಾನ್ಯವಾಗಿ ಸಮುದಾಯದವರಲ್ಲಿ ಕಾಣುವ ನಿರಂತರ ಅಲೆಯುವಿಕೆಯು ಕಥನ ಪ್ರಪಂಚದಲ್ಲಿ ಕಾಣಬಹುದಾದರೂ ಕೂಡ, ಮೂಲನೆಲೆಯ ಸಂವೇದನೆಯೊಂದಿಗೆ ಪಾತ್ರಗಳು ಭಿನ್ನವಾಗಿ ನಿಲ್ಲುತ್ತವೆ. ಅಷ್ಟೇ ಅಲ್ಲದೆ ಸ್ವ ಇಚ್ಛೆ ಮತ್ತು ಪ್ರೇರಿತ ನೆಲೆಗಳಾಗಿ ಚಲನೆ ಸಂಭವಿಸಿರುವುದು ಕಥೆಗಳಲ್ಲಿ ಕಂಡುಬರುತ್ತದೆ. ಸಾರ್ಥದಲ್ಲಿ ಬರುವ ನಾಗಭಟ್ಟ ವ್ಯಾಪಾರದ ಮರ್ಮಗಳನ್ನು ತಿಳಿಯಲು ಹೋಗಿ ಮಧುರೆ, ಕಾಶಿ, ನಲಂದಾ, ಗಯಾಕ್ಕೆ ಸ್ಥಿರವಾಸ್ತವ್ಯದ ಹಂಗಿಲ್ಲದೆ ಅಂದರೆ ಒಂದು ಕಡೆ ನೆಲೆಯಾಗುವ ಆಸೆಯೊಂದಿಗೆ, ಆದರೆ, ಅದು ಸಾಧ್ಯವಾಗದೆ ಸಂದರ್ಭದ ಬಲಿಪಶುವಾಗಿ ಅಲೆಯುತ್ತಾನೆ. ಅದೇ ರೀತಿ ಹೆಜ್ಜಾಲ, ಸುಬ್ಬಣ್ಣ ಕತೆಗಳಲ್ಲಿ ಕಾಲೂರ, ಸುಬ್ಬಣ್ಣನ ಅಲೆಯುವಿಕೆ ಕಂಡುಬರುತ್ತದೆ.

ಮುಖ್ಯವಾಗಿ ಈ ಅಲೆಮಾರಿಗಳಿಗೂ ವಲಸಿಗರೂ ಇರುವ ವ್ಯತ್ಯಾಸವೆಂದರೆ ಅಥವಾ ಭಿನ್ನತೆ ಎಂದರೆ ಅಲೆಮಾರಿಗಳು ಸ್ವಇಚ್ಛೆಯಿಂದಲೇ ಅಲೆಮಾರಿಗಳಾಗಿ ಹೋಗುತ್ತಾರೆ. ಮತ್ತು ಅವರಲ್ಲಿ ಹೆಚ್ಚಾಗಿ ಮೂಲನೆಲೆ ಸಂವೇದನೆಗಳು ಅಥವಾ ನೆನಪುಗಳು ಕಾಡುವುದಿಲ್ಲ. ಆದರೆ ನಾಗಭಟ್ಟ ತನ್ನ ಊರನ್ನು ತೊರೆದು ಊರೂರು ತಿರುಗುವಾಗಲೇ ಬೇಸರ ವ್ಯಕ್ತಪಡಿಸುತ್ತಾನೆ. ಗೊತ್ತು ಗುರಿಯಿಲ್ಲದೆ ಈ ನಗರದಲ್ಲಿ ಒಂಟಿಯಾಗಿದ್ದೇನೆ ಎಂಬ ಭಾವನೆ ಅವನಲ್ಲಿ ಮುತ್ತಿಕೊಳ್ಳುತ್ತದೆ. ಅದೇ ರೀತಿ 'ಬೇರು ಬಿಟ್ಟವನು' ಕತೆಯ ಚಂದ್ರವಿಗೂ ನಾನು ಯಾವುದಾದರೂ ಒಂದು ಕಡೆ ನೆಲೆಯಾಗಬೇಕೆಂಬ ಹಂಬಲದಿಂದ ತನ್ನ ಕಾಲನ್ನೇ ಕಳೆದುಕೊಳ್ಳುತ್ತಾನೆ ಇನ್ನು ಸುಬ್ಬಣ್ಣ ಕತೆಯಲ್ಲಿ ಸಹ ಸುಬ್ಬಣ್ಣ ತನ್ನ ಹುಟ್ಟೂರಿಗೆ ಹೋಗಬೇಕು ಎಂದು ತನ್ನ ಮೂಲನೆಲೆಯನ್ನು ಹಂಬಲಿಸಿ ಬರುತ್ತಾನೆ ಹೀಗೆ ಎಲ್ಲಾ ಭಾವನಾತ್ಮಕ ಸಂಬಂಧಗಳು ಹೆಚ್ಚಾಗಿ ಕಾಣುತ್ತವೆ. ಆದರೆ, ಈ ಭಾವನೆಗಳು ಬಹಳಷ್ಟು ಅಲೆಮಾರಿಗಳಿಗೆ ಇರುವುದಿಲ್ಲ, ಅವರು ಇದ್ದ ಊರನ್ನು ತಮ್ಮದೆಂದುಕೊಂಡು ಮುಂದೆ ಸಾಗುತ್ತಲೇ ಇರುತ್ತಾರೆ.

ಒಟ್ಟಾರೆ ಈ ಎಲ್ಲಾ ಸಾಮ್ಯತೆ ಭಿನ್ನತೆಗಳ ನಡುವೆಯೂ ಅಲೆಮಾರಿ, ವಲಸೆ, ಸ್ಥಿರವಾಸ್ತವ್ಯದೊಳಗೆ ಸೂಕ್ಷ್ಮ ಅಂತಃಸಂಬಂಧವಿದೆ ಎಂಬುದನ್ನು ಈ ಕೃತಿಗಳು ನಿರೂಪಿಸಲು ಪ್ರಯತ್ನಿಸುತ್ತವೆ.

## ೬.೨. ಮೂಲನೆಲೆ ಮತ್ತು ವರ್ತಮಾನದ ನಡುವಿನ ವಲಸೆ ಸಂಸ್ಕೃತಿ

ವಲಸೆ ಸಾಹಿತ್ಯದಲ್ಲಿ ಮುಖ್ಯಭೂಮಿಕೆಯಾಗಿ ಕಂಡುಬರುತ್ತದೆ. ಮತ್ತು ಕಾರಣ, ಪ್ರೇರಣೆಗಳು ಇಡೀ ಕತೆಯನ್ನು ನಿರ್ವಹಿಸುತ್ತದೆ. ಪ್ರತಿಯೊಬ್ಬ ವಲಸಿಗನಿಗೂ ಮೂಲ ನೆಲೆ ಎನ್ನುವಂತದ್ದು ಇದ್ದೇ ಇರುತ್ತದೆ. ಆ ಮೂಲ ನೆಲೆಯಲ್ಲಿ ಹೆಚ್ಚಾಗಿ ವಲಸಿಗರ ಬದುಕು ಸುಂದರ ಸಮೃದ್ಧಿ ಜೀವನದಂತೆ ಕಂಡುಬರುತ್ತದೆ. ಆದರೆ, ಆ ಮೂಲನೆಲೆಯ ಕೊನೆಕೊನೆಗೆ ದುರಂತದ ಮುನ್ಸೂಚನೆ ಉಂಟಾಗಿ, ವ್ಯಕ್ತಿಗಳು ಆ ಪ್ರದೇಶವನ್ನು ಬಿಟ್ಟು ಮತ್ತೊಂದು ಪ್ರದೇಶಕ್ಕೆ ಸ್ಥಿರ ವಾಸ್ತವ್ಯದೆಡೆಗೆ ಸಾಗಬೇಕಾಗುತ್ತದೆ. ಆ ಸ್ಥಿರ ವಾಸ್ತವ್ಯದಲ್ಲಿಯೂ ಸಹ ತಾನು ಮೊದಲಿದ್ದ ಮೂಲ ನೆಲೆಯ ನೆನಪುಗಳೊಂದಿಗೆ ಬದುಕು ಸಾಗುವಂತಾಗುತ್ತದೆ.

ಇದಕ್ಕೆ ಪೂರಕವಾಗಿ ತಾರಿಣಿ ಶುಭದಾಯಿನಿ ರವರು ಒಂದು ಕಡೆ ಹೇಳಿಕೊಳ್ಳುವಂತೆ "ವಲಸೆ ಬಂದವರಿಗೆ ತಾವು ಬಂದ ಜಾಗದ ಚರಿತ್ರೆ ಮತ್ತು ಅದರ ಸಮಕಾಲೀನ ಚರಿತ್ರೆಯ ಬಗ್ಗೆ ಸಾಮಾನ್ಯವಾಗಿ ಆಸಕ್ತಿ ತೊರುತ್ತವೆ. ತಮ್ಮ ತಾಯ್ನಾಡಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯನ್ನು ಅವರು ಒಂದಿಲ್ಲೊಂದು ಕಾರಣದಿಂದ ನೆನಪಿಸಿಕೊಳ್ಳುತ್ತಾರೆ. ಕೆಲವರು ಇದರ ಬಗ್ಗೆ ನಿರಾಸಕ್ತಿಯನ್ನು ಸಹ ತೊರಬಹುದು. ಅದರೆ, ನಿರಾಸಕ್ತಿ ಕೂಡ ಚರಿತ್ರೆಯನ್ನು ಇನ್ನೊಂದು ಕಡೆಯಿಂದ ತಡುವುತ್ತಿರುತ್ತದೆ".(ತಾರಿಣಿ ಶುಭದಾಯಿನಿ ಆರ್, ೨೦೧೬, ಪು.೧೪೫) ಎಂದು ಅಭಿಪ್ರಾಯಪಡುತ್ತಾರೆ. ಹೀಗೆ ಸ್ಥಿರ ವಾಸ್ತವ್ಯದ ಬದುಕಿನಲ್ಲಿ ವಲಸೆಯ ಪರಿಣಾಮವನ್ನು ವಿವರಿಸುತ್ತಾ ಇಡೀ ಕಥನದ ಸಾರರೂಪವನ್ನು ಸ್ಪಷ್ಟೀಕರಿಸುತ್ತ ಹೋಗುತ್ತದೆ.

ಹೀಗೆ ಮೂಲನೆಲೆಯಲ್ಲಿನ ಸುಂದರ ಸಮೃದ್ಧಿಯ ಬದುಕಿನ ನಂತರ ಉಂಟಾಗುವ ದುರಂತದ ಮುನ್ಸೂಚನೆ ಮತ್ತು ಸ್ಥಿರವಾಸ್ತವ್ಯದಲ್ಲಿ ಭೂತಕಾಲದ ನೆನಪುಗಳೊಂದಿಗೆ ಬದುಕುವ ಈ ಮೂರು ಅಂಶಗಳನ್ನು ಮೂರು ಪರಿಕಲ್ಪನೆಯಾಗಿ ಪರಿಭಾವಿಸಿ ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಇದರ ಜೊತೆಗೆ ಮೂಲನೆಲೆ ಮತ್ತು ಸ್ಥಿರವಾಸ್ತವ್ಯದ ಬದುಕಿನ ರೀತಿ, ನೀತಿ, ಆಚರಣೆ, ಸಂಸ್ಕೃತಿ ಎಲ್ಲವೂ ಭಿನ್ನವಾಗಿರುತ್ತದೆ ಅಥವಾ ಕೆಲವೊಂದನ್ನು ಮಾತ್ರ ವ್ಯಕ್ತಿ ಅನಿವಾರ್ಯವಾಗಿ ಬದಲಾವಣೆ ಮಾಡಿಕೊಂಡು ಬದುಕಬೇಕಾಗುತ್ತದೆ. ಕೆಲವರ ಬದುಕು ಮೂಲ ನೆಲೆಯಲ್ಲಿ ನೆಮ್ಮದಿ ಕಂಡಿದ್ದಾರೆ. ಇನ್ನು ಕೆಲವರದು ಸ್ಥಿರವಾಸ್ತವ್ಯದಲ್ಲಿ ನೆಮ್ಮದಿ ಕಂಡಿರುತ್ತದೆ. ಹೀಗೆ ಇಲ್ಲಿ ಬರುವ ಒಂದೊಂದು ಕತೆಯ ಅಭಿವ್ಯಕ್ತಿ ಭಿನ್ನ ಸ್ವರೂಪದ್ದಾಗಿರುತ್ತದೆ. ಹೀಗೆ ಮೂಲ

ನೆಲೆ ಮತ್ತು ಸ್ಥಿರವಾಸ್ತವ್ಯಗಳ ನಡುವಿನ ಬದುಕನ್ನು ಈ ಅಧ್ಯಯನದಲ್ಲಿ ಸೂಕ್ಷ್ಮವಾಗಿ ಗಮನಿಸಲಾಗುವುದು. ಅಂತಹ ಭಿನ್ನ ಕಥೆಗಳನ್ನು ಇಲ್ಲಿ ನೋಡುವುದಾದರೆ, ಗೋಪಾಲಕೃಷ್ಣ ಪೈರವರ 'ಸ್ವಪ್ನ ಸಾರಸ್ವತ' ಕಾದಂಬರಿಯಲ್ಲಿ ಗೋವಾ ಪ್ರಾಂತ್ಯದ ವೆರಣಿಯಲ್ಲಿ ಸಮೃದ್ಧವಾಗಿ ವ್ಯಾಪಾರ, ಮತ್ತು ಕೃಷಿ ಎರಡಲ್ಲೂ ತೊಡಗಿಸಿಕೊಂಡು ಬಹಳ ಶ್ರೀಮಂತವಾಗಿ ಬದುಕುತ್ತಿದ್ದ ಸಾರಸ್ವತ ಕುಟುಂಬವು ಪೋರ್ಚುಗೀಸರ ದಾಳಿಯಿಂದ ತಮ್ಮ ಧರ್ಮನಂಬಿಕೆಯನ್ನು ಉಳಿಸಿಕೊಳ್ಳುವುದಕ್ಕಾಗಿ ದಕ್ಷಿಣಾಭಿಮುಖವಾಗಿ ವಲಸೆ ಬಂದು ಕುಂಬಳೆಯಲ್ಲಿ ನೆಲೆವೂರುತ್ತಾರೆ. ತಮ್ಮ ಮೂಲ ನೆಲೆಯ ಕತೆಯ ಕೊನೆಯವರೆಗೂ ತಂದೆಯಿಂದ ಮಗನಿಗೆ ಮಗನಿಂದ ಮೊಮ್ಮಕ್ಕಳಿಗೆ ತಮ್ಮ ಮೂಲ ನೆಲೆಯ ಬದುಕಿನ ಕತೆ ಸಾಗುತ್ತಲೇ ಹೋಗುತ್ತದೆ. ಇದಕ್ಕೆ ಕಾರಣ ಮತ್ತೇ ತನ್ನ ನೆಲೆಯನ್ನು ಸೇರಿಕೊಳ್ಳಬೇಕೆಂಬ ಹಂಬಲ ಎದ್ದು ಕಾಣುತ್ತದೆ. ಇಲ್ಲಿ ತಿರುಗಿ ಹೋಗುತ್ತೇನೆಂಬ ಹಂಬಲ ಕಾತರ ಕುರಿತು ತಾಯಿ ಮಗನಿಗೆ ಲಾಲಿ ಹಾಡು ಹೇಳುವ ಮೂಲಕ ತನ್ನ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ.

"ರೋಡು ನಾಕ್ಕಾಗೋ ಬಾಯ್ಯೋದೊಳೆ।
ಸೂಬು ನಾಕ್ಕಾಗೋ ಪರ್ತೂನು
ಗೋರಿಯೂ ವಚ್ಚಾ ಅಸ್ಸಾ।

ಇದರ ಅರ್ಥ ಅಳಬೇಡವೇ ಮಗಳೇ ಕಣ್ಣುಗಳನ್ನು ಊದಿಸಬೇಡವೇ, ಮರಳಿ ಗೋವೆಗೆ ಹೋಗಲುಂಟು-ಜಾನಪದ"(ಗೋಪಾಲಕೃಷ್ಣ ಪೈ, ೨೦೧೨, ಮುನ್ನುಡಿ) ಇದೇ ತರ ಗೋವಾಕ್ಕೆ ಹೋದ ಕಾಗೆಯ ಕ್ಷೇಮ ಸಮಾಚಾರವನ್ನು ಕೇಳುವ ಇನ್ನೊಂದು ಜಾನಪದ ಗೀತೆಯನ್ನು ಇಲ್ಲಿ ಉದಾಹರಿಸಬಹುದು.

ಕಾಕ್ಕಾ ಮಾಮ್ಮಾತೊಂ ಗೋರಿಯಾ ಗೆಲ್ಲಲ್‌ವೇ?
ಅಮ್ಗೆಲಾಮ್ಮುಣೂಲೆಂ ಬಾವ್ಲಾ ದೆಕ್ಲಾವೇ?
ತೇ ಬಾಮ್ಲಾನ್ ಎತ್ತಾಮ್ಹಳ್ಳಾವೇ?
ಆಮ್ಗೆಲಾಮ್ಮೂಣುಕ ಎವ್ವಾಸಾಂಗ್ಲಾವೇ?

ಅಂದರೆ (ಕಾಗೆ ಮಾವ, ನೀನು ಗೋವೆಗೆ ಹೋಗಿದ್ದೀಯಾ? ನಮ್ಮ ಚಿನ್ನಾರಿ ಪುಟ್ಟಿಯ ಗಂಡನನ್ನು ಕಂಡಿದ್ದೀಯಾ? ಆ ಗಂಡ ಬರುತ್ತಾನೆ ಅಂತ ಹೇಳಿದ್ದಾನಾ? ನಮ್ಮ ಚಿನ್ನಾರಿ ಪುಟ್ಟಿಯನ್ನು ಬರಲು ಹೇಳಿದ್ದಾನಾ? ಜಾನಪದ"(ಅದೇ, ಮುನ್ನುಡಿ) ಈ ಎರಡು ಜಾನಪದ ಗೀತೆಗಳು ತಮ್ಮ ಮೂಲ ನೆಲೆಯನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತವೆ. ತಮ್ಮ ಮೂಲ ಸ್ಥಳಕ್ಕಿಂತ ಕುಂಬಳೆಯಲ್ಲಿ ಅಧಿಕವಾಗಿ ಇನ್ನಷ್ಟು ಸಬಲರಾದರೂ ಭಾವನಾತ್ಮಕವಾಗಿ ಕುಗ್ಗಿದ್ದರು ಎಂಬುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ.

ಅದೇ ರೀತಿ ವೆರಣಿಯಲ್ಲಿ ಬದುಕುತ್ತಿದ್ದ ಕೆಳವರ್ಗದ ಜನರು ಮೇಲ್ವರ್ಗದವರ ಜಾತಿ ತಾರತಮ್ಯದ ನಡುವೆ ಶಿಕ್ಷಣ ವಂಚಿತವು ಸೇರಿದಂತೆ ಸಮಾಜದಲ್ಲಿ ಹಲವು ಉದ್ಯೋಗಗಳಿಂದ ವಂಚಿತರಾಗಿ ಬದುಕುತ್ತಿದ್ದರೂ ಸಹ ಪೋರ್ಚುಗೀಸರ ಮತಾಂತರದಿಂದ ಎಲ್ಲಾ ತರಹ ಸೌಲಭ್ಯಗಳನ್ನು ಪಡೆದುಕೊಂಡು ಶಿವಾಜಿ ದಾಳಿಯಿಂದ ಮತ್ತೇ ಎಲ್ಲವನ್ನು ಕಳೆದುಕೊಂಡು ವಲಸೆ ಬಂದು ಊರ ಹೊರಗೆ ಗುಡಿಸಲುಗಳನ್ನು ಕಟ್ಟಿಕೊಂಡು ಕೆಲಸವಿಲ್ಲದೇ ಹಸಿವಿನಿಂದ ನರಳುತ್ತಾರೆ. ಹಾಗೆಯೇ ಸಾರಸ್ವತರು ತಮ್ಮ ಸ್ಥಿರವಾಸ್ತವ್ಯದ ಬದುಕಿನಲ್ಲಿ ಅಲ್ಲಿನ ಸಂಸ್ಕೃತಿ ಆಚರಣೆಗಳಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಅದೇ ರೀತಿ ಆಹಾರ, ದೇವರ ಆರಾಧನೆಯ ವಿಷಯದಲ್ಲಿ ಅಲ್ಲಿನ ಪರಿಸರಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಂಡು ಬದುಕುತ್ತಾರೆ.

ಹಾಗೆಯೇ ನೀಳಾದೇವಿಯವರ 'ಬೇರಿಂದ ಫಲಕ್ಕೆ' ಕಾದಂಬರಿಯಲ್ಲಿ ಮೈಸೂರು ಒಡೆಯರ ಕಾಲದಲ್ಲಿದ್ದ ರಾಜಕೀಯ ಸ್ಥಿತ್ಯಂತರಗಳಿಗೆ ಬಲಿಯಾಗಿ ಹೊಲ, ಮನೆ ಇದ್ದು ನೆಮ್ಮದಿಯಿಂದ ಬದುಕುತ್ತಿದ್ದ ನಾಲ್ಕು ಬ್ರಾಹ್ಮಣ ಕುಟುಂಬಗಳು ತಮ್ಮ ಮೇಲೆ ನಡೆಯುತ್ತಿದ್ದ ಮತಾಂತರ, ಆಕ್ರಮಣ, ದೌರ್ಜನ್ಯಗಳನ್ನು ಸಹಿಸಲಾಗದೇ ಕೊಳ್ಳೆಗಾಲಕ್ಕೆ ಬಂದು ನೆಲೆಯಾಗುತ್ತಾರೆ. ಅಲ್ಲಿ ಸ್ವಲ್ಪ ಕಾಲಗಳವರೆಗೆ ಇದ್ದು ಮತ್ತೇ ತಮ್ಮ ಮೂಲನೆಲೆಗೆ ವಾಪಸ್ಸಾಗುವ ಸಂದರ್ಭ ಈ ಕತೆಯಲ್ಲಿ ಬರುತ್ತದೆ.

ಅದೇ ರೀತಿ ಚಾರಿತ್ರಿಕ ದಾಖಲೆಗಳನ್ನೊಳಗೊಂಡ ನೇಮಿಚಂದ್ರರವರ 'ಯಾದ್ ವಶೇಮ್' ಕಾದಂಬರಿಯ ಕಥಾನಾಯಕಿ ಯಾನಾ ತನ್ನ ಮೂಲ ನೆಲೆಯಾದ ಬರ್ಲಿನ್‌ನಲ್ಲಿ ತನ್ನ ತಂದೆ, ತಾಯಿ, ಅಕ್ಕ, ತಮ್ಮನೊಂದಿಗೆ ಸುಖವಾಗಿ ಬೆಳೆಯುತ್ತಿದ್ದ ಈಕೆ ಹಿಟ್ಲರ್‌ನ ದಾಳಿಯಿಂದ ಎಲ್ಲರನ್ನು ಅಗಲಿ ಸಾಕಷ್ಟು ನೋವನ್ನು ಅನುಭವಿಸಿ ತಂದೆಯೊಂದಿಗೆ ಭಾರತಕ್ಕೆ ಬಂದು ತನ್ನ ಹಿಂದಿನ ಬದುಕಿನ ಸಿಹಿಕಹಿ ನೆನಪುಗಳೊಂದಿಗೆ ಬದುಕುತ್ತಾಳೆ. ಅವರು ಉದಾಹರಣೆಗೆ ಇಲ್ಲಿ ಬರುವ ಸಂದರ್ಭವನ್ನು ಗಮನಿಸಬಹುದು.

"ಏನೆಂದು ಹೇಳಬಲ್ಲೆ ಬರ್ಲಿನ್‌ನ ಬಾಲ್ಯದ ಸಿಹಿನೆನಪುಗಳ ಬೆನ್ನಿಗೇ ರಕ್ತರಾತ್ರಿಯ ನೆನಪುಗಳು ಅಟ್ಟಿ ಬರುತ್ತಿವೆ. ಅಮ್‌ಸ್ಟರ್‌ಡ್ಯಾಮಿನ ಕಾಲುವೆಯ ದಂಡೆಯ ಮನೆಯ ಹೊಂಬಿಸಿಲ ಮುಂಜಾನೆಗಳ ಹಿಂದೆಯೇ ಆ ಕಗ್ಗತ್ತಲು ರಾತ್ರಿ, ನಾಜಿ ಯೋಧರ ಕಿವಿಗಡಚಿಕ್ಕುವ ಸೈರನ್ ಪುಟ್ಟ ಐಸಾಕ್‌ನ ಚಿಟ್ಟನೆ ಚೀರುವ ಎಳೆ ಕೊರಳ ದಾನಿ ಕೇಳಿಬರುತ್ತದೆ. ಯಾವ ಕತೆಗಳನ್ನು ಹೇಳಲಿ ತಮ್ಮ ನೆಲದಲ್ಲಿಯೇ ಮಣ್ಣಾದ ಆರು ಮಿಲಿಯ ಯಹೂದಿಗಳ ಕತೆಯನ್ನೇ ತಮ್ಮ ನೆಲದಲ್ಲಿಯೇ ಎರವಲಾದ ಮಿಲಿಯ ಮಿಲಿಯ ಯಹೂದಿಗಳ ಹರಿದು ಹೋದ ಕುಟುಂಬದ ಕತೆಯನ್ನೆ? ತನ್ನವರಿಂದ ತನ್ನ ತಾಯ್ನಾಡಿನಿಂದ ದೂರವಾಗಿ ಗೋರಿಪಾಳ್ಯದ ಅಂಚಿನಲ್ಲಿ ಒಂಟಿಯಾಗಿ ಮಲಗಿದ ಅಪ್ಪನ ಕತೆಯನ್ನು ಹೇಳಲೆ? ನಮ್ಮೊಳಗಿನ ಈ ಕತೆಗಳು ನನ್ನೊಡನೆಯೇ ಮಣ್ಣಾಗುತ್ತವೆಯೇ

ಒಡಲಲ್ಲಿ ಆಗಾಧ ನೋವು ಮತ್ತೆ ನೆನಪಾಗುವುದೇಕೆ ಬಿಟ್ಟು ಬಂದ ಬದುಕು"(ನೇಮಿಚಂದ್ರ, ೨೦೦೭, ಪು.೮೯) ಎಂದು ತನ್ನ ಸ್ಥಿರವಾಸ್ತವ್ಯದ ಬದುಕಿನಲ್ಲೂ ತನ್ನ ಹಳೆಯ ಬದುಕಿನ ನೆನಪಿನಲ್ಲಿ ಬದುಕುತ್ತಾಳೆ. ಇದರ ಜೊತೆಗೆ ತನ್ನ ಜಾತಿ, ಸಂಪ್ರದಾಯಗಳನ್ನು ಬಚ್ಚಿಟ್ಟು ಭಾರತೀಯ ನಾರಿಯಂತೆ ಹಿಂದೂ ಧರ್ಮದ ಆಚಾರ-ವಿಚಾರಗಳನ್ನು ಅನುಸರಿಸುತ್ತಾರೆ. ಹೀಗೆ ಯಾನ ಪಾತ್ರ ಭಾರತದಲ್ಲಿ ಅನಿತಾಳಾಗಿ ತನ್ನ ಜೀವನವನ್ನು ಕಳೆಯುತ್ತಾಳೆ.

ಬೆಸಗರಹಳ್ಳಿ ರಾಮಣ್ಣನವರ 'ಆಳುಮಗ' ಕತೆಯಲ್ಲಿ ಬರುವ ಕರೀಬೋರ, ಗೌಡರ ಮನೆಯಲ್ಲಿ ವಂಶ ಪಾರಂಪರ್ಯವಾಗಿ ಜೀತದಾಳಗಿದ್ದರೂ ಗೌಡರ ಕಾಳಜಿ ಪ್ರೀತಿಯಿಂದ ಬೆಳೆದು ನಿಯತ್ತಿನ ಆಳಾಗಿ ನೆಮ್ಮದಿಯಿಂದ ಬದುಕುತ್ತಿದ್ದ. ಆದರೆ ದಿಢೀರನೆ ಸಂಬವಿಸಿದ ಬರಗಾಲದಿಂದ ಊರಿನಲ್ಲಿ ಜನರ ಬದುಕಿನ ಸ್ಥಿತಿ ಅಲ್ಲೋಲ ಕಲ್ಲೋಲವಾಗಿ ತುತ್ತು ಅನ್ನಕ್ಕಾಗಿ ಪರದಾಡಿ ದುಡಿಯಲು ಕೆಲಸವನ್ನು ಹುಡುಕಿಕೊಂಡು ಬ್ರಿಟಿಷರ ಕಾಫಿ ತೋಟಕ್ಕೆ ಹೋಗಿ ತನ್ನ ಸ್ಥಿರ ವಾಸ್ತವ್ಯವನ್ನು ಕಂಡುಕೊಳ್ಳುತ್ತಾನೆ. ಆದರೆ, ಗೌಡರ ಮನೆಯ ಕಾಳಜಿ, ಪ್ರೀತಿಯನ್ನು ಮರೆಯಲಾಗದೇ ತನ್ನ ಮೂಲನೆಲೆಯನ್ನು ಅರಸುತ್ತ ತನ್ನ ಕುಟುಂಬ ಸಮೇತ ಬಂದು ತನ್ನ ಊರನ್ನು ಸೇರುತ್ತಾನೆ. ಇಲ್ಲಿ ಸ್ಥಿರ ವಾಸ್ತವ್ಯದ ಬದುಕು ಕೇವಲ ಬರಗಾಲದಿಂದ ತಪ್ಪಿಸಿಕೊಳ್ಳಲು ಪರ್ಯಾಯ ಮಾರ್ಗವಾಗಿ ತೋರುತ್ತದೆ. ಇಲ್ಲಿ ಮೂಲ ನೆಲೆ ಬಿಟ್ಟು ಹೋದ ಕರೀಬೋರನ ಸ್ಥಿರವಾಸ್ತವ್ಯದ ವಿವರಣೆ ಅಷ್ಟಾಗಿ ಕಾಣಿಸುವುದಿಲ್ಲ. ಆದರೆ ಸ್ವಾತಂತ್ರ್ಯ ಬಂದ ನಂತರ ಬ್ರಿಟಿಷರು ದೇಶ ಬಿಟ್ಟು ಹೋದ ಮೇಲೆ ಅವರು ನೀಲಗಿರಿಯಿಂದ ಕಾಫೀ ತೋಟದ ಕೆಲಸಕ್ಕೆ ದೊಡ್ಡ ನಮಸ್ಕಾರ ಹಾಕಿ, ಹೆಂಡತಿ ಮಕ್ಕಳೊಂದಿಗೆ ಏನಿದ್ದರೂ ತನ್ನ ಘಟ್ಟ ತನ್ನ ಹುಟ್ಟೂರಿನ ಮಣ್ಣಿನಲ್ಲೇ ಒಗಿಬೇಕು ಇಲ್ಲಲ್ಲ"(ಬೆಸಗರಹಳ್ಳಿ ರಾಮಣ್ಣ, ಪು.೧೫೫) ಎಂದು ವಾಪಸ್ಸು ತನ್ನ ಮೂಲನೆಲೆಗೆ ಬರುತ್ತಾರೆ. ಇಲ್ಲಿ ವಾಪಸ್ಸು ಬರುವಲ್ಲಿಯೂ ಸಹ ಎರಡು ತರಹದ ಕಾರಣಗಳನ್ನು ನೋಡಬಹುದು. ಒಂದು ಬ್ರಿಟಿಷರು ದೇಶಬಿಟ್ಟು ಹೋದ ನಂತರ ಅಲ್ಲಿ ಮಾಡಲು ಕೆಲಸವಿಲ್ಲದೇ ಅನಿವಾರ್ಯವಾಗಿ ಮತ್ತೇ ತನ್ನೂರಿಗೆ ಬರುವಂತದ್ದು. ಇನ್ನು ಎರಡನೆಯದಾಗಿ, ಮೇಲೆ ಕತೆಯಲ್ಲಿ ಬರುವ ಸಂದರ್ಭವನ್ನು ವಿವರಿಸುವಂತೆ 'ತನ್ನ ನೆಲೆ ಏನಿದ್ದರೂ ತನ್ನ ಹುಟ್ಟೂರಲ್ಲಿ' ಎಂಬ ಮೂಲ ನೆಲೆ ಕುರಿತ ಅಭಿಮಾನವೂ ಸಹ ಇಲ್ಲಿ ಕಾಣಿಸುತ್ತದೆ.

ಗೀತಾ ನಾಗಭೂಷಣರವರ 'ಭೂಮಿ ಮತ್ತು ಬೀಜ' ಕತೆಯಲ್ಲಿ ಬರುವ ಶಾಣಪ್ಪ ಮತ್ತು ನೀಲವ್ವ ಎಂಬ ದಂಪತಿಗಳು ಹೊಟ್ಟೆಪಾಡಿಗಾಗಿ ತಮ್ಮ ಮೂಲ ನೆಲೆಯನ್ನು ಬಿಟ್ಟು ಕೆಲಸವನ್ನು ಹುಡುಕಿಕೊಂಡು ಕಲಬುರ್ಗಿಗೆ ಬಂದು ನೆಲೆಯಾಗುತ್ತಾರೆ. ಆದರೆ, ಇಲ್ಲಿ ಮೂಲನೆಲೆಯ ವಿವರಣೆ ಶೂನ್ಯವಾಗಿರುತ್ತದೆ. ಇವರ ನಂತರ ಸ್ಥಿರವಾಸ್ತವ್ಯದ ಬದುಕಿನ ವಿವರಣೆಯೇ ಕತೆಯ ಕೊನೆಯವರೆಗೂ

ಚಿತ್ರಿತವಾಗಿದೆ. ಹೊಟ್ಟೆಪಾಡಿಗಾಗಿ ಬಂದು ಗುರುಪಾದಪ್ಪ ಎಂಬ ಗೌಡನ ಆಶ್ರಯದಲ್ಲಿ ನೆಲೆ ನಿಂತ ಈ ಕುಟುಂಬಕ್ಕೆ ಗುರುಪಾದಪ್ಪನ ಸಹಾಯದಿಂದ ಆರ್ಥಿಕವಾಗಿ ಸಬಲರೆನೋ ಆಗುತ್ತಾರೆ. ಆದರೆ ನೀಲವ್ವನನ್ನು ಬಯಸಿದ ಗೌಡನಿಂದಾಗಿ ಆ ಕುಟುಂಬ ಅಸಹಾಯಕತೆ, ಅನಿವಾರ್ಯತೆಯಲ್ಲಿ ಸ್ಥಿರವಾಸ್ತವ್ಯದಲ್ಲಿ ಬದುಕು ಸಾಗಬೇಕಾಗುತ್ತದೆ.

ಹಾಗೆಯೆ ಇಲ್ಲಿ ಬರುವ ಇನ್ನೊಂದು ಪ್ರಮುಖ ಅಂಶವೆಂದರೆ ಈ ಕುಟುಂಬ ಸ್ಥಿರವಾಸ್ತವ್ಯದ ಬದುಕಿನ ನಂತರದ ದಿನಗಳಲ್ಲಿ ಬರಗಾಲ ಉಂಟಾಗಿ ಮತ್ತೇ ಅಲ್ಲಿಯ ಊರಿನ ಜನ ಮುಂಬಯಿ ಕಡೆಗೆ ವಲಸೆ ಹೋಗುವ ಮೂಲಕ ಮತ್ತೊಂದು ಸ್ಥಿರವಾಸ್ತವ್ಯವನ್ನು ಕಂಡುಕೊಳ್ಳಲು ಹೊರಡುವ ಪ್ರಕ್ರಿಯೆಯನ್ನು ಇಲ್ಲಿ ಲೇಖಕರು ಕತೆಯ ಕೊನೆಗೆ ಸೂಚಿಸುತ್ತಾರೆ. ಹೀಗಾಗಿ ಒಂದು ಹಂತದಲ್ಲಿ ಸ್ಥಿರವಾಸ್ತವ್ಯವಾಗಿದ್ದ ಪ್ರದೇಶ ಕಾಲ ನಂತರ ಮತ್ತೇ ಮೂಲ ನೆಲೆಯಾಗಬಲ್ಲದು ಎಂಬುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ. ಅದೇ ರೀತಿ ಇವರ ಮೂಲ ನೆಲೆಯಲ್ಲಿ ಹಸಿವು ಬಡತನವಷ್ಟೆ ಕಾಣುತ್ತಿತ್ತು. ಆದರೆ ವಲಸೆ ಬಂದ ಮೇಲೆ ಆ ಕಷ್ಟಗಳು ತೀರಿದರೂ ಶಾಣಪ್ಪ ಮಾನಸಿಕ ತೊಳಲಾಟಕ್ಕೆ ಗುರಿಯಗುತ್ತಾನೆ. ಹೆಂಡತಿಯನ್ನು ಗೌಡನಿಗೆ ಬಿಟ್ಟುಕೊಟ್ಟು ತ್ಯಾಗಮಹಿ ಆಗುತ್ತಾನೆ. ಹೀಗಾಗಿ ಇವರ ಸ್ಥಿರವಾಸ್ತವ್ಯದ ಬದುಕಿನಲ್ಲಿ ಅನಿವಾರ್ಯತೆ, ಹೊಂದಾಣಿಕೆ, ಮಾನಸಿಕ ತೊಳಲಾಟ ಹೆಚ್ಚಾಗಿ ಕಾಣಿಸುತ್ತದೆ.

ಗೀತಾ ನಾಗಭೂಷಣರವರ ಮತ್ತೊಂದು ಕಥೆಯಾದ 'ನಿತ್ಯ ನರಳುವ ಮಂದಿ' ಯಲ್ಲಿ ಮೂಲ ನೆಲೆ ಮತ್ತು ಸ್ಥಿರವಾಸ್ತವ್ಯದ ಬದುಕು ಎರಡನ್ನು ಸಮರ್ಥವಾಗಿ ಕಟ್ಟಿ ಕೊಡುತ್ತಾರೆ. ಇಲ್ಲಿ ಬರುವ ರತನಿ ಮತ್ತು ತಿಪ್ಪಣ್ಣನ ಬದುಕಿನ ಚಿತ್ರಣ ಇಲ್ಲಿದೆ. ಕತೆಯ ಶೀರ್ಷಿಕೆಯೇ ಹೇಳುವಂತೆ ಬಡವರ ಹಸಿವು, ದಾರಿದ್ರ್ಯ, ಶೋಷಣೆ ಅವರು ಎಲ್ಲೇ ಇದ್ದರೂ ನಿತ್ಯ ನರಳುವಂತೆ ಮಾಡುತ್ತದೆ ಎಂಬುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ. "ಕರ್ನಾಟಕ ಮತ್ತು ಮರಾಠವಾಡದ ಗಡಿನಾಡು ಇರೋ ಕಿಲಾರಿ ಎಂಬ ಹಳ್ಳಿಯವರು ಆ ಹಳ್ಳಾಗ ಇವರಿಗೊಂದು ಎಡ್ಡಂಕಣದ ಮನಿ, ಎಡೆತ್ತು, ಗಳ್ಯಾಗಾಡಿ, ಒಕ್ಕುಲತನ, ರತನಿ ಮೈಮ್ಯಾಲ ಬೋರಮಳಾ ಸರ, ಜೇರಾಮಣಿ, ರಟ್ಟಿ, ಖಡ್ಯಾ, ಒಂಕಿ ಅಂತ ಒಂದೀಟು ಬಂಗಾರ, ಬೆಳ್ಳಿ ಹೀಗೆ ಎಲ್ಲಾ ತರಹದಲ್ಲೂ ಅನುಕೂಲದಿಂದ ತಿಂದುಂಡು ಹಾಯಾಗಿ ಬದುಕು ನೂಕುತ್ತಿದ್ದವರು" (ಗೀತಾ ನಾಗಭೂಷಣ, ೨೦೦೬, ಪು.೩೨೨) ದುಃಖದ ಮುನ್ಸೂಚನೆಯಾಗಿ ಉಂಟಾದ ಭೂಕಂಪದಿಂದ ಎಲ್ಲವನ್ನು ಕಳೆದುಕೊಂಡು ಕಲಬುರ್ಗಿಗೆ ಬಂದು ನೆಲಯೂರುತ್ತಾರೆ. ಅಲ್ಲಿ ಸಹಾಯ ಮಾಡುವ ನೆಪದಲ್ಲಿ ಅಲ್ಲಿಯ ಶ್ರೀಮಂತ ರತನಿಯನ್ನು ತನ್ನ ಕಾಮಕ್ಕೆ ಬಳಸಿಕೊಳ್ಳುವ ಮೂಲಕ ಶೋಷಣೆಗೊಳಪಡಿಸುತ್ತಾನೆ.

ಹೀಗಾಗಿ ಮೂಲ ನೆಲೆಯಲ್ಲಿ ಎಲ್ಲವೂ ಇದ್ದು ಹಾಯಾಗಿ ಬದುಕುತ್ತಿದ್ದಂತಹ ಕುಟುಂಬ ಅನಿವಾರ್ಯ ಕಾರಣದಿಂದ ಎಲ್ಲವನ್ನು ಕಳೆದುಕೊಂಡು ಮತ್ತೊಂದು ಪ್ರದೇಶಕ್ಕೆ ಬಂದು ಗೊತ್ತಿರದ ಭಾಷೆಯನ್ನು ಕಲಿತು ಬದುಕುತ್ತಾರೆ. ಜೊತೆಗೆ ತಮ್ಮ ಮೂಲನೆಲೆಯ ಬದುಕನ್ನು ನೆನಪಿಸಿಕೊಳ್ಳುತ್ತ ತಮಗಾಗುತ್ತಿರುವ ಅನ್ಯಾಯವನ್ನು ಸಹಿಸುತ್ತ ಅನಿವಾರ್ಯವಾಗಿ ಬದುಕುವ ಕತೆ ಇದಾಗಿದೆ. ಕೊನೆಗೂ ಜೀವ ಉಳಿಸಿಕೊಳ್ಳಲು ಬಂದವರಿಗೆ ಉಂಟಾಗುವ ಬದುಕಿನ ನಾನಾ ತರಹದ ಶೋಷಣೆಯ ಸ್ವರೂಪ ಅಸಹಾಯಕತೆ, ಹೊಂದಾಣಿಕೆ ಕೇವಲ ಅನಿವಾರ್ಯತೆಯೇ ಹೊರತು ಸುಖದಾಯಕವಲ್ಲ ಎಂಬ ಮಾತನ್ನು ಇಲ್ಲಿ ಸ್ಪಷ್ಟೀಕರಿಸಬಹುದು.

ರಂ.ಶ್ರೀ.ಮುಗಳಿರವರ 'ಅನ್ನ' ಕಾದಂಬರಿಯಲ್ಲಿ ಬರುವ ಅನೇಕ ಕುಟುಂಬಗಳು ಬಂಗಾಲ ಪ್ರಾಂತ್ಯದಲ್ಲಿ ಉಂಟಾದ ಬರಗಾಲದಿಂದಾಗಿ ಹೊಲ, ಮನೆ ಕಳೆದುಕೊಂಡು ನಿರ್ಗತಿಕರಾಗಿ ಸ್ಥಿರವಾಸ್ತವ್ಯವನ್ನು ಅರಸಿ ಪಟ್ಟಣಗಳಿಗೆ ವಲಸೆ ಬಂದು ನಾನಾ ತರದ ಶೋಷಣೆಗಳಿಗೆ ಒಳಗಾಗುತ್ತಾರೆ. ತಮ್ಮ ಮೂಲ ನೆಲೆಯಲ್ಲಿ ತಿಂದುಂಡು ಹಾಯಾಗಿ ಕಳೆಯುತ್ತಿದ್ದ ಜೀವನವನ್ನು ನೆನಸಿಕೊಳ್ಳುತ್ತ ಸ್ಥಿರವಾಸ್ತವ್ಯದ ನರಕಯಾತನೆಯನ್ನು ಅನುಭವಿಸುತ್ತಾರೆ. ಗೌಡರ ಮನೆಯ ಸೊಸೆಯಾಗಿ ಹೋದ ಶರಣಕ್ಕ ಅತ್ತೆ, ಮಾವ, ಗಂಡ, ಮಕ್ಕಳೊಂದಿಗೆ ನೆಮ್ಮದಿಯಿಂದ ಬದುಕುತ್ತಿದ್ದ ಪಾತ್ರಗಳು ಹೊಲಗಳಲ್ಲಿ ಕೆಲಸ ಮಾಡಲು ಗೊತ್ತಿರದ ಶ್ರೀಮಂತ ವರ್ಗದಿಂದ ಬಂದ ಕಾರ್ಮಿಕ ವರ್ಗ ಪಡಬಾರದ ಪಾಡನ್ನು ಅನುಭವಿಸುತ್ತದೆ. ಹೀಗೆ ಮೂಲನೆಲೆ "ಸ್ಥಿರವಾಸ್ತವ್ಯದ ಬದುಕಿನ ಚಿತ್ರಣಗಳು ಇಲ್ಲಿ ಮೂಡಿಬಂದಿವೆ. ಸುಖದಾಯಕವಾಗಿದ್ದ ಬದುಕು ದಿಢೀರನೆ ದುಃಖಕ್ಕೀಡಾಗಿ ವಲಸೆ ಬಂದು ಮತ್ತಷ್ಟು ನೋವಿಗೆ ಸಿಲುಕುವ ಮೂಲಕ ತಮ್ಮ ವಲಸೆಯನ್ನು ಸ್ಮರಿಸುವ ಕುಟುಂಬಗಳು ಇಲ್ಲಿ ಕಂಡುಬರುತ್ತವೆ. ಇದಷ್ಟೇ ಅಲ್ಲದೇ ವಯಸ್ಸಾದವರು, ದನಕರುಗಳನ್ನು ಬಿಟ್ಟು ಬಂದ ಈ ಕುಟುಂಬಗಳಿಗೆ ಬದುಕಿರುವ ಅಥವಾ ಸತ್ತಿರುವ ಖಚಿತ ಯಾವ ಮಾಹಿತಿಯು ದಕ್ಕದೆ ಸದಾ ಅವರ ಗುಂಗಿನಲ್ಲಿ ನರಳುತ್ತ ತಮ್ಮ ಸ್ಥಿರ ವಾಸ್ತವ್ಯದ ಬದುಕನ್ನು ನಡೆಸುವ ಸಂದರ್ಭಗಳು ಇಲ್ಲಿ ಮೂಡಿ ಬಂದಿವೆ.

ಹಾಗೆಯೇ ಇದೇ ಬರಗಾಲದ ಕಾರಣದಿಂದಾಗಿ ಇಡೀ ಊರಿಗೆ ಊರೇ ಪಟ್ಟಣಕ್ಕೆ ವಲಸೆ ಬರುವ ಸಂದರ್ಭ ಕೆ.ವಿ.ರಾವ್‌ರವರ 'ದರಿದ್ರರು' ಕಾದಂಬರಿಯಲ್ಲಿ ಕಾಣಬಹುದು. ಬರಗಾಲವನ್ನು ನೀಗಿಸಲು ಜನರ ವಲಸೆಯನ್ನು ತಪ್ಪಿಸಲು ಸರ್ಕಾರ ಏನೆಲ್ಲ ಯೋಜನೆಗಳನ್ನು ಕೈಗೊಂಡರೂ, ಅವು ಅಧಿಕಾರಿಗಳ ದುರ್ಬಳಕೆಯಿಂದ ಜನರ ಕಷ್ಟಕ್ಕೆ ನೆರವಾಗದೇ ಮತ್ತೇ ಪಟ್ಟಣಗಳಿಗೆ ಗುಂಪುಗುಂಪುಗಳ ಮೂಲಕ ದೊಡ್ಡ ದೊಡ್ಡ ನಗರಗಳಿಗೆ ವಲಸೆ ಬಂದು ಕೊಳಚೆ ಕೊಂಪೆಗಳಲ್ಲಿ ನೆಲೆಯಾಗುತ್ತಾರೆ. ಬದುಕಿಗೊಂದು ಸ್ಥಿರವಾಸ್ತವ್ಯವನ್ನು ಕಂಡುಕೊಂಡರು. ಹಸಿವನ್ನು

ನೀಗಿಸಿಕೊಳ್ಳಲು ಕಳ್ಳತನ, ಮೋಸ, ವಂಚನೆಗೆ ಗುರಿಯಾಗಿ ಸಮಾಜ ಕಂಟಕರಾಗಿ ಜೀವಿಸುವ ಅನಿವಾರ್ಯತೆಗೆ ಒಳಗಾಗುತ್ತಾರೆ. ಇದಷ್ಟೇ ಅಲ್ಲದೆ ಕೊಳಚೆ ಕೊಂಪೆಯಲ್ಲಿ ಜೀವಿಸುವ ಮೂಲಕ ಅನೇಕ ರೋಗಗಳಿಗೆ, ಅತ್ಯಾಚಾರಕ್ಕೆ ಬಲಿಯಾಗುತ್ತಾರೆ. ಇವರು ಮೂಲ ನೆಲೆಯಲ್ಲಿ ಪ್ರಾಕೃತಿಕ ವಿಕೋಪ ಮತ್ತು ಸರ್ಕಾರದ ಯೋಜನೆಗಳ ಅಧಿಕಾರಿಗಳ ಸಮಸ್ಯೆಗಳಿಗೆ ಬಲಿಯಾದರೆ ಸ್ಥಿರವಾಸ್ತವ್ಯದಲ್ಲಿ ಇರಲು ನೆಲೆ ಇಲ್ಲದೇ ಹೊಟ್ಟೆಗೆ ಊಟವಿಲ್ಲದೆ, ದರಿದ್ರರಾಗಿ ಬದುಕು ಸಾಗಿಸುವ ಅನಿವಾರ್ಯತೆಯನ್ನು ಇಲ್ಲಿ ಕಾಣಬಹುದು. ಹೀಗೆ ಇವರ ಬದುಕು ಮೂಲ ನೆಲೆ, ಸ್ಥಿರ ವಾಸ್ತವ್ಯ ಎರಡಲ್ಲೂ ಬಡತನ, ಹಸಿವು, ಸಾವು, ನೋವುಗಳಿಗೆ ಬಲಿಯಾಗುವ ದುರಂತದ ಕತೆಯಾಗಿ ಇಲ್ಲಿ ಮೂಡಿಬರುತ್ತದೆ.

ವಿ.ಎಂ.ಇನಾಂದಾರವರ 'ತ್ರಿಶಂಕು' ಕಾದಂಬರಿಯಲ್ಲಿ ಶಿಕ್ಷಣ ಮತ್ತು ಉದ್ಯೋಗಕ್ಕಾಗಿ ಭಾರತದಿಂದ ಅಮೇರಿಕಾಗೆ ಹೋದ ವ್ಯಕ್ತಿಗಳ ಮೂಲ ನೆಲೆ ಮತ್ತು ಸ್ಥಿರವಾಸ್ತವ್ಯಗಳಲ್ಲಿ ಇರುವ ತೊಳಲಾಟಗಳನ್ನು ಈ ಕೃತಿ ಚಿತ್ರಿಸುತ್ತದೆ. ಕಥಾ ನಾಯಕ ನಾಗರಾಜ ತನ್ನ ಬಂದು ಬಳಗವನ್ನು ಬಿಟ್ಟು ಸಿನಿಯರ್ ಪೇಲೊಶಿಪ್‌ಗಾಗಿ ನಾರ್ಟನ್ ವಿಶ್ವವಿದ್ಯಾಲಯಕ್ಕೆ ಹೋಗಿ ತಿರುಗಿ ತನ್ನ ಮೂಲ ನೆಲೆಗೆ ಬರಬೇಕೆಂದಾಗ ತೊಳಲಾಡುತ್ತಾನೆ. ಇದಕ್ಕೆ ಕಾರಣ ಇಂದಿನ ಜಾಗತೀಕರಣ, ಐಷರಾಮಿ ಜೀವನವೇ ಕಾರಣವಾಗುತ್ತದೆ. ಆದರೆ ಇದೇ ಕತೆಯಲ್ಲಿ ಬರುವ ಇನ್ನಿತರ ಪಾತ್ರಗಳಾದ ಚಂದ್ರಿಕ, ಮಂಗಸೂಳೆ, ಪ್ರಸಾದ್ ಪಾತ್ರಗಳು ಬಹುಬೇಗ ತಮ್ಮ ಕೆಲಸವನ್ನು ಮುಗಿಸಿಕೊಂಡು ತಮ್ಮ ಮೂಲನೆಲೆಗೆ ತೆರಳಬೇಕೆಂಬ ಕಾತರ ಎದ್ದು ಕಾಣುತ್ತದೆ. ಹೀಗೆ ಭಾರತದಿಂದ ಹೋದ ಎಲ್ಲ ಕುಟುಂಬಗಳಿಗೂ ಅಮೆರಿಕ ವಾಸ ಅನಿವಾರ್ಯವಾದರೆ ನಾಗರಾಜನಿಗೆ ಭಾರತಕ್ಕೆ ಬರುವುದೇ ಅನಿವಾರ್ಯವಾಗುತ್ತದೆ. ಈ ತರಹದ ಭಿನ್ನ ಮನೋಭಾವ ಭಿನ್ನ ವ್ಯಕ್ತಿತ್ವ ಇರುವ ಇಂತಹ ವ್ಯಕ್ತಿಗಳು ಇವತ್ತಿನ ದಿನಗಳಲ್ಲಿ ಜಾಗತೀಕರಣ ಪ್ರಭಾವದಿಂದ ಐಷರಾಮಿ ಜೀವನಕ್ಕೆ ಜೊತು ಬೀಳುವ ಇಂದಿನ ಯುವಕರ ಆಲೋಚನೆಗಳಿಗೆ ಈ ಪಾತ್ರ ಸೂಕ್ತವೆನಿಸುತ್ತದೆ. ಆದರೆ ಪ್ರಸಾದ್ ಅಂತಹ ದೇಶಭಕ್ತಿ ಉಳ್ಳವರು ತನ್ನ ನೆಲೆ ತನ್ನ ದೇಶವೆಂಬ ಪ್ರೀತಿಯ್ನು ಹೊತ್ತು ಅನಿವಾರ್ಯವಾಗಿ ವಲಸೆ ಬಂದು ಅನಿವಾರ್ಯವಾಗಿ ಸ್ಥಿರವಾಸ್ತವ್ಯದಲ್ಲಿ ಮೂಲ ನೆಲೆಯ ನೆನಪಿಸಿನೊಂದಿಗೆ ಬದುಕುವ ರೀತಿಯೇ ಹೆಚ್ಚಾಗಿ ಕಾಣಿಸುತ್ತದೆ.

ಸುಧಾಮೂರ್ತಿಯವರ 'ಡಾಲರ್ ಸೊಸೆ' ಕಾದಂಬರಿಯಲ್ಲಿ ಸ್ವದೇಶಿ ಮತ್ತು ವಿದೇಶಿಯಲ್ಲಿನ ಎರಡು ಭಿನ್ನ ರಾಷ್ಟ್ರಗಳ ಸಂಸ್ಕೃತಿಯ ನಡುವೆ ಬದುಕುವ ಜನರ ತಳಮಳಗಳು, ಸಮಸ್ಯೆಗಳು, ಅನುಕೂಲ, ಅನಾನುಕೂಲಗಳ ಬಗೆಯನ್ನು ಇಲ್ಲಿ ನಿರೂಪಿಸುತ್ತಾರೆ. ಈ ಕತೆಯ ನಾಯಕ ಚಂದ್ರು ಉದ್ಯೋಗಕ್ಕಾಗಿ ಧಾರವಾಡಕ್ಕೆ ವಲಸೆ ಹೋಗಬೇಕಾಗಿ ಬಂದಾಗ ಹಣದ ಮೋಹವೂ

ಹೆಚ್ಚು? ನೆಲದ ಮೋಹವೂ ಹೆಚ್ಚು? ಎಂದು ಚಿಂತಿಸುತ್ತಾ ಅನಿವಾರ್ಯವಾಗಿ ಹೋಗಿ ನೆಲೆಯಾಗುತ್ತಾನೆ. ಆದರೆ ಅದೇ ಕಂಪನಿಯ ಕಡೆಯಿಂದ ಅಮೆರಿಕಗೆ ವಲಸೆ ಹೋಗಬೇಕಾಗಿ ಬಂದಾಗ ಚಂದ್ರು ತನ್ನ ಮೂಲನೆಲೆಯನ್ನ ಲೆಕ್ಕಿಸದೇ ಐಷಾರಾಮಿ ಜೀವನದ ವ್ಯಾಮೋಹಕ್ಕೆ ಬಲಿಯಾಗಿ ಅಮೇರಿಕಾದಲ್ಲಿ ನೆಲೆಸುತ್ತಾನೆ. ಆದರೆ ಅಮೆರಿಕಾದ ಸಂಸ್ಕೃತಿಯನ್ನು ಅನುಭವಿಸಿದ ಕಾಲ ನಂತರ ಅಲ್ಲಿಯ ಐಷಾರಾಮಿ ಜೀವನಕ್ಕೆ ಹೊಂದಿಕೊಂಡು ತನ್ನ ದೇಶದ ಜೀವನವನ್ನು ಮರೆಯಲೆತ್ನಿಸುತ್ತಾನೆ.

ಹಾಗೆಯೆ ಇಲ್ಲಿ ಬರುವ ಇನ್ನಿತರ ಪಾತ್ರಗಳಾದ ಚಿತ್ರ, ವತ್ಸಲಾ, ಆಶಾ, ಪಾಟೀಲ್‌ನಂತರಹ ಅನೇಕ ಪಾತ್ರಗಳು ಭಾರತದಲ್ಲಿನ ಜಾತಿ, ಸಂಪ್ರದಾಯಗಳಿಂದ ಶೋಷಿತಗೊಂಡು ಅಮೇರಿಕಾಗೆ ಬಂದು ನೆಮ್ಮದಿ ಜೀವನ ನಡೆಸುತ್ತಿರುವ ವಿವರಗಳು ಇಲ್ಲಿ ಸಿಗುತ್ತವೆ. ಹಾಗಾಗಿ ಐಷಾರಾಮಿ ಜೀವನಕ್ಕೆ ಆಸೆ ಪಟ್ಟು ಬಂದ ಕೆಲವು ಪಾತ್ರಗಳಿಗೆ ತಮ್ಮ ಮೂಲನೆಲೆಯ ಹಂಗಿಲ್ಲದ ಸ್ಥಿರವಾಸ್ತವ್ಯದಲ್ಲಿ ಹಣದ ವ್ಯಾಮೋಹದಲ್ಲೆ ಬದುಕಿದರೆ, ಇನ್ನು ಕೆಲವು ಪಾತ್ರಗಳು ಮೂಲನೆಲೆಯಲ್ಲಿನ ಸಮಸ್ಯೆಗಳಿಂದ ಮುಕ್ತಗೊಳ್ಳಲು ಸ್ಥಿರವಾಸ್ತವ್ಯವನ್ನು ಕಂಡುಕೊಳ್ಳುವ ಮೂಲಕ ನೆಮ್ಮದಿ ಕಾಣುತ್ತವೆ.

ಹೀಗಾಗಿ ಎರಡು ದೇಶದ ಸಂಸ್ಕೃತಿಗಳು ಬೇರೆಯಾದರೂ ಹೇಗೊ ಹೊಂದಿಕೊಂಡು ಹಣ ಸಂಪಾದಿಸಬೇಕೆಂಬ ವ್ಯಾಮೋಹವೇ ಹೆಚ್ಚಾಗಿ ಕಾಡುತ್ತದೆ. ಹಾಗಾಗಿ ಇಲ್ಲಿ ಮೂಲ ನೆಲೆಯು ಸಂಬಂಧ, ನೆಲ, ದೇಶ ಎಂಬ ಯಾವ ಭಾವನಾತ್ಮಕ ಸಂಬಂಧಗಳು ಇಂದಿನ ಯುವಕರಿಗೆ ಕಾಣಿಸುವುದಿಲ್ಲ. ಆದರೆ ಇಲ್ಲಿ ಬರುವ ಚಂದ್ರುವಿನ ತಾಯಿಯು ಗೌರಮ್ಮನಿಗಿದ್ದ ಅಮೇರಿಕಾದ ಹುಚ್ಚು ಅಮೇರಿಕಾಗೆ ಹೋದ ನಂತರ ಅಲ್ಲಿನ ಜೀವನ ಶೈಲಿಗೆ ಹೊಂದಿಕೊಳ್ಳಲಾಗದೆ ಭಾರತಕ್ಕೆ ವಾಪಸ್ಸಾಗುತ್ತಾಳೆ. ಇದು ಹಿಂದಿನ ತಲೆಮಾರಿನವರ ಜೀವನ ಶೈಲಿಯನ್ನು ಬದಲಾಯಿಸಲಾಗದ ವ್ಯಕ್ತಿತ್ವವುಳ್ಳವರ ಮನೋಭಾವವಾಗಿದೆ.

ಹೀಗಾಗಿ ಇಲ್ಲಿ ಹೆಚ್ಚು ಇಚ್ಚಾಪೂರ್ವಕವಾಗಿ ಮೂಲೆ ನೆಲೆಯನ್ನು ತೊರೆದು ಸ್ಥಿರ ವಾಸ್ತವ್ಯದಲ್ಲಿ ತಮ್ಮ ಬದುಕನ್ನು ಕಂಡುಕೊಳ್ಳಲು ಬಯಸುವವರ ಮನೋಧರ್ಮವನ್ನು ಇಲ್ಲಿ ಚಿತ್ರಿಸುತ್ತದೆ.

ಡಾ.ಡಿ.ವಿ.ಗುರುಪ್ರಸಾದ್‌ರವರ 'ಬೇರು' ಕಾದಂಬರಿಯ ಶೀರ್ಷಿಕೆಯೇ ಹೇಳುವಂತೆ ಇಲ್ಲಿ ಬೇರು ಎಂದರೇ ತನ್ನ ಮೂಲ ನೆಲೆ ಎಂದು ತೋರುತ್ತದೆ. ಇಲ್ಲಿ ಬರುವ ಕಥಾನಾಯಕ ಆದಿತ್ಯ ತಂದೆ, ತಾಯಿಗೆ ಪ್ರೀತಿಯ ಒಬ್ಬನೇ ಮಗನಾಗಿ ಬೆಂಗಳೂರಿನಲ್ಲಿ ಎಲೆಕ್ಟ್ರಿಕಲ್ ಇಂಜಿನಿಯರಾಗಿ ಕೆಲಸ ಮಾಡುತ್ತ ನೆಮ್ಮದಿ ಜೀವನ ಮಾಡುತ್ತಿದ್ದ. ಈತ ಅಮೇರಿಕಾಗೆ ಹೋಗಿ ಐಷಾರಾಮಿ ಜೀವನದಿಂದ ಬದುಕಬೇಕೆಂದು ಆಸೆಪಡುವ ಹೆಂಡತಿಯ ಒತ್ತಾಯದಿಂದ ತನ್ನ ಮೂಲ ನೆಲೆಯನ್ನು ಬಿಟ್ಟು ಅನಿವಾರ್ಯವಾಗಿ ತನ್ನ ಹೆಂಡತಿ, ಮಕ್ಕಳೊಂದಿಗೆ ತಂದೆ ತಾಯಿಯನ್ನು ಬೆಂಗಳೂರಿನಲ್ಲಿ ಬಿಟ್ಟು ಅಮೇರಿಕಾಕ್ಕೆ ವಲಸೆ ಹೋಗಿ ನೆಲೆಸುತ್ತಾನೆ. ಆದರೆ ಭಾವನೆಗೆ ಬೆಲೆ ಕೊಡದ ಯಾಂತ್ರಿಕ

ಬದುಕಿನ ಅಮೇರಿಕಾದ ಜೀವನದಲ್ಲಿ ಹೆಂಡತಿಯ ಅನೈತಿಕ ಸಂಬಂಧ ನೋಡಿ ದುಃಖಿತನಾಗಿ ತನ್ನ ಮಗನನ್ನು ಕಳೆದುಕೊಂಡ ದುಃಖದಲ್ಲಿ ಬೆಂದು ಹೋಗುತ್ತಾನೆ. ಆದರೆ ತನ್ನ ಮೂಲನೆಗೆ ಬರಬೇಕೆಂದರೆ ತಾನು ಬಿಟ್ಟು ಹೋದ ದುಃಖದಲ್ಲಿ ಆತ್ಮಹತ್ಯೆ ಮಾಡಿಕೊಂಡ ತಂದೆ ತಾಯಿಯರ ದುಃಖದಲ್ಲಿ ತಾನು ಅಮೇರಿಕಾದಲ್ಲಿ ಸಾಧಿಸಬೇಕೆಂದು ದೊಡ್ಡ ಸ್ವಾಮೀಜಿಯಾಗಿ ಬೆಳೆಯುತ್ತಾನೆ. ಆದರೆ ತಾನು ಏನೇ ಸಾಧಿಸಿದರೂ ತಾನು ಸತ್ತಾಗ ಸುಟ್ಟ ಭಸ್ಮವನ್ನಾದರೂ ತನ್ನ ಮಣ್ಣಿಗೆ ತನ್ನ ಮೂಲ ಬೇರಿಗೆ ಸೇರಬೇಕೆಂದು ಆಸೆ ಪಡುತ್ತಾನೆ. ಹೀಗೆ ಸುಖವಾಗಿ ತಂದೆ ತಾಯಿಯೊಂದಿಗೆ ನೆಮ್ಮದಿಯಿಂದ ಬದುಕುತ್ತಿದ್ದ ಆದಿತ್ಯನ ಜೀವನ ಅಮೇರಿಕದಲ್ಲಿ ಸ್ಥಿರವಾಸ್ತವದಲ್ಲಿ ಅತ್ಯಂತ ನರಕಯಾತನೆಯಾಗಿ ಪರಿವರ್ತನೆಯಾಗುತ್ತದೆ. ಕೊನೆಗೂ ತಾನು ಸತ್ತ ಬಳಿಕ ಸುಟ್ಟ ದೇಹದ ಬೂದಿ ಭಾರತದಲ್ಲಿ ಲೀನವಾಗುತ್ತದೆ.

ಬೆನಕನಹಳ್ಳಿ ಜಿ.ನಾಯಕರವರ 'ವಲಸೆ' ಕಾದಂಬರಿಯಲ್ಲಿ ಬರಗಾಲದಿಂದಾಗಿ ಹೊಟ್ಟೆಪಾಡಿಗಾಗಿ ಬದುಕನ್ನು ಅರಸಿಕೊಂಡು ಬಯಲುನಾಡಿನಿಂದ ಮಲೆನಾಡಿಗೆ ಬರುವ ಲಂಬಾಣಿ ಸಮುದಾಯದವರ ಸ್ಥಿರವಾಸ್ತವ್ಯದ ಕತೆ ಸಂವೇದನಾತ್ಮಕವಾಗಿ ಮೂಡಿ ಬಂದಿದೆ. ಮೂಲನೆಲೆಯ ಕುರಿತ ವಿವರಣೆ ಇಲ್ಲಿ ಇರದಿದ್ದರೂ ಕತೆಯ ಆರಂಭದಲ್ಲಿ ಸ್ಥಿರವಾಸ್ತವ್ಯದತ್ತ ಸಾಗುತ್ತಿರುವ ಒಂದು ಜನಾಂಗದ ಅನಿವಾರ್ಯತೆಯನ್ನು ಮೂಲನೆಲೆಯಲ್ಲಿ ಉಂಟಾದ ಬರಗಾಲದ ಚಿತ್ರಣವನ್ನು ಕಟ್ಟಿಕೊಡುತ್ತದೆ. ಇಲ್ಲಿ ಹೆಚ್ಚು ವ್ಯಕ್ತವಾಗುವ ಸ್ಥಿರವಾಸ್ತವ್ಯದ ಕತೆಯಲ್ಲಿ ಲಂಬಾಣಿಗರು ಶ್ರೀಮಂತ ವರ್ಗದವರ ಶೋಷಣೆಯಿಂದ ತಪ್ಪಿಸಿಕೊಂಡು ಮತ್ತೆ ತಮ್ಮ ಮೂಲನೆಲೆಗೆ ಹೋಗಲು ಆಗದೇ ನರಳುವಂತಾಗುತ್ತದೆ. ಮೊದಲೇ ಸಾಂಸ್ಕೃತಿಕತೆಗೆ ಹೆಸರಾದ ಲಂಬಾಣಿಗರಿಗೆ ತಮ್ಮ ಮೂಲನೆಲೆಯಲ್ಲಿ ಹಬ್ಬ ಹರಿದಿನಗಳ ಸಡಗರದಿಂದ ಆಚರಿಸುತ್ತಿದ್ದ ಸಂದರ್ಭವನ್ನು ಸ್ತಿರವಾಸ್ತವ್ಯದಲ್ಲಿ ನೆನಪಿಸಿಕೊಳ್ಳುವ ಈ ಸಂದರ್ಭವನ್ನು ನೋಡಬಹುದು. "ತಾಂಡ್ಯಾಗ ಇದ್ದಾಗ ಅದೇನ್ ಸಡಗರದಿಂದ ಹಬ್ಬ ಮಾಡ್ತಿದ್ದೀವಿ ಹಬ್ಬ ಅಂದ್ರೆ ಸಾಕು ದೂರ ದೂರದ ತಾಂಡ್ಯಾಗಳಿಂದ ಯಾಪಾಟಿ ಜನ ಬರುತ್ತಿದ್ದರು. ಅಂದ್ರೆ ಈ ಕಾಡ್ನಲ್ಲಿ ದೇವರೇ ಕಾಪಾಡಬೇಕು."(ಬೆನಕನಹಳ್ಳಿ ಜಿ.ನಾಯಕ, ೧೯೮೩, ಪು.೮೯) ಈಗಾಗಲೇ ತಾಂಡಿದೊಳಗ ಹದ ಮಳೆಯಾಗಿರಬೇಕು. ಬೇಸಾಯ ಹೂಡೂರಿರೇಲ್ದೆ ತಾಂಡವಳಗ ಉಳ್ಕೊಂಡಿರೋ ಮಂದಿ ಬಂದವರ ದಾರಿ ಕಾಯ್ದಿರಬೇಕು. ಈಷ್ಟೊತ್ತಿಗಾಗಲೇ ಪೈರು ಗೇಣುದ್ದ ಇರಬೇಕಾಗಿತ್ತು. ಹುಣಸಿ ಮರಗಳಿಗೆ ಜೀವ ಬಂದಿರುವಂತಾಗಿ ನಳ ನಳಿಸುತ್ತಿರಬೇಕು? ಹುಣಸಿಮರ್ದ ವಾರಸುದಾರರಿಲ್ಲಾಂತ ಪಕ್ಕದ ಹಟ್ಟಿಯೋರು ಕಡ್ದ ಬಿಟಿದ್ರೆ ಮುಗಿತು".(ಬೆನಕನಹಳ್ಳಿ ಜಿ.ನಾಯಕ, ೧೯೮೩, ಪು.೭೯) ಎಂದು ತಿರುಗಿ ತಮ್ಮ ಮೂಲ ನೆಲೆಗೆ ಹೋಗಬೇಕೆಂಬ ಆಲೋಚನೆ ತಲೆಯಲ್ಲಿ ತುಂಬಿತ್ತು.

ಹೀಗೆ ಹೊಟ್ಟೆಪಾಡಿಗಾಗಿ ಬಂದ ಒಂದು ಸಮುದಾಯ ಸ್ಥಿರವಾಸ್ತವ್ಯದಲ್ಲಿ ನೆಮ್ಮದಿ ಕಾಣದೇ, ತಿರುಗಿ ತಮ್ಮ ನೆಲೆಗೆ ಹೋಗಬೇಕೆಂಬ ಹಂಬಲ ಈ ಸಂದರ್ಭದಲ್ಲಿ ಕಾಣಿಸುತ್ತದೆ.

ನಾ.ಡಿಸೋಜರವರ 'ಕೊಳಗ' ಕಾದಂಬರಿಯಲ್ಲಿ ಕಥಾನಾಯಕ ದ್ಯಾವ ತನ್ನ ಹೆಂಡತಿಯ ಮೇಲೆ ಗೌಡ ನಡೆಸಿದ ಲೈಂಗಿಕ ಶೋಷಣೆಯನ್ನು ಹೆದರಿಸಲಾಗದೆ ತನ್ನ ಹಳ್ಳಿಯನ್ನು ಬಿಟ್ಟು ತಡಗಳಲೆ ಎಂಬ ಹಳ್ಳಿಗೆ ಮತ್ತೊಂದು ಗೌಡನ ಹತ್ತಿರ ಗೇಣಿಗೆ ಹೊಲ ಮಾಡಲು ಸಂಸಾರ ಸಮೇತ ಹೋಗುತ್ತಾನೆ. ತಡಗಳಲೆಯಲಿ ಆರಂಭದಲ್ಲಿ ಭತ್ತವನ್ನು ಅಳೆಯುವ ಕೊಳಗದಲ್ಲಿ ಮಾಡುತ್ತಿದ್ದ ಮೋಸದಿಂದ ಶೋಷಿತಗೊಂಡರೂ ಕೊನೆಗೆ ಭೂ ಚಳುವಳಿ ಮೂಲಕ ಉಳುವವರಿಗೆ ಭೂ ಒಡೆಯ ನೀತಿ ಜಾರಿಗೆ ಬರುವಂತಾಗುತ್ತದೆ.

ದ್ಯಾವನ ಕುಟುಂಬ ತನ್ನ ಮೂಲ ನೆಲೆಯಲ್ಲಿ ಬಡತನ, ಜೀತ ಪದ್ಧತಿ, ಲೈಂಗಿಕ ಶೋಷಣೆ ಯನ್ನು ಅನುಭವಿಸುತ್ತಿದ್ದರೂ ತನ್ನವರು, ಬಂಧು, ಬಳಗ, ವಿಶ್ವಾಸ, ಪರಿಸರ ಎಂಬ ಸಂಗತಿಗಳಿಂದ ನೆಮ್ಮದಿಯಿಂದ ಬದುಕುತ್ತಿದ್ದ ಕುಟುಂಬಕ್ಕೆ ಗೌಡನ ಲೈಂಗಿಕ ಶೋಷಣೆ ದ್ಯಾವನ ಕುಟುಂಬ ಮತ್ತೊಂದು ಹಳ್ಳಿಗೆ ಬರುವಂತೆ ಮಾಡುತ್ತದೆ. ಮೂಲನೆಲೆಯಲ್ಲಿ ಕಾಣದ ನೆಮ್ಮದಿ ದ್ಯಾವನ ಕುಟುಂಬಕ್ಕೆ ಸ್ಥಿರವಾಸ್ತವ್ಯದಲ್ಲಿ ಸ್ವಲ್ಪಮಟ್ಟಿನ ನೆಮ್ಮದಿ ಕಂಡರೂ, ಕೊಳಗ ವಿಷಯದಲ್ಲಿ ಮಾಡುವ ಮೋಸ ಶೋಷಣೆಯ ಬದಲಾವಣೆಯನ್ನು ಚಿತ್ರಿಸುತ್ತದೆ. ಆದರೂ ಕೊನೆಗೆ ದ್ಯಾವನ ಮಗನ ಮೂಲಕ ಚಳವಳಿಯಲಿ ಜಯಸಿಕ್ಕಿ ನೆಮ್ಮದಿ ಕಾಣುವಂತಾಗುತ್ತದೆ.

ಶಿವರಾಮ ಕಾರಂತರ 'ಚಿಗುರಿನ ಕನಸು' ನಾಯಕ ಶಂಖರ. ತನ್ನ ಮೂಲನೆಲೆ ಮುಂಬ ಯಿಂತಹ ದೊಡ್ಡ ನಗರವೇ ಆಗಿದ್ದರೂ ನಗರ ಬದುಕಿನ ಜಂಜಾಟದಲ್ಲಿ ಬದುಕಲು ಇಷ್ಟವಿಲ್ಲದೆ ತನ್ನ ತಾತನ ಮೂಲನೆಲೆಯನ್ನು ಹುಡುಕಿಕೊಂಡು ಹಳ್ಳಿಗೆ ಹೋಗಿ ಕೃಷಿ ಜೀವನ ನಡೆಸುತ್ತಾ ತನ್ನ ಸ್ಥಿರವಾಸ್ತವ್ಯದಲ್ಲಿ ನೆಮ್ಮದಿ ಕಾಣುತ್ತಾನೆ. ಉದ್ಯೋಗದಲ್ಲಿ ಇಂಜಿನಿಯರ್ ಆಗಿದ್ದರೂ ಹಳ್ಳಿಯಲ್ಲಿ ವೈಜ್ಞಾನಿಕ ಕೃಷಿ ಜೀವನವನ್ನು ನಡೆಸುತ್ತಾನೆ. "ನೌಕರಿಯ ಹಂಗಿಗಾಗಿ ನೆಲದ ಹಂಗು ತೊರೆದವರು ನಾವು ನೌಕರಿಯನ್ನು ಬೆನ್ನಟ್ಟಿಕೊಂಡು ಊರಿಂದ ಊರಿಗೆ ಅಲೆಯುವ ಜೀವನ ಸೊಗಸಲ್ಲ" (ಶಿವರಾಮ ಕಾರಂತ ೨೦೦೫, ಪು.೨೩) ವೆಂಬ ಆಲೋಚನೆಯೆ ಶಂಕರ ಸ್ಥಿರವಾಸ್ತವ್ಯದ ನೆಲೆಗೆ ಹೋಗಲು ಕಾರಣವಾಗುತ್ತದೆ. ಹಾಗೆಯೆ ಶಂಕರ ತಾತನ ಮೂಲ ನೆಲೆ ಮತ್ತು ಶಂಕರ ಸ್ಥಿರವಾಸ್ತವ್ಯದ ನೆಲೆ ಎರಡು ಒಂದೇಯಾಗುತ್ತದೆ. ಒಂದು ಅರ್ಥದಲ್ಲಿ ಶಂಕರ ಮುಂಬೈಯಲ್ಲಿ ಜನಿಸಿದ್ದರಿಂದ ಮುಂಬೈ ಶಂಕರನಿಗೆ ಮೂಲನೆಲೆಯಾದರೂ ಅವನ ತಾತ ವಂಶದ ಮೂಲ ನೆಲೆ ಹಳ್ಳಿಯಾದ್ದರಿಂದ ಶಂಕರನಿಗೂ ಆ ಹಳ್ಳಿ ಒಂದು ಅರ್ಥದಲ್ಲಿ ಮೂಲನೆಲೆಯಾಗುತ್ತದೆ.

ಹೀಗೆ ಇಲ್ಲಿ ತನ್ನ ಮುಂಬೈ ಮೂಲನೆಲೆಯಲ್ಲಿ ಹುಟ್ಟಿದಾಗಿನಿಂದಲೂ ನಗರದ ಬದುಕಿಗೆ ಬೇಸತ್ತು ಸದಾ ಅಸಮಾಧಾನದಲ್ಲಿ ಬದುಕುತ್ತಿದ್ದವನಿಗೆ ತನ್ನ ವಂಶಜರ ಸ್ಥಳ ಹುಡುಕಿ, ತನ್ನ ಮುಂದಿನ ಜೀವನವನ್ನು ಅಲ್ಲಿ ಕಳೆಯುವ ಮೂಲಕ ನೆಮ್ಮದಿಯಿಂದ ಬದುಕುವಂತಾಗುತ್ತದೆ. ಇಂದಿನ ಆಧುನಿಕ ಸಮಾಜದಲ್ಲಿ ಐಷಾರಾಮಿ ಜೀವನದಲ್ಲಿ ಬದುಕಲು ಇಷ್ಟಪಡುವ ಯುವಕರಿಗಿಂತ ಶಂಕರ, ಹಳ್ಳಿಯ ಅದರಲ್ಲೂ ಕೃಷಿಯ ಜೀವನವನ್ನು ಇಷ್ಟಪಡುವ ಭಿನ್ನ ವ್ಯಕ್ತಿಯಾಗಿ ನಿಲ್ಲುತ್ತಾನೆ.

ಶಾಂತಿನಾಥ ದೇಸಾಯಿರವರ 'ಬೀಜ' ಕಾದಂಬರಿಯ ಕಥಾನಾಯಕ ಶ್ರೇಯಾಂಸನ ಮೂಲ ನೆಲೆ ಮತ್ತು ಸ್ಥಿರವಾಸ್ತವ್ಯದ ಗೊಂದಲಮಯ ಬದುಕಿನ ಸ್ಥಿತಿಯನ್ನು ಈ ಕಾದಂಬರಿ ಸ್ಪಷ್ಟವಾಗಿ ಚಿತ್ರಿಸುತ್ತದೆ. ತಂದೆಯೊಂದಿಗೆ ಜಗಳವಾಡಿ ಇನ್ನೆಂದು ತನ್ನ ಊರಿಗೆ ಬರಬಾರದೆಂದು ಮುಂಬೈಗೆ ತೆರಳಿದ್ದ ಶ್ರೇಯಾಂಸ ತಂದೆಯ ಮರಣದ ನಂತರ ತನ್ನ ಹಳ್ಳಿಗೆ ವಾಪಸ್ಸಾಗಿ ಮತ್ತೇ ಮುಂಬೈಗೆ ಹೋಗಲು ನಿರಾಕರಿಸುತ್ತಾನೆ. ಇದಕ್ಕೆ ಕಾರಣ ತನ್ನ ಮೂಲನೆಲೆಯ ಸೆಳೆತ, ತಾಯಿ, ಬಂಧು ಬಳಗ, ಸ್ನೇಹಿತರು ಎಲ್ಲವೂ ಮತ್ತೇ ಅವನನ್ನು ಆಕರ್ಷಿಸುವಂತೆ ಮಾಡುತ್ತದೆ. ಶ್ರೇಯಾಂಸ ಸ್ಥಿರವಾಸ್ತವದ ಬದುಕಿನ ಮುಂಬೈನ ಜಾಗತಿಕ ಬದುಕು ಜಂಜಾಟ, ಓಡಾಟ ಎಲ್ಲವೂ ಕಾಲನಂತರ ಹೊಂದಾಣಿಕೆಯಾಗಿದ್ದರೂ ನನ್ನ ಬೀಜ ಇಲ್ಲಿ, ನಾನು ಇಲ್ಲಿ ಸಾಯಬೇಕು ಎಂಬ ಹಂಬಲದಿಂದ ಮತ್ತೇ ತನ್ನ ಹುಟ್ಟೂರಿನಲ್ಲಿ ನೆಲೆಯಾಗುತ್ತಾನೆ. ಇದು ಮೂಲನೆಲೆಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ಕೃತಿಯಾಗಿದೆ.

ಮಾಸ್ತಿರವರ 'ಚೆನ್ನಮ್ಮ' ಕತೆಯಲ್ಲಿ ಚೆನ್ನಮ್ಮ ಅವಿದ್ಯಾವಂತೆಯಾಗಿ ಹಳ್ಳಿಯಲ್ಲಿ ಬೆಳೆದ ಈಕೆ ಸೋದರ ಮಾವ ರಾಮಣ್ಣನನ್ನು ಮಾಡಿಕೊಂಡು ಬೆಂಗಳೂರಿಗೆ ಬಂದು ನಾನಾತರದ ಕಷ್ಟಗಳನ್ನು ಅನುಭವಿಸುತ್ತಾಳೆ. ಹಳ್ಳಿಯಲ್ಲಿ ಹೊಲ ಮನೆ ಎಲ್ಲ ಇದ್ದರೂ ನಗರದ ಮೋಜಿನ ಬದುಕಿಗೆ ಜೋತುಬಿದ್ದು ರಾಮಣ್ಣ ಹೆಂಡತಿ, ಮಗು, ಚೆನ್ನಮ್ಮನನ್ನು ನಗರದಲ್ಲಿ ಬದುಕುವಂತೆ ಮಾಡುತ್ತಾನೆ. ಪಟ್ಟಣ ಜೀವನವೇ ಆತಂಕ ಬದುಕೆಂದುಕೊಂಡಿದ್ದ ಚೆನ್ನಮ್ಮನಿಗೆ ಗಂಡ ಮಾಡುವ ಮೋಸ ನಗರದ ವಾತಾವರಣ ಎಲ್ಲವೂ ಬದುಕು ನರಕವೆನಿಸುತ್ತದೆ. ಗಂಡನ ಶೋಷಣೆ, ಅನೈತಿಕ ಸಂಬಂಧವನ್ನು ಸಹಿಸಿಕೊಂಡು ಕೊನೆಗೆ ಗಂಡನ ವಂಚನೆಯಿಂದ ಜೈಲುವಾಸ ಅನುಭವಿಸುತ್ತಾಳೆ. ಕೊನೆಗೆ ಗಂಡನ ಮರಣದ ನಂತರ ತನ್ನ ಬದುಕು ಮೂಲನೆಲೆಯಲ್ಲಿ ಕಳೆಯಬೇಕೆಂದು ತನ್ನ ಹುಟ್ಟೂರಿಗೆ ವಾಪಸ್ಸಾಗುತ್ತಾಳೆ. ಹೀಗೆ ಚೆನ್ನಮ್ಮಳ ಸ್ಥಿರವಾಸ್ತವ್ಯದ ಬದುಕು ಇಲ್ಲಿ ದುರಂತವಾಗಿ ಪರಿಣಮಿಸುತ್ತದೆ.

ಅನಂತಮೂರ್ತಿಯವರ 'ಕ್ಲಿಪ್‌ಪಾಯಿಂಟ್' ಕತೆಯಲ್ಲಿ ಕೇಶವ ತನ್ನ ಸಂಸಾರದ ಜಂಜಾಟ, ಜವಾಬ್ದಾರಿ ತನದಿಂದ ಬೇಸತ್ತು ಇಂಗ್ಲೆಂಡಿಗೆ ಹೋಗಿ ಯಾರ ತಂಟೆಯಿಲ್ಲದೆ ಸ್ವತಂತ್ರ್ಯವಾಗಿ

ಬದುಕಬೇಕೆಂದು ಹೊರ ಹೋಗುತ್ತಾನೆ. ಆದರೆ ಇಂಗ್ಲೆಂಡ್ ಜೀವನ ಸ್ವಾರ್ಥ, ಒಂಟಿತನದಿಂದ ಜಿಗುಪ್ಸೆಗೊಂಡು ತನ್ನ ಮೂಲನೆಲೆ, ಬಂಧು, ಬಳಗದ ಸಮಸ್ಯೆಗಳೇ ಮುಖ್ಯವೆಂದು ವಾಪಸ್ಸಾಗುವ ಮುನ್ನಸೂಚನೆಯೊಂದಿಗೆ ಕತೆ ಕೊನೆಗೊಳ್ಳುತ್ತದೆ.

ಅಂದರೆ ಮೂಲನೆಲೆಯನ್ನು ತೊರೆದು ಸ್ಥಿರವಾಸ್ತವ್ಯದೆಡೆಗೆ ಇಚ್ಛಾಪೂರ್ವಕವಾಗಿ ಹೋದ ಕೇಶವನ ಸ್ಥಿರವಾಸ್ತವ್ಯದ ಅನುಭವಗಳು ಮೂಲನೆಲೆಯನ್ನು ಮತ್ತೇ ನೆನಪಿಸುವಂತೆ ಮಾಡುತ್ತದೆ.

ಇನ್ನು ನಾ.ಡಿಸೋಜರವರ ಮುಳುಗಡೆ, ಒಡ್ಡು, ಗುಣವಂತೆ, ಕಾದಂಬರಿಗಳಲ್ಲಿ ಅಣೆಕಟ್ಟು ನಿರ್ಮಾಣದಿಂದಾಗಿ ಬಲವಂತವಾಗಿ ಊರಿನ ಜನರನ್ನು ಸರ್ಕಾರ ವಲಸೆ ಹೋಗಬೇಕೆಂದಾಗ ತಮ್ಮ ಪರಿಸರ, ಬಂದು, ಬಳಗ, ಹೊಲ, ಮನೆ, ಸಾಂಸ್ಕೃತಿಕ ಬದುಕನ್ನು ಬಿಟ್ಟು ಹೋಗಲು ಸಾಧ್ಯವಾಗದೆ ತೊಳಲಾಡುವಲ್ಲಿ ತಮ್ಮ ಮೂಲನೆಲೆಯ ಬಗ್ಗೆ ಇರುವ ಪ್ರೀತಿ, ವಿಶ್ವಾಸ, ಕಾಳಜಿಯನ್ನು ಈ ಕಾದಂಬರಿಗಳು ತೋರಿಸುತ್ತವೆ. ಹಾಗೆಯೇ ಇನ್ನು ಸ್ಥಿರವಾಸ್ತವ್ಯಕ್ಕೆ ಹೋಗದೆ ಇರುವ ಈ ಕುಟುಂಬಗಳ ಸ್ಥಿರವಾಸ್ತವ್ಯದಲ್ಲಿ ಮುಂದಾಗುವ ಅನಾನುಕೂಲಗಳ ಸಂಕಟಗಳನ್ನು ಮೂಲನೆಲೆಯಲ್ಲಿ ನೆನಪಿಸಿಕೊಳ್ಳುತ್ತ ಒದ್ದಾಡುವ ಸಂದರ್ಭವನ್ನು ಇಲ್ಲಿ ನೋಡಬಹುದಾಗಿದೆ. ಹಾಗೆಯೆ ಮೂಲನೆಲೆಯ ಅಭಿಮಾನದಿಂದ ಬಿಟ್ಟು ಹೋಗದ ದ್ವೀಪ ಕಾದಂಬರಿಯಲ್ಲಿ ಬರುವ ಗಣಪಯ್ಯನ ಪಾತ್ರ ಮನೆ ಮುಳುಗಡೆ ಹೊಂದಿ ದುರಂತಕ್ಕೊಳಗಾಗುತ್ತದೆ. ಗುಣವಂತೆ ಕಾದಂಬರಿಯಲ್ಲಿ ಮೊದಲೆ ಮುಳುಗಡೆ ಪ್ರದೇಶದಿಂದ ಬಂದ ಆ ಊರಿನ ಜನ ಹೊಸದೊಂದು ಸ್ಥಿರ ವಾಸ್ತವ್ಯ ಕಟ್ಟಿಕೊಳ್ಳುವ ಮೂಲಕ ಹೊಂದಾಣಿಕೆಯಿಂದ ಬಾಳುತ್ತಿದ್ದು ಆ ಕುಟುಂಬಗಳು ಮತ್ತೊಂದು ಸಾರಿ ಅದೇ ಸಮಸ್ಯೆ ಎದುರಾದಾಗ ಎಲ್ಲರೂ ಒಗ್ಗೂಡಿ ಅಣೆಕಟ್ಟು ನಿರ್ಮಾಣವನ್ನು ನಿಲ್ಲಿಸಿ ತಮ್ಮ ಮೂಲನೆಲೆಯಲ್ಲಿ ಬದುಕುವಂತೆ ಮಾಡುತ್ತಾರೆ.

ಹೀಗೆ ಒಟ್ಟಾರೆಯಾಗಿ ಕೇಳುವುದಾದರೆ ಇಲ್ಲಿ ಬರುವ ಎಲ್ಲಾ ಕತೆ, ಕಾದಂಬರಿಗಳಲ್ಲಿ ಮೂಲನೆಲೆ ಮತ್ತು ಸ್ಥಿರವಾಸ್ತವ್ಯದ ಬದುಕಿನಲ್ಲಿ ಹೆಚ್ಚಾಗಿ ಮೂಲನೆಲೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವುದನ್ನು ಕಾಣಬಹುದು. ಏಕೆಂದರೆ ಮೂಲನೆಲೆಯಲ್ಲಿ ಬಂಧು, ಬಳಗ, ಹೊಲ, ಮನೆ, ಆಸ್ತಿ ಎಲ್ಲವೂ ತಮ್ಮ ಬದುಕಿನಲ್ಲಿ ಅವುಗಳ ಒಂದು ಭಾಗವೆನ್ನುವಂತೆ ಬದುಕುತ್ತಿದ್ದ ಕುಟುಂಬಗಳಿಗೆ ದಿಢೀರನೆ ಯಾವುದೊ ಒಂದು ಬರಗಾಲ, ಭೂಕಂಪ, ಉದ್ಯೋಗ, ಶಿಕ್ಷಣ, ಅಣೆಕಟ್ಟುಗಳಂತಹ ಹಲವು ಕಾರಣಗಳು ಎದುರಾಗಿ ಎಲ್ಲವನ್ನು ತೊರೆದು ಗೊತ್ತಿರದ ಕಾಣದ ಹೊಸ ಪರಿಸರ, ಸಂಸ್ಕೃತಿ, ಜನರರೊಂದಿಗೆ ಬದುಕಬೇಕೆಂದಾಗ ವಸತಿ, ಹಸಿವು, ಬಡತನದಂತಹ ನಾನಾ ಸಮಸ್ಯೆಗಳಿಂದ ತೊಳಲಾಡುವಂತಾಗುತ್ತದೆ. ಹಾಗಾಗಿ ಸ್ಥಿರವಾಸ್ತವ್ಯದ ಬದುಕಿನಲ್ಲಿ ಜನರು ಹೆಚ್ಚಾಗಿ ಮೂಲಭೂತ ಸಮಸ್ಯೆಗಳಿಗೆ ತೊಳಲಾಡುತ್ತಾರೆ. ಇದಕ್ಕೆ ಉದಾಹರಣೆಯಾಗಿ, ಕೊಳಗ, ಚೆನ್ನಮ್ಮ,

ನಿತ್ಯ ನರಳುವ ಮಂದಿ, ವಲಸೆದಂತಹ ಹಲವು ಕಾದಂಬರಿಗಳನ್ನು ನೋಡುತ್ತೇವೆ. ಹಾಗೆಯೆ ಇತ್ತೀಚಿನ ಜಾಗತಿಕರಣ ಪರಿಣಾಮದಿಂದ ಬಹುಬೇಗನೇ ಶ್ರೀಮಂತರಾಗಬೇಕೆಂಬ ಹಂಬಲದಿಂದ ಸ್ವಇಚ್ಛೆಯಿಂದ ಹೊರಡುವ ಇಂದಿನ ಯುವಕರು ಸ್ಥಿರವಾಸ್ತವ್ಯವನ್ನು ಬಯಸುತ್ತವೆ. ಇದಕ್ಕೆ ಉದಾಹರಣೆಯಾಗಿ ತ್ರಿಶಂಕು, ಡಾಲರ ಸೊಸೆ, ಬೇರುದಂತಹ ಕಾದಂಬರಿಗಳನ್ನು ಇಲ್ಲಿ ನೋಡ ಬಹುದು. ಹಾಗೆಯೆ ಅಣೆಕಟ್ಟು ನಿರ್ಮಾಣದಂತಹ ಸಮಸ್ಯೆಯಿಂದಾಗಿ ಇಡೀ ಊರಿಗೆ ಊರೇ ವಲಸೆ ಹೋಗಬೇಕೆಂದಾಗ ತಮ್ಮ ನೆಲ, ಮನೆ, ಹೊಲ ಎಂಬ ಭಾವನಾತ್ಮಕ ಸಂಬಂಧಗಳನ್ನು ಬಿಟ್ಟು ಹೋಗದೆ ತೊಳಲಾಡುವ ನಾ.ಡಿಸೋಜರವರ ಗುಣವಂತೆ, ದ್ವೀಪ, ಒಡ್ಡು, ಮುಳುಗಡೆಯಂತಹ ಕಾದಂಬರಿಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ.

ಏನೇ ಸ್ಥಿರವಾಸ್ತವ್ಯವನ್ನು ಹುಡುಕಿಕೊಂಡು ಸ್ವ ಇಚ್ಛೆಯಿಂದ ಹೊರಟಾಗಲೂ, ಅಲ್ಲಿ ಭಾವನಾತ್ಮಕ ಸಂಬಂಧಗಳು ಹೆಚ್ಚು ಕಾಡುವಿಕೆಯನ್ನು ಈ ಕತೆಗಳಲ್ಲಿ ಕಾಣಬಹುದು.

ಹಾಗೆಯೆ ಸ್ಥಿರವಾಸ್ತವ್ಯವಾಗಿದ್ದ ಒಂದು ಪ್ರದೇಶ ಮತ್ತೇ ಅದೇ ಪ್ರದೇಶ ಮೂಲನೆಲೆಯಾಗಿ ಪರಿವರ್ತನೆಯಾಗುವಂತಹ ಕತೆಗಳಾದ ಚಿಗುರಿದ ಕನಸು, ಭೂಮಿ ಮತ್ತು ಬೀಜ, ಗುಣವಂತೆ ಕತೆ ಕಾದಂಬರಿಗಳಲ್ಲಿ ಅನಿವಾರ್ಯವಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋದಾಗ ಇಂತಹ ಸನ್ನಿವೇಶಗಳು ಎದುರಾಗುತ್ತವೆ. ಹಾಗಾಗಿ ಈ ಮೂಲ ನೆಲೆ ಸ್ಥಿರವಾಸ್ತವ್ಯದ ನೆಲೆಗಳು ಈ ವಲಸೆಯಲ್ಲಿ ಆಗಾಗ ಬದಲಾವಣೆಯನ್ನು ಹೊಂದುವ ಸ್ಥಿತಿಯನ್ನು ಇಲ್ಲಿ ಕಾಣಬಹುದಾಗಿದೆ.

ಹೀಗೆ ಮೂಲನೆಲೆಯ ಆರಂಭದಲ್ಲಿ ಎಲ್ಲ ಸವಲತ್ತುಗಳಿಂದ ಸುಖವಾಗಿ ಬದುಕುತ್ತಿದಂತಹ ಕುಟುಂಬಗಳಿಗೆ ದಿಢೀರನೆ ಯಾವುದೋ ಒಂದು ಕಾರಣದಿಂದ ದುಃಖದ ಮುನ್ಸೂಚನೆಯಿಂದ ಆ ಕುಟುಂಬ ಅಥವಾ ವ್ಯಕ್ತಿ ಸ್ಥಿರವಾಸ್ತವ್ಯವನ್ನು ಕಂಡುಕೊಂಡ ನಂತರ ತನ್ನ ಮೂಲನೆಲೆಯ ನೆನಪುಗಳೊಂದಿಗೆ ಬದುಕುವ ಒಂದು ಸ್ಥಿತಿಯನ್ನು ಮೂರು ಪರಿಕಲ್ಪನೆಗಳಾಗಿ ಪರಿಭಾವಿಸಿ ಬದುಕಿದ ರೀತಿಯನ್ನು ಇಲ್ಲಿ ಅರ್ಥೈಸಲಾಗಿದೆ. ಭಿನ್ನ ದೇಶಗಳ ಭಿನ್ನ ಪ್ರದೇಶಗಳ ನಡುವಿನ ಸಂಸ್ಕೃತಿ ಆಚಾರ–ವಿಚಾರಗಳ ಕುರಿತ ಹೊಂದಾಣಿಕೆ ಸಂಘರ್ಷಗಳನ್ನು ವಲಸಿಗರು ಸ್ವೀಕರಿಸಿದ ಅಂಶಗಳನ್ನು ಇಲ್ಲಿ ಪ್ರಮುಖವಾಗಿ ಮೂಡಿಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಅಲೆಮಾರಿ ಸಂಸ್ಕೃತಿ, ವಲಸೆ ಸಂಸ್ಕೃತಿ ಮತ್ತು ಸ್ಥಿರ ವಾಸ್ತವ್ಯದ ಸಂಸ್ಕೃತಿಗಳೊಳಗಿನ ಅಂತಸಂಬಂಧವನ್ನು ಈ ಕತೆ ಕಾದಂಬರಿಗಳು ಅಭಿವ್ಯಕ್ತಿಸುತ್ತವೆ ಮತ್ತು ಇಲ್ಲಿ ಕಾಣುವ ಮೂರು ತರಹದ ಜನರ ಬದುಕಿನ ಬವಣೆ ಭಿನ್ನವಾಗಿ ಮೂಡಿಬರುತ್ತದೆ. ಅಲೆಮಾರಿಯಂತೆ ಬದುಕುವ 'ಸುಬ್ಬಣ್ಣ' ಕತೆಯ ನಾಯಕ ಸುಬ್ಬಣ್ಣ ಮತ್ತು 'ಹೆಜ್ಜಾಲ' ಕಾದಂಬರಿಯ

ನಾಯಕ ಕಾಲೂರನ ಬದುಕು ಜೀವಿತದ ಕೊನೆಯವರೆಗೂ ಅನೇಕ ತಿರುವುಗಳನ್ನು ಪಡೆದುಕೊಳ್ಳುತ್ತಾ ನೋವು ನಲಿವುಗಳನ್ನು ಅನುಭವಿಸುತ್ತಾ ಕೊನೆಗೆ ಅನಾಥರಂತೆ ಸಾವನ್ನು ಅಪ್ಪುವ ಸ್ಥಿತಿ ಶೋಚನೀಯವಾಗಿ ಕಾಣಿಸುತ್ತದೆ. ಹಾಗೆಯೇ ಮೂಲ, ನೆಲೆ ಮತ್ತು ಸ್ಥಿರವಾಸ್ತವದವರ ಬದುಕು ಎರಡು ಭಿನ್ನ ಭಾಷೆ, ಪರಿಸರ, ಸಂಸ್ಕೃತಿಗೆ ಒಳಗಾಗುತ್ತದೆ. ಇಂಥ ಸ್ಥಿತಿ ಕೆಲವರಿಗೆ ಅತಂತ್ರವೆನಿಸಿದರೆ, ಕೆಲವರ ಬದುಕು ಹೊಂದಾಣಿಕೆಯನ್ನು ಮಾಡಿಕೊಂಡು ಮುಂದುವರೆಯುತ್ತವೆ. ಏನೇ ಆದರೂ ಮೂಲನೆಲೆ ಎಂಬ ಭಾವನಾತ್ಮಕ ಸಂಬಂಧ ಮನುಷ್ಯನನ್ನು ಹೆಚ್ಚು ಕಾಡುತ್ತದೆ ಎಂಬುದಕ್ಕೆ ಇಲ್ಲಿ ಕಾಣಿಸಿಕೊಳ್ಳುವ ತ್ರಿಶಂಕು ಬೇರುಬಿಟ್ಟವನು, ಮುಳುಗಡೆ, ದ್ವೀಪ, ಒಡ್ಡು, ಸ್ವಪ್ನಸಾರಸ್ವತ, ನಿತ್ಯ ನರಳುವ ಮಂದಿ, ಭೂಮಿ ಮತ್ತು ಬೀಜದಂತಹ ಹಲವು ಕತೆ, ಕಾದಂಬರಿಗಳ ಮೂಲಕ ಲೇಖಕರು ಅಭಿವ್ಯಕ್ತಿಸಿರುವುದು ಕಂಡುಬರುತ್ತದೆ.

ಹೀಗೆ ವಲಸೆ ಹೋಗಿ ಅಲೆಮಾರಿಗಳಂತೆ ಅಲೆದವರ ಬದುಕಿಗೂ ಮತ್ತು ವಲಸೆ ಹೋಗಿ ಒಂದು ಕಡೇ ನೆಲೆಯಾಗಿ ಮೂಲ ನೆಲೆಯನ್ನು ನೆನಪಿಸಿಕೊಳ್ಳುತ್ತಾ ಬದುಕುವವರ ಬದುಕಿನ ರೀತಿಯನ್ನು ಈ ಅಧ್ಯಾಯ ಕಥನಗಳ ಮೂಲಕ ಸ್ಪಷ್ಟವಾಗಿ ತೆರೆದಿಡುತ್ತದೆ.

ಹಾಗೆಯೆ ವಲಸೆ ಹೋಗಿ ಒಂದು ಕಡೆ ನೆಲೆಯಾಗಲು ಆಗದೇ ಪರಿಸ್ಥಿತಿಗೆ ಸಿಕ್ಕಿ ಹಂಗಿಲ್ಲದೇ ಅಲೆಮಾರಿಯಂತೆ ಬದುಕಿದವರೂ ಸಹ ತಮ್ಮ ಮೂಲನೆಲೆಯನ್ನು ಮತ್ತೇ ಮತ್ತೇ ನೆನಪಿಸಿಕೊಳ್ಳುವ ಮತ್ತು ಹೋದ ಸ್ಥಳಗಳಲ್ಲಿ ಆ ಪರಿಸರದೊಂದಿಗೆ ಹೊಂದಿಕೊಳ್ಳಲು ಪರದಾಡುವ ಭಾವನಾತ್ಮಕ ಸಂಬಂಧಗಳು ಇಲ್ಲಿ ಕಾಣಿಸುತ್ತವೆ. ಹೀಗೆ ಇಲ್ಲಿಯ ಅಲೆಮಾರಿಗಳಿಗೆ ಸ್ವಇಚ್ಛೆಯಿಂದ ಹೊರಟವರಲ್ಲಿ ಯಾವೂದೋ ಕಾರಣಕ್ಕೆ ಸಿಕ್ಕಿ ವಲಸೆ ಹೋರಟರೋ ಕೊನೆಗೆ ಒಂದು ಕಡೆ ನಿಲ್ಲದೇ ಊರೂರು ಅಲೆಯುವಂತಾಗುತ್ತದೆ, ಹಾಗಾಗಿ ಬದುಕನ್ನು ನಿರ್ವಹಿಸಲು ಹೋರಾಡುವ ಅಲೆಮಾರಿಗಳಂತೆ ಈ ಅಲೆಮಾರಿಗಳು ಅಲೆಯುವಲ್ಲಿಯೇ ಒಂದು ಬದುಕು ಇದ್ದೆ ಇರುತ್ತದೆ ಆ ಬದುಕಿಗಾಗಿ ಈ ಅಲೆದಾಟ ಎಂಬುದು ಇಲ್ಲ ಬರುವ ಅಲೆಮಾರಿ ಮತ್ತು ವಲಸೆಗಿರುವ ಸೂಕ್ಷ್ಮ ಸಂಬಂಧವನ್ನು ಚಿತ್ರಿಸುತ್ತದೆ.

ಅಧ್ಯಾಯ ಏಳು

# ಮಾನವ ಸಮುದಾಯದ ಸಂಸ್ಕೃತಿ ಕಥನವಾಗಿ ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆಯ ಅಭಿವ್ಯಕ್ತಿ

೭.೧. ಆದಿಮ ಹಂತದ ವಲಸೆ ಸಂಸ್ಕೃತಿ ಮತ್ತು ವರ್ತಮಾನ ವಲಸೆ ಸಂಸ್ಕೃತಿಗಳ ವಿಭಿನ್ನ ಕಥನ

೭.೨. ವಲಸೆ ಮತ್ತು ಕೃಷಿ ಸಂಸ್ಕೃತಿಯ ಅಂತಃ ಸಂಬಂಧದ ಕಥನ

೭.೩. ವಲಸೆ ಮತ್ತು ಶ್ರಮ ಸಂಸ್ಕೃತಿಯ ಅಂತಃ ಸಂಬಂಧದ ಕಥನ

೭.೪. ವಲಸೆ ಮತ್ತು ವ್ಯಾಪಾರೋಧ್ಯಮ ಅಂತಃ ಸಂಬಂಧದ ಕಥನ

## ಅಧ್ಯಾಯ ಏಳು

# ಮಾನವ ಸಮುದಾಯದ ಸಂಸ್ಕೃತಿ ಕಥನವಾಗಿ ಕನ್ನಡ ಕಥನ ಸಾಹಿತ್ಯದಲ್ಲಿ ವಲಸೆಯ ಅಭಿವ್ಯಕ್ತಿ

ಮಾನವ ಪರಂಪರೆಯ ಸಂಸ್ಕೃತಿ ವಿಕಾಸದಲ್ಲಿ ವಲಸೆ ಪ್ರಮುಖ ಪಾತ್ರ ವಹಿಸುತ್ತದೆ. ಮಾನವನ ಚರಿತ್ರೆ ಆರಂಭವಾಗುವುದೇ ವಲಸೆ ಪ್ರಕ್ರಿಯೆಯಿಂದ ಎಂದು ಹೇಳಿದರೆ ತಪ್ಪಾಗಲಾರದು ಮಾನವನ ಉಗಮದ ಆರಂಭಿಕ ಹಂತದಿಂದ ಹಿಡಿದು ಇಂದಿನ ಆಧುನಿಕ ಹಂತದವರೆಗೂ ಸಾಗಿ ಬಂದ ಹಾಗೂ ಮುಂದೆಯೂ ಸಾಗಿ ಬರುವಲ್ಲಿನ ವಲಸೆಯು, ಮಾನವನ ಅವಿಭಾಜ್ಯ ಅಂಗವಾಗಿ ಬೆಸೆದುಕೊಂಡು ಬಂದಿದೆ. ಹೀಗೆ ಸಾಗಿ ಬಂದ ಹಂತದಲ್ಲಿ ನಡೆದ ಪಲ್ಲಟಗಳು ಏನೇ ಇದ್ದರೂ, ಆದಿಮ ಹಂತದಿಂದ ಆಧುನಿಕದವರೆಗೆ ಸಾಗಿಬರುವಲ್ಲಿ ನಾಗರಿಕತೆ ತಲುಪುವಲ್ಲಿ ವಲಸೆ ಮಾನವನಿಗೆ ಸಹಾಯವಾಗಿಯೂ, ಸಾಧನಾವಾಗಿಯೂ ಮಾರ್ಪಟ್ಟಿದೆ. ಈ ಪಲ್ಲಟಗಳಿಂದ ಏನೇ ಋಣಾತ್ಮಕ ಅಥವಾ ಧನಾತ್ಮಕದಂತಹ ಅಂಶಗಳೂ ಇದ್ದಾಗಲೂ ಮಾನವನ ಪರಂಪರೆಯಲ್ಲಿ ಜೀವ ಸಂಕುಲದ ನಿರಂತರತೆಯನ್ನು ವಲಸೆ ಹಿಡಿದಿಟ್ಟುಕೊಂಡಿದೆ. ಒಂದೊಮ್ಮೆ ವಲಸೆ ಇಲ್ಲದಿದ್ದರೆ ಅದೇ ಗುಡ್ಡಗಾಡು ಪ್ರದೇಶಗಳಲ್ಲಿ ಅಲೆಯುವ ಸ್ಥಿತಿಯೇ ಮುಂದುವರಿಯುತಿತ್ತು. ಹಾಗಾಗಿ ಆದಿಮದಿಂದ ಆಧುನಿಕದವರೆಗಿನ ಈ ಚಲಿಸುವಿಕೆಯಲ್ಲಿ, ನಾಗರಿಕ ಹಂತ ತಲುಪುವಲ್ಲಿ ವಲಸೆ ಕೈವಾಡ ಇಲ್ಲವೆಂದು ಹೇಳಲಾಗದು. ಹೀಗೆ ಮಾನವನ ಉಗಮದ ಆರಂಭಿಕ ಹಂತದಲ್ಲಿ ಬೇಟೆ, ಆಹಾರ, ನೀರು, ಪಶುಪಾಲನೆ, ಕೃಷಿ, ವ್ಯಾಪಾರದಂತಹ ಹಲವು ಕಾರಣಗಳಿಗಾಗಿ ಆರಂಭವಾದ ವಲಸೆ ಸಂಸ್ಕೃತಿ ದಿನದಿಂದ ದಿನಕ್ಕೆ, ಕಾಲದಿಂದ ಕಾಲಕ್ಕೆ ತನ್ನ ಸ್ವರೂಪದಲ್ಲಿ ಬದಲಾಗುತ್ತಾ, ಮಾನವನ ಸಮುದಾಯದೊಂದಿಗೆ ಸಾಗಿ ಬಂದ ಸ್ಥಿತಿಯನ್ನು ಲೇಖಕರ ಕತೆ ಕಾದಂಬರಿಗಳ ಮೂಲಕ ಇಲ್ಲಿ ಪರಿಶೀಲಿಸಲಾಗುವುದು.

## ೭.೧. ಆದಿಮ ಹಂತದ ವಲಸೆ ಸಂಸ್ಕೃತಿ ಮತ್ತು ವರ್ತಮಾನದ ವಲಸೆ ಸಂಸ್ಕೃತಿಗಳ ವಿಭಿನ್ನ ಕಥನ

ಆದಿಮ ಹಂತದ ವಲಸೆ ಎಂದರೆ ಮಾನವರ ಆದಿವಾಸಿಗಳಂತೆ ಬದುಕುತ್ತಿದ್ದಂತಹ ಸಮಯವನ್ನು ಅಥವಾ ಪ್ರಾಚೀನ ಯುಗವನ್ನು ಆದಿಮ ಹಂತ ಎಂದು ಕರೆಯುತ್ತೇವೆ. ಆದಿಮ ಹಂತದ ಬೇಟೆ, ಪಶುಪಾಲನೆ, ಕೃಷಿ ಮುಂತಾದವುಗಳಲ್ಲಿ ತೊಡಗಿಸಿಕೊಂಡ ಮಾನವರ ಪ್ರಾದೇಶಿಕ ಚಲನೆಯನ್ನು ಆ ಚಲನಾತ್ಮಕ ಅಂಶವನ್ನು ಗ್ರಹಿಸುವ ಭಾಗವಾಗಿ ಈ ಅಂಶ ರೂಪುಗೊಂಡಿದೆ.

ಆದಿವಾಸಿಯ ಕಾಲದಿಂದ ಹಿಡಿದು ಇಂದಿನ ಆಧುನಿಕ ಕಾಲದವರೆಗೂ ವಲಸೆ ಸಂಸ್ಕೃತಿ ಮನುಷ್ಯರ ಬದುಕಿನಲ್ಲಿ ಅನಿವಾರ್ಯವಾಗಿಯೂ, ಇಚ್ಛಾ ಪೂರ್ವಕವಾಗಿಯೂ ಒಂದಿಲ್ಲೊಂದು ಕಾರಣಗಳಿಗಾಗಿ ಮನುಷ್ಯರು ವಲಸೆ ಹೋಗುತ್ತಿದ್ದರೂ ಮತ್ತು ಇಂದಿಗೂ ಹೋಗುತ್ತಿದ್ದಾರೆ. ಇದರಿಂದ ಮನುಷ್ಯರ ಬದುಕಿನಲ್ಲಿ ಹಲವಾರು ರೀತಿಯ ಸಮಸ್ಯೆಗಳು, ಬದಲಾವಣೆಗಳು ಅನುಕೂಲಗಳು, ಅನಾನುಕೂಲಗಳು ಆಗಿವೆ. ಆದರೆ ವಲಸೆಗಿರುವ ಕಾರಣಗಳು ಮಾತ್ರ ವ್ಯಕ್ತಿಯಿಂದ ವ್ಯಕ್ತಿಗೆ ಸಮುದಾಯದಿಂದ ಸಮುದಾಯಕ್ಕೆ ಕುಟುಂಬದಿಂದ ಕುಟುಂಬಕ್ಕೆ ಭಿನ್ನ ರೀತಿಯಲ್ಲಿ ಪರಿಣಾಮವನ್ನು ಬೀರಿದೆ.

ಹೀಗೆ ಈ ತರಹದ ಭಿನ್ನ ಬೆಳವಣಿಗೆಯನ್ನು ಕಟ್ಟಿಕೊಟ್ಟ ಲೇಖಕರ ಕಥನ ಸಾಹಿತ್ಯದ ಅಭಿವ್ಯಕ್ತಿಯನ್ನು ಇಲ್ಲಿ ಚರ್ಚಿಸಲಾಗುವುದು. ಈಗ ಮೊದಲು ಆದಿಮ ಹಂತದ ವಲಸೆ ಸಂಸ್ಕೃತಿಯ ಕುರಿತಾಗಿ ಬಂದಿರುವ ಕೆ.ಎನ್.ಗಣೇಶಯ್ಯರವರ 'ಶಿಲಾ ಕುಲವಲಸೆ' ಕಾದಂಬರಿಯನ್ನು ನೋಡುವುದಾದರೆ ಇದೊಂದು ಚಾರಿತ್ರಿಕ ಅಂಶಗಳನ್ನು ಒಳಗೊಂಡ ಆರ್ಯರ ದ್ರಾವಿಡರ ವಲಸೆಯ ಭಿನ್ನ ವಾಗ್ವದಗಳನ್ನು ನಾವು ಇಲ್ಲಿ ಕಾಣಬಹುದು ಈ ಕೃತಿಯ ರಚನೆ ೨೦೧೪ರ ಇತ್ತೀಚಿನ ಕಾಲದಾಗಿದ್ದರೂ ಇದರಲ್ಲಿ ಚರ್ಚೆಯಾದ ವಿಷಯಗಳು ಮಾತ್ರ ಆದಿವಾಸಿಗಳಂತೆ ಬದುಕಿದ ದ್ರಾವಿಡ ಮತ್ತು ಆರ್ಯ ಜನಾಂಗದವರ ವಲಸೆಯದು.

ಸಾವಿರಾರು ಕಿ.ಮೀ. ದೂರದಿಂದ ತಮ್ಮ ಹುಟ್ಟೂರಿನಲ್ಲಿ ಉಳಿಯಲು ಜಾಗವಿಲ್ಲದೆ, ಬೆಳೆ, ಬೆಳೆಯಲು ನೀರಿಲ್ಲದೆ, ಹಸುಗಳಿಗೆ ಹುಲ್ಲಿಲ್ಲದೆ ನಮ್ಮ ನದಿಯತ್ತ ವಲಸೆ ಬಂದ ಆರ್ಯರು ಹೀಗಾಗಲೇ ಇದ್ದ ದ್ರಾವಿಡರನ್ನು ಶೋಷಿಸಿ ನಾವು ಮೇಲ್ವರ್ಗದವರು. ನೀವು ಕೆಳವರ್ಗದವರೆಂಬ ಹಣೆಪಟ್ಟಿ ಕಟ್ಟಿ ದ್ರಾವಿಡರ ಮೇಲೆ ಆಕ್ರಮಣ ಮಾಡಿ ನದಿಯ ದಡದಿಂದ ಅಟ್ಟಿದರು ಎಂದು ಶೂದ್ರ ವರ್ಗದವರನ್ನು ಆರೋಪಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಪಾಶ್ಚಾತ್ಯರೇ ಮೂಲದವರೂ ಎಂಬುದಕ್ಕೆ ಜೋನ್ಸ್ ಊಹಿಸಿದ "ಗ್ರೀಕ್ ಮತ್ತು ಲ್ಯಾಟಿನ್ ಹಾಗೂ ಸಂಸ್ಕೃತ ಮೂರು ಭಾಷೆಗಳೂ

ಒಂದೇ ಮೂಲದಿಂದ ಬಂದವುಗಳು. ಹಾಗಾಗಿ ಆರ್ಯರು ಭಾರತದವರಲ್ಲ, ಇವರು ಮಧ್ಯ ಏಷ್ಯಾ ಅಥವಾ ಪೂರ್ವ ಯೂರೋಪಿನ ಕಡೆಯಿಂದ ಅಥವಾ ಯೂರೋಪ್–ಏಷ್ಯಾ ಖಂಡಗಳ ಗಡಿಗಳಿಂದ ವಲಸೆ ಬಂದ ಜನಾಂಗ ಎಂದೂ ಪ್ರತಿಪಾದಿಸುತ್ತಾರೆ."(ಗಣೇಶಯ್ಯ ಕೆ.ಎನ್, ೨೦೧೪, ಪು.೧೧೬)

ಆದರೆ ಇಡೀ ಈ ಕೃತಿಯಲ್ಲಿ ಲೇಖಕರು ಆರ್ಯರು ಭಾರತದವರು. ಅವರು ಪಾಶ್ಚಾತ್ಯದಿಂದ ವಲಸೆ ಬಂದವರಲ್ಲ ಎಂಬ ವಾದವನ್ನು ಮಂಡಿಸುತ್ತಾರೆ. ಪಾಶ್ಚಾತ್ಯ ಚಿಂತಕರು, ಆರ್ಯರು ಯುರೋಪ್ ಅಥವಾ ಮಧ್ಯ ಏಷ್ಯಾದಿಂದ ಬಂದವರೆಂದು ಹೇಳಲು ಕೆಲವು ಕಾರಣಗಳಿದ್ದವು. ಉದಾಹರಣೆಗೆ "ಆರ್ಯರು ಕುದುರೆ ಮತ್ತು ರಥಗಳಲ್ಲಿ ಸಂಚರಿಸುತ್ತಾ ಸದಾ ಯುದ್ಧ ಸನ್ನದ್ಧರಾಗಿ, ಗೋವುಗಳನ್ನು ಸಾಕಿಕೊಂಡು, ಜೀವನ ನಡೆಸುತ್ತಿದ್ದ ಅಲೆಮಾರಿಗಳು ಎಂದು ನಂಬಲಾಗಿತ್ತು. ಆದ್ದರಿಂದ ಅವರು ಹೊರಗಿನಿಂದ ವಲಸೆ ಬಂದವರೆಂದು ವಾದಿಸಲಾಗಿತ್ತು."(ಅದೇ, ಪು.೧೪೪)

ಹೀಗೆ ವಿಲಿಯಂ ಜೋನ್ಸ್ ಭಾಷೆಯಿಂದ ಆದ ಚರ್ಚೆ ಮ್ಯಾಕ್ಸ್‌ಮುಲ್ಲರ್‌ದಂತವರ ಮೂಲಕ ಬೆಳೆದು, ಜನಾಂಗಗಳ ಮಧ್ಯೆ ಕಲಹಗಳನ್ನು ಹುಟ್ಟು ಹಾಕುತ್ತಾರೆ. ಒಂದು ವೇಳೆ ಆರ್ಯರ ದಾಳಿಯಿಂದಲೆ ದ್ರಾವಿಡರನ್ನು ಓಡಿಸಿದ್ದರೆ, ಯುದ್ಧದಲ್ಲಿ ಗಾಯಗೊಂಡು ಸತ್ತಿರುವುದಕ್ಕೆ ಅಸ್ತಿಪಂಜರಗಳಲ್ಲಿ ಗಾಯದ ಸುಳಿವಿರುತಿತ್ತು. ಅದರೆ ೩೭ ಅಸ್ತಿಪಂಜರಗಳನ್ನು ತೆಗೆದು ನೋಡಿದಾಗ ಅಲ್ಲಿ ಯಾವುದಕ್ಕೂ ಗಾಯಗೊಂಡ ಹೆಗ್ಗುರುತುಗಳಿಲ್ಲ ಎಂದು ಡೀಲ್ಸ್ ಅಧ್ಯಯನ ಮಾಡಿ ಹೇಳುತ್ತಾನೆ. ಇದಲ್ಲದೇ ಹರಪ್ಪ ನಾಗರೀಕತೆಯಲ್ಲಿ ಇದ್ದ ನಗರಗಳ ರಚನೆ ದ್ರಾವಿಡರು ವಲಸೆ ಬಂದ ನಂತರ ದಕ್ಷಿಣ ಭಾಗದಲ್ಲಿ ಕಾಣಬಹುದಿತ್ತು. ಆದರೆ, ಹರಪ್ಪದಲ್ಲಿ ಬಿಟ್ಟು ಇಂಥ ನಗರಗಳನ್ನು ಕಾಣಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಹಾಗೆಯೆ ಪ್ರೊಫೆಸರ್ ಬಿ.ಬಿ.ಲಾಲ್ ಎನ್ನುವವರು ಆರ್ಯರ ವಲಸೆ ಬಗ್ಗೆ ಸ್ಪಷ್ಟ ವಿವರ ನೀಡಿದ್ದಾರೆ. ಆರ್ಯರಲ್ಲಿ ಹಲವು ಪಂಗಡಗಳಿದ್ದವು. ಉದಾಹರಣೆಗೆ 'ಆಯು' ಎನ್ನುವ ಪಂಗಡ ಸಿಂಧೂ, ಸರಸ್ವತಿ ನದಿಯ ದಡದಿಂದ ಪಶ್ಚಿಮ ಅಥವಾ ವಾಯುವ್ಯ ದಿಕ್ಕಿಗೆ ಹರಡಿ ಗಾಂಧಾರದ ಕಡೆ ಹೊರಡುತ್ತಾರೆ. ಹಾಗೆಯೇ ಕುರು ಮತ್ತು ಪಂಚಾಲರು, ಇತ್ತ ಗಂಗಾ ನದಿಯ ಕಡೆ ಹರಡುತ್ತಾರೆ. ಹಾಗಾಗಿ ಆರ್ಯರು ಪಶ್ಚಿಮದತ್ತ ಹೊರಟರೆ ಹೊರತು ಅತ್ತಲಿಂದ ಬಂದವರಲ್ಲ."(ಅದೇ, ಪು.೧೩೧) ಎಂದು ವಾದಿಸುತ್ತರೆ.

ಹೀಗಾಗಿ ಕ್ರಿ.ಪೂ.೨೦೦೦ಕ್ಕೂ ಮುನ್ನವೇ ಆರ್ಯರು ಹರಪ್ಪ ನಾಗರೀಕತೆಯ ಭಾಗವಾಗಿದ್ದರು. ಹರಪ್ಪ ನಾಗರೀಕತೆ ಕುಸಿದ ಮೇಲೆ ಹೆಚ್ಚು ಜನ ಪೂರ್ವಕ್ಕೆ ಹೊರಟು ಹೋದರು. ಅಲ್ಲಿ ಆರ್ಯರಿಗೆ ಪ್ರಸ್ತಭೂಮಿ, ಪಶು ಸಾಕಾಣಿಕೆಗೆ ಅನುಕೂಲವಾಯಿತು. ಎನ್ನುವ ಮೂಲಕ ಆರ್ಯರು ಪಶ್ಚಿಮದಿಂದ ವಲಸೆ ಬಂದು ದ್ರಾವಿಡರನ್ನು ಓಡಿಸಿದರು ಎನ್ನುವುದನ್ನು ಹಲವಾರು ಪುರಾವೆಗಳ

ಮೂಲಕ ಸುಳ್ಳಾಗಿಸುತ್ತಾರೆ. ಮತ್ತು ಇವರು ದಕ್ಷಿಣದಲ್ಲಿ ಇದ್ದ ಜನಾಂಗ. ಸಿಂಧೂ ನದಿ ಭೂಕಂಪದಿಂದ ಒಣಗಿ ಹೋದಾಗ ಅಲ್ಲಿದ್ದ ಜನಾಂಗಗಳಿಗೆ ಜೀವನ ಕಷ್ಟವಾಗಿ ಕೃಷಿ ಉತ್ಪನ್ನ ಕುಂಠಿತವಾಗಿ ಅಲ್ಲಿಂದ ಬೇರೆ ಬೇರೆ ಕಡೆ ವಲಸೆ ಬಂದರು ಎಂಬದಾಯಿತು. ಹಾಗಾಗಿ ಆರ್ಯರ ದಾಳಿ ಎಂಬ ವಾದ ಬಿದ್ದು ಹೋಗಿದ್ದರೂ ಪಾಶ್ಚಾತ್ಯರು ಆರ್ಯರ ವಲಸೆಯನ್ನು ಮಾತ್ರ ಬಿಟ್ಟುಕೊಡದಿದ್ದರಿಂದ, ಇಂದಿಗೂ ಆರ್ಯರು ಪಾಶ್ಚಮಾತ್ಯದಿಂದ ಅಥವಾ ಪಶ್ಚಿಮದಿಂದ ವಲಸೆ ಬಂದವರು ಎಂಬ ವಾಗ್ವಾದಗಳು ಇನ್ನು ಇರುವುದನ್ನು ಕಾಣುತ್ತೇವೆ.

ಹೀಗಾಗಿ ಆದಿಮ ಹಂತದಲ್ಲಿ ನಡೆದ ವಲಸೆ ಪ್ರಕ್ರಿಯೆಯಗಳು ಕೃಷಿ, ಪಶು ಸಾಕಾಣಿಕೆ ಆಕ್ರಮಣ, ಭೂಕಂಪದಂತಹ ಕಾರಣಗಳಿಂದ ದ್ರಾವಿಡ ಆರ್ಯರ ವಲಸೆಗಳು ಹೇಗೆ ನಡೆದವು ಎಂಬುದನ್ನು ಮತ್ತು ಅವು ಇಂದಿಗೂ ಉತ್ಪನ್ನಗಳ ಮೂಲಕ ಹಲವು ವಿದ್ವಾಂಸರಲ್ಲಿ ಹೇಗೆ ಚರ್ಚಿತವಾಗುತ್ತಿವೆ ಎಂಬುದನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ.

ಹಾಗೆಯೆ ಆದಿಮ ಹಂತದಿಂದ ವರ್ತಮಾನದೆಡೆಗೆ ಬಂದಾಗ ವಲಸೆಯ ಭಿನ್ನ ಆಯಾಮ ಗಳನ್ನು ನೋಡಬಹುದು. ಆದಿಮ ಹಂತದಲ್ಲಿದ್ದ ಬೇಟೆ, ಕೃಷಿ, ಪಶುಸಾಗಾಣಿಕೆ, ಆಕ್ರಮಣದಂತಹ ಕಾರಣಗಳು ಮನುಷ್ಯರ ಜೀವನದ ಜೊತೆ ಜೊತೆಯಲ್ಲಿ ಆಧುನಿಕ ಹಂತದವರೆಗೂ ಸಾಗಿ ಬಂದಿರುವ ಸ್ವರೂಪವನ್ನು ಕತೆ, ಕಾದಂಬರಿಗಳ ಮೂಲಕ ಇಲ್ಲಿ ವ್ಯಕ್ತಪಡಿಸಲಾಗುವದು. ಆರ್ಯರು ಹೇಗೆ ಅಲೆಮಾರಿಗಳಂತೆ ಬದುಕಿದರೊ ಹಾಗೇ ಈ ಲಂಬಾಣಿಗರೂ ಸಹ ಒಂದು ರೀತಿಯ ಅಲೆಮಾರಿಗಳಂತೆ ಬದುಕನ್ನು ನಡೆಸುತ್ತಿರುವರು. ಇದಕ್ಕೆ ಉದಾಹರಣೆಯಾಗಿ ಬಡತನ, ಬರಗಾಲ ದಂತಹ ಸಮಸ್ಯೆಯಿಂದ ತುತ್ತು ಅನ್ನಕ್ಕೂ ಗತಿ ಇಲ್ಲದೆ ವಲಸೆ ಬರುವ ಚಿತ್ರಣವಿರುವ ಬೆನಕನಹಳ್ಳಿ ಜಿ.ನಾಯಕ ರವರ 'ವಲಸೆ' ಕಾದಂಬರಿ ನೆನಪಾಗುತ್ತದೆ. ಬಡತನದಲ್ಲಿ ಬದುಕುತ್ತಿದ್ದ ಲಂಬಾಣಿ ಸಮುದಾಯಗಳು ಬರಗಾಲದಿಂದ ಬೇಸತ್ತು ಅಸಹಾಯಕರಾದ ವಯಸ್ಸಾದವರನ್ನು ಬಿಟ್ಟು ಮಲೆನಾಡಿನ ಕಾಡಿಗೆ ಬಂದು ಮೂಳೆ ಪ್ಯಾಕ್ಟರಿಯಲ್ಲಿ ದುರ್ವಾಸನೆಯನ್ನು ಸಹಿಸಿಕೊಳ್ಳುತ್ತ, ಅನಿವಾರ್ಯವಾಗಿ ಬದುಕುವವರ ಬದುಕು ಅಸಹನೀಯವೆನಿಸುತ್ತದೆ.

ಇದೇ ಅವಕಾಶವನ್ನು ಬಳಸಿಕೊಳ್ಳುವ ಶ್ರೀಮಂತ ವರ್ಗದ ಪ್ಯಾಕ್ಟರಿ ಮಾಲೀಕನ ದೌರ್ಜನ್ಯ, ಅತ್ಯಾಚಾರ, ಕೊಲೆ ಎಲ್ಲವೂ ಇಲ್ಲಿ ಬದುಕಲು ಬಂದ ಬಡವರ ಬದುಕನ್ನು ಕಿತ್ತುಕೊಳ್ಳುತ್ತದೆ. ಇದು ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಫ್ಯಾಕ್ಟರಿ ಮಾಲೀಕರ ಶೋಷಣೆಗಳ ಮೇಲೆ ಬೆಳಕು ಚೆಲ್ಲುತ್ತದೆ.

ಇದೇ ರೀತಿ ಐಷಾರಾಮಿ ಜೀವನದ ಆಸೆ ಪಟ್ಟು ಅಮೇರಿಕಾಗೆ ವಲಸೆ ಹೊರಡುವ ಸುಧಾಮೂರ್ತಿಯವರ 'ಡಾಲರ್ ಸೊಸೆ' ಕಥೆಯ ನಾಯಕ ಚಂದ್ರು ಮತ್ತು ತಾಯಿ ಗೌರಮ್ಮರ

ಪಾತ್ರಗಳು ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಯೊಂದಿಗೆ ಹೋಗಿ ಬದುಕುವ ಅನಿವಾರ್ಯತೆಗಳು ಭಾವನಾತ್ಮಕ ತುಡಿತಗಳನ್ನು ಹೇಳುತ್ತವೆ. ಅದೇ ರೀತಿ ವಿ.ಎಂ.ಇನಾಂದಾರರವರ ತ್ರಿಶಂಕುವಿನ ನಾಯಕ ಉನ್ನತ ಶಿಕ್ಷಣಕ್ಕಾಗಿ ಅಮೆರಿಕಗೆ ಹೋಗಿ ತಿರುಗಿ ಭಾರತಕ್ಕೆ ಬರಬೇಕೆಂದಾಗ ಗೊಂದಲದಿಂದ ಒದ್ದಾಡುತ್ತಾ ಸ್ವದೇಶಿಯನ್ನೇ ಹಿಯಾಳಿಸುತ್ತಾನೆ, ತನ್ನ ಮಾತೃ ಭಾಷೆಯನ್ನೇ ಬೈಯುತ್ತಾನೆ. ಆದರೆ ಬರುವಾಗ ವಿಮಾನ ಅಪಘಾತಕ್ಕೀಡಾದಾಗ ತನ್ನದು ಊರಲ್ಲದ, ವಲಸೆ ಬಂದ ಅಮೆರಿಕವೂ ಅಲ್ಲದ ಯಾವುದೋ ಪರಿಚಯವಿರದ ಬ್ಯಾಂಕಾಂಕ್ ಆಸ್ಪತ್ರೆಯಲ್ಲಿ ಬಿದ್ದಾಗ ಬದುಕಿನ ಅನಿವಾರ್ಯತೆ ಅಧಿಕವಾಗುತ್ತದೆ. ಎಂದು ಪೇಚಾಡುತ್ತಾನೆ ಇದು ಇಂದಿನ ಯುವಕರ ಅತಂತ್ರ ಸ್ಥಿತಿಯನ್ನು ತಿಳಿಸುತ್ತದೆ.

ಹೀಗೆ 'ತ್ರಿಶಂಕು', 'ಡಾಲರ್ ಸೊಸೆ', 'ಬೇರು' ಅಂತಹ ಕಾದಂಬರಿಗಳು ವಿದೇಶಿ ವಲಸೆಗೆಂದು ಹೊರಡುವ ಇಂದಿನ ಜನರ ಮನಸ್ಥಿತಿಗಳನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸುತ್ತದೆ. ಇವರಲ್ಲಿ ವಲಸೆ ಹೋಗಲೆಬೇಕೆಂಬ ಯಾವ ಅನಿವಾರ್ಯತೆಯ ಇಲ್ಲದಿದ್ದರೂ, ಸ್ವ ಇಚ್ಛೆಯಿಂದಲೆ ವಲಸೆ ಹೋಗಿ ಭಿನ್ನ ಸಂಸ್ಕೃತಿಯೊಂದಿಗೆ ಅನಿವಾರ್ಯವಾಗಿ ಹೊಂದಾಣಿಕೆ ಮಾಡಿಕೊಳ್ಳುತ್ತಾ ಪರದಾಡುತ್ತಾರೆ. ಮತ್ತು ಅಲ್ಲಿಯ ಐಷಾರಾಮಿ ಜೀವನಕ್ಕೆ ಹೊಂದಿಕೊಂಡು ಅಲ್ಲಿಯು ಇರಲೂ ಆಗದೇ ಇಲ್ಲಿಗೂ ಬರಲಾಗದೆ ದ್ವಂದ್ವ ಮನಸ್ಕರಾಗಿ ಜೀವನ ನಡೆಸುತ್ತಾರೆ.

ಗುರುಪ್ರಸಾದ್‌ರವರ 'ಬೇರು' ಕಾದಂಬರಿಯಲ್ಲಿ ಹೆಂಡತಿಯ ಒತ್ತಾಯಕ್ಕೆ ಹೋದ ಆದಿತ್ಯ ತನ್ನ ಊರಿನಲ್ಲಿದ್ದ ಒಳ್ಳೆಯ ಉದ್ಯೋಗವವನ್ನು ತಂದೆ ತಾಯಿಯನ್ನು ಬಿಟ್ಟು ಹೆಂಡತಿ ಮಕ್ಕಳೊಂದಿಗೆ ಹೋಗಿ ಉದ್ಯೋಗಕ್ಕಾಗಿ ಪರದಾಡುತ್ತಾನೆ. ಹೆಂಡತಿಯ ಅನೈತಿಕತೆ, ನಿರುದ್ಯೋಗಿಯಾಗಿ ಬದುಕ ಬೇಕಾಗಿ ಬಂದ ಸಂದರ್ಭ ಅದೇ ಸಮಯದಲ್ಲಿ ಮಗ, ಮೊಮ್ಮಕ್ಕಳ ಅಗಲುವಿಕೆಯನ್ನು ಸಹಿಸದ ತಂದೆ, ತಾಯಿಯರ ಆತ್ಮಹತ್ಯೆ, ಮಗನ ಸಾವು ಎಲ್ಲವೂ ಆದಿತ್ಯನ ನೆಮ್ಮದಿಯ ಬದುಕನ್ನು ಕಸಿದುಕೊಳ್ಳುತ್ತದೆ. ಆದರೂ ಸ್ವದೇಶಕ್ಕೆ ಹೋಗದೇ ಸ್ವದೇಶಿಯ ಸಂಸ್ಕೃತಿ ಗಾಯಿತ್ರಿ ಮಂತ್ರದಿಂದಲೇ ಅಮೆರಿಕದಲ್ಲಿ ಯಶಸ್ಸು ಗಳಿಸಿ ಅಮೇರಿಕಾದಲ್ಲಿ ಆತ್ಮಹತ್ಯೆ ಮಾಡಿಕೊಂಡು ಭಾರತಕ್ಕೆ ತನ್ನ ಭಸ್ಮವನ್ನು ಕಳುಹಿಸುವ ಮೂಲಕ ತನ್ನ ಆತ್ಮಕ್ಕೆ ಶಾಂತಿಯನ್ನು ತಂದುಕೊಳ್ಳುತ್ತಾನೆ.

ಹೀಗೆ ವಲಸೆಯ ಭಿನ್ನ ನೆಲೆಗಳು ಮನುಷ್ಯನ ಬದುಕಿನಲ್ಲಿ ಸದಾ ಚಲನೆಯ ರೂಪದಲ್ಲಿ ಬೆಳೆದುಕೊಂಡು ಬಂದಿದೆ. ಇದಕ್ಕಿಂತ ಭಿನ್ನವಾಗಿ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಅಭಿವೃದ್ಧಿ ಹಿನ್ನೆಲೆಯಲ್ಲಿ ಅಣೆಕಟ್ಟು, ರಸ್ತೆ ನಿರ್ಮಾಣ, ವಿಮಾನ ನಿಲ್ದಾಣ ನಿರ್ಮಾಣದಂತಹ ಯೋಜನೆಗಳಿಂದ ಜನರು ಅನಿವಾರ್ಯವಾಗಿ ವಲಸೆ ಹೋದವರ ಬದುಕಿನ ಇನ್ನೊಂದು ಚಿತ್ರಣ ನೋಡಬಹುದು. ನಾ. ಡಿಸೋಜರವರ, ಮುಳುಗಡೆ, ದ್ವೀಪ, ಒಡ್ಡು, ಗುಣವಂತೆ ಎಂಬ ನಾಲ್ಕು ಕಾದಂಬರಿಗಳು

ಸರ್ಕಾರದ ಒತ್ತಾಯದಿಂದ ಮತ್ತೊಂದು ಕಡೆ ಪುನರ್‌ವಸತೀಕರಣಕ್ಕೆ ಹೊರಡುವ ಜನರ ಭಾವನಾತ್ಮಕ ಸಂಬಂಧಗಳು ಒಂದು ಕಡೆ ಕಾಡುತ್ತವೆ. ನೂರಾರು ವರ್ಷಗಳಿಂದ ಬಾಳಿ ಬದುಕಿದ ಹೊಲ, ಮನೆ, ಗಿಡ, ಮರ, ಬಳ್ಳಿ, ಪ್ರಾಣಿಗಳು, ಪರಿಸರ, ಬಂಧುಬಳಗವನ್ನು ಬಿಟ್ಟು ಹೋಗಬೇಕೆಂದಾಗ ಉಂಟಾಗುವ ವೇದನೆ ಇಲ್ಲಿ ಮುಖ್ಯ ಅಂಶವಾಗಿ ಕಾಡುತ್ತದೆ.

ಹಾಗೆಯೆ ಗೋಪಲಕೃಷ್ಣ ಪೈ ರವರ 'ಸ್ವಪ್ನ ಸಾರಸ್ವತ', ಮತ್ತು ನೀಳಾದೇವಿಯವರ 'ಬೇರಿಂದ ಫಲಕ್ಕೆ' ಕಾದಂಬರಿಗಳಲ್ಲಿ ಚಾರಿತ್ರಿಕ ವಲಸೆಯ ಸ್ಥಿತಿಯನ್ನು ನೋಡಬಹುದು. ಸ್ವಪ್ನಸಾರಸ್ವತ ಕಾದಂಬರಿಯಲ್ಲಿನ ಪೊರ್ಚುಗೀಸರ, ಶಿವಾಜಿಯ ದಾಳಿ ಮತಾಂತರದ ಒತ್ತಾಯ ಸಾರಸ್ವತರನ್ನು ಓಡಿಸಿದಂತೆ, ನೀಳಾದೇವಿಯವರ ಬೇರಿಂದ ಫಲಕ್ಕೆ ಕಾದಂಬರಿಯಲ್ಲಿ ಟಿಪ್ಪು ಸುಲ್ತಾನರ ಆಡಳಿತದಲ್ಲಿ ಮುಸಲ್ಮಾನರ ಮತಾಂತರ, ಆಕ್ರಮಣಗಳು ಬ್ರಾಹ್ಮಣ ಕುಟುಂಬಗಳನ್ನು ವಲಸೆ ಹೋಗುವಂತೆ ಮಾಡುತ್ತವೆ. ಇದ್ದ ಬಿದ್ದ ಆಸ್ತಿ, ಹೊಲ, ಮನೆಗಳನ್ನು ಬಿಟ್ಟು ಅನಾಥರಂತೆ ನಿರ್ಗತಿಕರಂತೆ ಹೊರಡುವ ಸ್ಥಿತಿಗಳು ಶೋಚನೀಯವಾಗುತ್ತದೆ.

ಹಾಗೆಯೆ ಬಡತನ, ಭೂಕಂಪ, ಮನೆಯಲ್ಲಿ ಮನಸ್ತಾಪಗಳಿಂದ ವಲಸೆ ಬಂದವರ ಬದುಕಿನ ನೋವು ನಲಿವುಗಳು ಭಿನ್ನವಾಗಿರುತ್ತವೆ. ಯು.ಆರ್.ಅನಂತಮೂರ್ತಿಯವರ ಕ್ಲಿಪ್ ಜಾಯಿಂಟನ ಕೇಶವ, ಶಾಂತಿನಾಥ ದೇಸಾಯಿರವರ ಬೀಜ ಕಾದಂಬರಿಯ ಶ್ರೇಯಾಂಸ. ಮನೆಯಲ್ಲಿ ನಡೆದ ಜಗಳ ಮನಸ್ತಾಪಗಳಿಂದ ಹೊರ ಬಂದು ಪರದಾಡುವ ಪರಿಪಾಟಲನ್ನು ಇಲ್ಲಿ ನೋಡಬಹುದು.

'ಕ್ಲಿಪ್ ಜಾಯಂಟ' ಕಥೆಯ ಕೇಶವ ತಂದೆಯ ತೀರಿದ ನಂತರ ಮನೆಯಲ್ಲಿ ತಾಯಿ, ತಮ್ಮ, ತಂಗಿಯರನ್ನು ಸಾಕುವ ಜವಾಬ್ದಾರಿಯನ್ನು ಹೊತ್ತು ಜೀವನದಲ್ಲಿ ಬೇಸತ್ತು ತಮ್ಮನ ಬೇಜವಾಬ್ದಾರಿತನ, ತಂಗಿಯರ ಮದುವೆ ಮಾಡಿಸುವ ಹೊಣೆ ಎಲ್ಲವನ್ನು ನೆನೆಸಿಕೊಂಡು ಬೇಜಾರಿನಿಂದ ಇಂಗ್ಲೆಂಡ್‌ಗೆ ಬಂದು ಸ್ವಲ್ಪ ದಿನಗಳ ಕಾಲ ಭಿನ್ನ ಪಾಶ್ಚಾತ್ಯ ಸಂಸ್ಕೃತಿಯೊಂದಿಗಿನ ಸ್ವಾತಂತ್ರ್ಯ ಲೈಂಗಿಕತೆ, ಹಣದ ವ್ಯಾಮೋಹದಂತಹ ನಡವಳಿಕೆಗಳಿಗೆ ಬೇಸತ್ತು ಮತ್ತೇ ತನ್ನ ಊರಿಗೆ ಹೋಗಬೇಕೆಂದು ಹಂಬಲಿಸುತ್ತಾನೆ. ತನ್ನ ಊರು, ಮನೆ, ಮನೆಯವರನ್ನು ಬಿಟ್ಟು ದೂರ ಹೋಗಿ ನೆಮ್ಮದಿಯನ್ನು ಅರಸಿ ಬಂದವನಿಗೆ ಕಾಲ ಕ್ರಮೀಣ ಪಾಶ್ಚಾತ್ಯ ದೇಶದ ವಾತಾವರಣ ಇಷ್ಟವಾಗದೇ ತನ್ನ ಮನೆ, ತಂಗಿ, ತಾಯಿ, ತಮ್ಮನ ಕಷ್ಟಗಳೇ ದೊಡ್ಡದು ಎನಿಸಿ ವಾಪಸುಗುತ್ತಾನೆ.

ಇದೇ ರೀತಿ ಶಾಂತಿನಾಥ ದೇಸಾಯಿರವರ 'ಬೀಜ' ಕಾದಂಬರಿಯಲ್ಲಿಯೂ ಸಹ ತಂದೆ ಯೊಂದಿಗೆ ಜಗಳವಾಡಿ ಮುಂಬಯಿ ಸೇರಿದ ಕಥಾನಾಯಕ ಶಶಾಂಕ, ಹೆಂಡತಿ ಮಗಳೊಂದಿಗೆ ಜೀವಿಸುತ್ತಿದ್ದರೂ ತಂದೆಯ ಸಾವಿನ ನಂತರ ತಂದೆಯ ಕಾರ್ಯಗಳನ್ನು ಮಾಡಲು ಬಂದವನಿಗೆ

ಮತ್ತೇ ತನ್ನ ಊರು ಮನೆ, ತಾಯಿಯನ್ನು ಒಂಟಿಯಾಗಿಸಿ ಹೋಗಲು ಸಾಧ್ಯವಾಗುವುದಿಲ್ಲ. ನಾನು ಎಲ್ಲೇ ಹೋದರೂ ತನ್ನ ಬೀಜ ಇಲ್ಲಿಯೇ ಮುಂಬಯಿ ಅಲ್ಲ ಎಂದು ತನ್ನೂರಿನಲ್ಲಿಯೇ ಉಳಿದುಕೊಳ್ಳುತ್ತಾನೆ.

ಇತರಹದ ಪರಿಸ್ಥಿತಿಗಳಿಗೆ ಒಳಗಾಗಿ ವಲಸೆ ಹೋಗುತ್ತಿರುವುದು ಇತ್ತೀಚಿನ ವರ್ತಮಾನದಲ್ಲಿನ ಜಾಗತೀಕ ನಗರೀಕರಣ, ನಿರುದ್ಯೋಗ, ಜಂಜಾಟ, ತಾಕಲಾಟಗಳಿಗೆ ಒಳಗಾಗಿ ಅಶಾಂತಿಯಿಂದ ಬಳಲುತ್ತಿರುವವರ ಸಮಸ್ಯೆಗಳಾಗಿವೆ. ಇದು ಆದಿಮ ವಲಸೆಗಿಂತ ವರ್ತಮಾನದ ವಲಸೆಯ ಭಿನ್ನತೆಯನ್ನು ನಾವು ಇಲ್ಲಿ ಕಾಣಬಹುದು. ಅದೇ ರೀತಿಯಾಗಿ ಬಡತನದ ಕಾರಣಕ್ಕಾಗಿ ಬದುಕನ್ನು ಕಟ್ಟಿಕೊಳ್ಳಲು ಬರುವವರ ವಲಸೆ ಇತ್ತೀಚಿನ ದಿನಗಳಲ್ಲಿ ಸರ್ವೇ ಸಾಮಾನ್ಯವಾಗಿದೆ. ಉದಾಹರಣೆಗೆ ದ್ಯಾವನೂರು ಮಹಾದೇವರ 'ಮಾರಿಕೊಂಡವರು' ಗೀತಾ ನಾಗಭೂಷಣರ ನಿತ್ಯ ನರಳುವವರು, 'ಭೂಮಿ ಮತ್ತು ಬೀಜ' ದಂತಹ ಕತೆಗಳನ್ನು ಇಲ್ಲಿ ನೋಡಬಹುದು.

ದ್ಯಾವನೂರು ಮಹಾದೇವರವರ 'ಮಾರಿಕೊಂಡವರು' ಕಥೆಯಲ್ಲಿ ಬರುವ ಕಥೆಯ ಪ್ರಮುಖ ಪಾತ್ರವಾದ ಬೀರ, ಲಕ್ಷಿ ಕುಟುಂಬ ಬಡತನದಿಂದ ದುಡಿಯಲು ಕೆಲಸವಿಲ್ಲದೆ ಯಾವ ಊರಿಗೆ ಹೋಗಬೇಕೆಂದು ತೋಚದೆ ಟಿಕೇಟ್ ತೆಗೆದುಕೊಳ್ಳಲು ಸಹ ಹಣವಿಲ್ಲದೆ ರೈಲಿನಲ್ಲಿ ಹತ್ತಿ ಸಿಕ್ಕಿಹಾಕಿಕೊಳ್ಳುವ ಸಂಗತಿಗಳು ಕರುಣಾಜನಕವಾಗಿವೆ. ಇದಷ್ಟೇ ಅಲ್ಲದೆ ಸಹಾಯ ಮಾಡಿ ದುಡಿಯಲು ಕೆಲಸ ಕೊಟ್ಟ ಗೌಡನಿಂದ, ಬದುಕಿಗೊಂದು ನೆಲೆ ಸಿಕ್ಕಿತು ಎನ್ನುವಷ್ಟರಲ್ಲಿಯೇ ಗೌಡನ ಮಗ ಕಿಟ್ಟಪ್ಪ, ಲಕ್ಷ್ಮಿಯನ್ನು ತನ್ನ ಲೈಂಗಿಕ ತೃಷೆಗೆ ಬಳಸಿಕೊಳ್ಳುವುದು ಇಂದಿನ ಹಣವಂತರ ಲೈಂಗಿಕ ದೌರ್ಜನ್ಯ ಮತ್ತು ಬಡವರ ಮೇಲಿನ ಶ್ರೀಮಂತರ ದೌರ್ಜನ್ಯವನ್ನು ತಿಳಿಸುತ್ತದೆ.

ಇದೇ ರೀತಿ ಗೀತಾನಾಗಭೂಷಣರವರ 'ಭೂಮಿ ಮತ್ತು ಬೀಜ' ದಲ್ಲಿನ ಶಾಣಪ್ಪ ಮತ್ತು ನೀಲವ್ವ ಕುಟುಂಬ ಕತೆಯೂ ಸಹ ದುಃಖದಿಂದ ಕೂಡಿದೆ. ಹೊಟ್ಟೆ ಪಾಡಿಗಾಗಿ ಕಲಬುರ್ಗಿಗೆ ಬಂದ ಈ ಕುಟುಂಬ ಗೌಡನ ಆಸೆಗೆ ನೀಲವ್ವ ಬಲಿಯಾಗುತ್ತಾಳೆ. ಗೌಡ ಒಳ್ಳೆಯವನೇ ಆಗಿದ್ದರೂ ಸಹ, ಒಳ ಒಳಗೆ ಕುದಿಯುವ ಶಾಣಪ್ಪನ ಮಾನವೀಯತೆ ಬಡವನಿಗಿರುವ ಅಸಹಾಯಕತೆಯನ್ನು ಸೂಚಿಸುತ್ತದೆ. ಹಾಗೆಯೇ ನಿತ್ಯ ನರಳುವ ಮಂದಿ ಕತೆಯಲ್ಲಿನ ತಿಪ್ಪಣ್ಣ, ರತನಿಯ ಕುಟುಂಬ ಭೂಕಂಪದಿಂದಾಗಿ ತಮ್ಮ ಎಲ್ಲಾ ಆಸ್ತಿಗಳನ್ನು ಕಳೆದುಕೊಂಡು ಗೊತ್ತಿಲ್ಲದ ಭಾಷೆ, ಪರಿಚಯವಿರದ ನಾಡು, ಗೊತ್ತಿಲ್ಲದವರೊಂದಿಗೆ ಬದುಕಲು ಬಂದವರಿಗೆ ಇರಲು ಬಾಡಿಗೆ, ಜೋಪಡಿ ಕೊಟ್ಟು ಸಹಾಯ ಮಾಡುವ ಮೂಲಕ ರತನಿಯನ್ನು ತನ್ನ ಲೈಂಗಿಕ ಸುಖಕ್ಕೆ ಬಳಸಿ ಕೊಳ್ಳುವ ಹೀನ ಪರಿಸ್ಥಿತಿಯನ್ನು ನೋಡಬಹುದು.

ಅದೇ ರೀತಿ ಬರಗಾಲದ ಪರಿಸ್ಥಿತಿಗೆ ಒಳಗಾಗಿ ಸರ್ಕಾರದ ಯೋಜನೆಗಳಿಂದ ಅಧಿಕಾರಿಗಳ ವಂಚನೆ, ಮೋಸಕ್ಕೆ ಬಲಿಯಾಗಿ ನಗರಕ್ಕೆ ಬಂದು ಇರಲು ಮನೆಯಿಲ್ಲದೆ ಹೊಲಸು ಕೊಂಪೆಗಳಲ್ಲಿ ಮರದ ಕೆಳಗಡೆಯಲ್ಲಿ ಇದ್ದು ಜೀವನ ಮಾಡಿ ಕಳ್ಳತನ, ಕೊಲೆ ಸುಲಿಗೆಯಂತಹ ಕೆಟ್ಟ ಚಟಗಳಿಗೆ ಬಲಿಯಾದವರ ಕುರಿತಾಗಿ ಕೆ.ವಿ.ರಾವ್‌ರವರ ದರಿದ್ರರು ಕಾದಂಬರಿಯಲ್ಲಿ ನೋಡಬಹುದು. ಹಾಗೆಯೇ ವೈಚಾರಿಕ ನೆಲೆಯಲ್ಲಿ ಕೃಷಿ ಜೀವನ ನಡೆಸಲು ಬಂದ ಚಿಗುರಿದ ಕನಸಿನ ಕಥಾನಾಯಕ ಶಂಕರನ ವಲಸೆ ಸ್ಥಿತಿಗಳು ಆದಿಮ ಹಂತದ ಕೃಷಿಗಿಂತ ವರ್ತಮಾನಕ್ಕೆ ಹೆಚ್ಚು ಒತ್ತು ಕೊಡುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಆದಿಮ ಹಂತದ ವಲಸೆಯಿಂದ ವರ್ತಮಾನದವರೆಗಿನ ವಲಸೆಯಲ್ಲಿನ ಭಿನ್ನ ಸ್ವರೂಪವನ್ನು ಈ ಕತೆ ಕಾದಂಬರಿಗಳು ಚಿತ್ರಿಸುತ್ತವೆ. ಆದಿಮ ಹಂತದಲ್ಲಿದ್ದ ಆಕ್ರಮಣ ಪಶುಪಾಲನೆ, ಕೃಷಿ, ಬರಗಾಲ, ಬಡತನದಂತಹ ಹಲವಾರು ಕಾರಣಗಳು ಇಂದಿಗೂ ಮನುಷ್ಯನಿಗೆ ಸಮಸ್ಯೆಯಾಗಿ ಪರಿಣಮಿಸಿದೆ. ಮತ್ತೇ ವಲಸೆ ಹೋಗಲು ಅನಿವಾರ್ಯವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಸಂಭವಿಸುವ ಮನಸ್ತಾಪ, ಸರಕಾರಿ ಯೋಜನೆಗಳ ವಿಫಲತೆ, ಅಭಿವೃದ್ಧಿಪರ ಯೋಜನೆಗಳಿಂದಾಗಿ ವಲಸೆ ಮಾತ್ರ ಭಿನ್ನವಾಗಿ ಮೂಡಿಬರುತ್ತವೆ.

ಹಾಗೆಯೆ ಆದಿಮ ಹಂತದಲ್ಲಿ ವಲಸೆಯ ಪ್ರಕ್ರಿಯೆ ಯಾವುದೇ ಸಂಚಾರ ಸೌಲಭ್ಯಗಳಿಲ್ಲದೆ ಬರಿ ಕಾಲಿನಲ್ಲಿ ಮಳೆ, ಬಿಸಿಲು ಎನ್ನದೇ ಸಂಚರಿಸುತ್ತಾ, ಮನೆಗಳನ್ನು ಕಟ್ಟಿಕೊಳ್ಳಲು ಸಹ ಆಗದಂತಹ ಅಥವಾ ಯಾವುದೇ ತರಹದ ಇಂದಿನಂತೆ ಯಂತ್ರೋಪಕರಣಗಳಿಲ್ಲದೇ ಮನುಷ್ಯ ಕಷ್ಟಪಡಬೇಕಾಗುತ್ತಿತ್ತು. ಆದರೆ ಬರಬರುತ್ತಾ ಮನುಷ್ಯರ ಬುದ್ಧಿವಂತಿಕೆ, ವೈಜ್ಞಾನಿಕತೆ ಬೆಳೆದಂತೆ ಸೌಕರ್ಯ ಸೌಲಭ್ಯಗಳು ಹೆಚ್ಚಾದಂತೆ ವಲಸೆಯ ಪ್ರಕ್ರಿಯೆ ಪರಿಣಾಮಗಳಲ್ಲೂ ಬದಲಾವಣೆಗಳು ಸಂಭವಿಸಿರುವುದನ್ನು ಕಾಣಬಹುದು. ಹಾಗಾಗಿ ಆದಿಮ ಹಂತದ ವಲಸೆಯಿಂದ ಆದಿಮ ಹಂತದ ನಂತರದ ವರ್ತಮಾನದ ವಲಸೆಯ ಬದುಕಿನ ಸ್ಥಿತಿಗತಿಯನ್ನು ಇಲ್ಲಿ ಮುಖ್ಯವಾಗಿ ನೋಡಲಾಗಿದೆ.

## ೭.೨. ವಲಸೆ ಮತ್ತು ಕೃಷಿ ಸಂಸ್ಕೃತಿಯ ಅಂತಃಸಂಬಂಧದ ಕಥನ

ಮಾನವರ ಬೇಟೆ ಸಂಸ್ಕೃತಿಯ ನಂತರ ಆರಂಭವಾದ ಈ ಕೃಷಿ ಸಂಸ್ಕೃತಿ ಅಂದಿನಿಂದ ಇಂದಿನವರೆಗೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬಂದಿದೆ. ಹಿಂದೆ ಕಾಡುಗಳಲ್ಲಿ ಭೂಮಿಯನ್ನು ಸಮತಟ್ಟಾಗಿಸಿ ಬೆಳೆ ಬೆಳೆದು ತಿನ್ನಲು ಆರಂಭಿಸಿದ ನಂತರ ಆ ಪ್ರದೇಶವನ್ನು ತೊರೆದು ಮತ್ತೊಂದು ಕಡೆ ಹೋಗಿ ಬೆಳೆ ಬೆಳೆಯುವ ಒಂದು ಸ್ಥಿತಿಯೇ ವಲಸೆ ಮತ್ತು ಕೃಷಿಗಿರುವ ಪ್ರಾಚೀನವಾದ ಅಂತಃಸಂಬಂಧವನ್ನು ತೋರಿಸುತ್ತದೆ.

ಹೀಗೆ ಕಾಲನಂತರ ಬದಲಾವಣೆ ಹೊಂದುತ್ತ ಕಾಡಿನಿಂದ ನಾಡಿಗೆ ಬಂದು ಬೆಳೆ ಬೆಳಯುವ ಹಂತವನ್ನು ತಲುಪಿದ. ತದನಂತರ ಯುದ್ಧ, ಬರಗಾಲ, ಭೂಕಂಪದಂತಹ ಹಲವಾರು ಸಮಸ್ಯೆಗಳು

ಎದುರಾದಾಗ ಅಲ್ಲಿದ್ದ ಮನೆ, ಹೊಲ, ಆಸ್ತಿ ಎಲ್ಲವನ್ನು ತೊರೆದು ಮತ್ತೊಂದು ಊರಿಗೆ ಹೋಗಿ ಗೇಣಿಗೆ ಹೊಲವನ್ನು ತೆಗೆದುಕೊಂಡು ಅಥವಾ ಕೂಲಿ ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಆದರೆ, ಇತ್ತೀಚಿನ ಜಾಗತೀಕರಣ, ನಗರೀಕರಣದ ಫಲವಾಗಿ ಹೊಲಗಳ ಜಾಗದಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳು ಕಟ್ಟಡಗಳು ನಿರ್ಮಾಣವಾಗಿ ಹಳ್ಳಿಯ ಜನರು ಕೃಷಿ ಜೀವನವನ್ನು ತೊರೆದು ನಗರಕ್ಕೆ ಬರುತ್ತಿರುವ ಸಂಗತಿ ಸಾಮಾನ್ಯವಾಗಿ ಬಿಟ್ಟಿದೆ.

ಆದರೂ ಭಾರತದ ಹಳ್ಳಿಯ ಜನರು ಕೃಷಿಯನ್ನೇ ಅವಲಂಬಿಸಿದ್ದಾರೆ. ಶೇ.೫೪ರಷ್ಟು ಜನರು ಕೃಷಿ ಜೀವನವನ್ನೇ ನಡೆಸುತ್ತಿದ್ದಾರೆ. ಹೀಗಾಗಿ ಅಂದಿನ ಬೇಟೆ ಸಂಸ್ಕೃತಿಯ ನಂತರದಲ್ಲಿ ಬೆಳೆದು ಬಂದ ಕೃಷಿ ಇಂದು ಅಷ್ಟಾಗಿ ಜನರಲ್ಲಿ ಆಸಕ್ತಿ ಇರದಿದ್ದರೂ  ಸಹ, ಇಲ್ಲವೇ ಇಲ್ಲ ಎಂದು ಹೇಳಲಾಗದು. ಉದಾ: ಶಿವರಾಮಕಾರಂತರ ಚಿಗುರಿದ ಕನಸು ಕಾದಂಬರಿಯೇ ಕೃಷಿ ಜೀವನದ ಸಾರ್ಥಕತೆಯನ್ನು ಅಥವಾ ಕೃಷಿ ಜೀವನದ ಮೌಲ್ಯವನ್ನು ಎತ್ತಿಡಿಯುತ್ತದೆ.

ಈ ಕಾದಂಬರಿಯ ನಾಯಕ ಶಂಕರನು ಮುಂಬಯಿಯಂತಹ ನಗರದಲ್ಲಿ ಹುಟ್ಟಿ ತನ್ನ ಬಾಲ್ಯ ದಿನಗಳನ್ನು ಕಳೆದು ತಂದೆಯ ನೌಕರಿಗಾಗಿ ಅಲೆದಾಡಿ ಶಂಕರನು ಹಳ್ಳಿಗೆ ಬಂದು ಕೃಷಿ ಜೀವನ ಆರಂಭಿಸಲು ಕಾರಣವಾಗುತ್ತದೆ. ಒಂದು ಕಡೆ ನೆಲೆ ನಿಲ್ಲದೆ ಹೀಗೆ ಅಲೆಮಾರಿಯಂತೆ ಅಲೆಯುವ ಶಂಕರನಿಗೆ ತನ್ನದೆಂಬ ಊರು ಇಲ್ಲವೆಂಬ ಚಿಂತೆ ಕಾಡುವ ವೇಳೆಗೆ ತನ್ನ ಮುತ್ತಾತನ ಊರಾದ ಬಂಗಾಡಿಯ ಪರಿಚಯವಾಗಿ ನಗರದಲ್ಲಿನ ಜಂಜಾಟದ ಬದುಕಿಗೆ ವಿದಾಯ ಹೇಳಿ ತಂದೆ, ತಾಯಿ, ಪ್ರೀತಿಸಿದ ಹುಡುಗಿಯ ವಿರೋಧದ ಮೇಲೆ ಬಂಗಾಡಿಗೆ ಬಂದು ಹೊಲ ಖರೀದಿ ಮಾಡಿ ಕೃಷಿ ಜೀವನ ಆರಂಭಿಸುತ್ತಾನೆ.

ಇತ್ತೀಚಿನ ಜಾಗತೀಕರಣದ ದಿನಗಳಲ್ಲಿ ಹಳ್ಳಿಯಿಂದ ನಗರಕ್ಕೆ ಬರುವವರ ಸಂಖ್ಯೆಯೇ ಅಧಿಕವಿರುವಾಗ ನಗರದಿಂದ ಹಳ್ಳಿಗೆ ಬರುವ ಈ ತರಹದ ಭಿನ್ನ ಧೋರಣೆಯನ್ನು ಹೊಂದಿದ ಶಂಕರನ ಮನೋಧೋರಣೆ ಇಲ್ಲಿ ಮುಖ್ಯವಾಗುತ್ತದೆ. ಮತ್ತು ಇದು ಲೇಖಕರಿಗಿರುವ ಕೃಷಿ, ಗ್ರಾಮೀಣತೆಯ ಬಗ್ಗೆ ಇದ್ದ ಆಸಕ್ತಿಯನ್ನು ತೋರಿಸುತ್ತದೆ. ಉದಾ: ಲೇಖಕರೇ ಮುನ್ನುಡಿಯಲ್ಲಿ ಹೇಳಿಕೊಂಡಂತೆ "ಇದು ಬರಿಯ ಕೃಷಿ ಜೀವನದ ಚಿತ್ರವೇ ಇಲ್ಲಿನ ಮುಖ್ಯ ವಸ್ತು"(ಶಿವರಾಮ ಕಾರಂತ, ೨೦೦೭, ಮುನ್ನುಡಿ) ಎಂದು ಹೇಳಿಕೊಳ್ಳುತ್ತಾರೆ.

ಶಿಕ್ಷಣದಲ್ಲಿ ವಿದ್ಯುತ್ ಇಂಜಿನಿಯರಾಗಿದ್ದರೂ ನಗರದಲ್ಲಿ ನಾನಾ ಬಗೆಯ ದೊಡ್ಡ ದೊಡ್ಡ ಉದ್ಯೋಗಗಳು ಸಿಗುವ ಅವಕಾಶಗಳಿದ್ದಾಗಲೂ ಕೃಷಿ ಜೀವನವನ್ನೇ ಹಂಬಲಿಸಿ ಹಳ್ಳಿಗೆ ವಲಸೆ ಹೋಗುವ ಶಂಕರ ತನ್ನ ಓದಿನ ಹಿನ್ನೆಲೆಯಲ್ಲಿಯೇ ವೈಜ್ಞಾನಿಕ ಕೃಷಿ ಬೇಸಾಯವನ್ನು ಮಾಡುತ್ತಾನೆ. ಆದಿವಾಸಿಗಳ ಬೇಸಾಯದಂತಿರುವ ಜನರಲ್ಲಿನ ಹಳೆಯ ಬೇಸಾಯ ಪದ್ಧತಿಯನ್ನು ಬದಲಾಯಿಸ

ಬೇಕೆಂದು ಶ್ರಮಿಸುತ್ತಾನೆ. ಈತನ ಈ ಅಭಿಲಾಷೆಗೆ ಶಂಕರನ ತಂದೆ "ಏನು ಕೃಷಿಕನಾಗುವುದೇ ಗದ್ದೆ ಉಳುವ ಕೆಲಸವೇ ಹೆಚ್ಚಿಗೆ ಬೆಳೆಯಿರಿ ಎಂಬ ಸರಕಾರದ ಪೋಸ್ಟರುಗಳನ್ನು ನೋಡಿ ಈ ಹುಚ್ಚು ಹಿಡಿಯಿತೇ ನಿನಗೆ?"(ಅದೇ, ಪು.೧೦೪) ಎಂದು ತಂದೆ ವಿರೋಧ ವ್ಯಕ್ತಪಡಿಸುತ್ತಾನೆ. ಆದರೂ ಶಂಕರನ ನಿರ್ಧಾರ ದೃಢವಾಗಿರುತ್ತದೆ.

ಹೀಗೆ ನಂತರ ನಗರದಿಂದ ಹಳ್ಳಿಗೆ ಕೃಷಿ ಮಾಡಲು ಬಂದ ಮೇಲೆ ಈಗಾಗಲೇ ಇರುವ ಸಂಪ್ರದಾಯ ರೀತಿಯನ್ನು ಕೃಷಿ ಬೇಸಾಯವನ್ನು ತೊರೆದು ತನ್ನ ಓದಿನ ಹಿನ್ನೆಲೆಯಿಂದಲ್ಲೇ ವೈಜ್ಞಾನಿಕ ರೀತಿಯಲ್ಲಿ ಬೆಳೆ ಬೆಳೆದ ರೀತಿ ಇಲ್ಲಿ ಮುಖ್ಯವಾಗುತ್ತದೆ. ಅದಕ್ಕಾಗಿ ಹಳ್ಳಿಗೆ ಹೋಗುವ ಮುನ್ನವೇ ಕೃಷಿ ಸಂಬಂಧವಾದ ಪುಸ್ತಕಗಳನ್ನು ಓದಿ ಪ್ರಯೋಗ ಕ್ಷೇತ್ರಗಳಿಗೆ ಹೋಗಿ ಬಂದು, ಬಂಗಾಡಿಯಲ್ಲಿ ಹತ್ತು ಎಕರೆ ಭೂಮಿಯನ್ನು ತೆಗೆದುಕೊಂಡು ಬೇಸಾಯ ಆರಂಭಿಸುತ್ತಾನೆ.

ಈ ಮೊದಲು ಇದ್ದ ಗಿಡಮರಗಳನ್ನು ಕಿತ್ತು ಸುಟ್ಟು ಹಾಕಿ, ಭೂಮಿಯನ್ನು ಹದ ಮಾಡಿ ಪ್ರಾಣಿಗಳು ಬೆಳೆ ನಾಶಮಾಡಬಾರದೆಂದು ಒಂದು ದೊಡ್ಡ ಕಂದಕ ತೋಡಿ, ಹೊಲದ ಸುತ್ತ ಬೇಲಿ ಹಾಕಿಸುತ್ತಾನೆ. ಹಾಗೆಯೆ ಬೆಳೆ ಬೆಳೆಯುವ ಮಣ್ಣನ್ನು ಪರೀಕ್ಷೆ ಮಾಡಿಸಿ ಅದಕ್ಕೆ ಯಾವ ಅಂಶ ಕಡಿಮೆಯಾಗಿದೆ ಎಂಬುದನ್ನು ತಿಳಿದುಕೊಂಡು ಅದನ್ನು ತಂದು ಹಾಕುತ್ತಾನೆ. ಜೊತೆಗೆ ಅಲ್ಲಿಯ ಹಳ್ಳಿಯ ಜನಕ್ಕೆ ವೈಜ್ಞಾನಿಕ ರೀತಿಯಿಂದ ಬೆಳೆಯನ್ನು ಬೆಳೆಯುವ ರೀತಿಯನ್ನು ತಿಳಿಸಿಕೊಡುತ್ತಾನೆ. ಪರದೇಶಗಳಲ್ಲಿ ಮೂರು ತಿಂಗಳಾಗುವ ಬೆಳೆಯನ್ನು ಎರಡು ತಿಂಗಳಲ್ಲಿ ಬೆಳೆಯಬೇಕೆಂದು ಹೇಳಿದರೆ ಅದಕ್ಕೆ ಬೇಸಾಯದ ಬೀಜವನ್ನು ತರಿಸುತ್ತಾರೆ. ಅಷ್ಟು ಮಾತ್ರವಲ್ಲದೆ ಮೆಣಸಿನ ಬೀಜಗಳಲ್ಲಿ ಖಾರ ತೀರ ಕಡಿಮೆಯಾಗಿರಬೇಕು. ಅದಕ್ಕೆ ಇಂಥದ್ದೆ ಬಣ್ಣ ಬರಬೇಕು ಎಂದು ಹೇಳಿದರೆ ಹತ್ತೆ ವಾರದಲ್ಲಿ ಅಂಥ ಗುಣಗಳುಳ್ಳ ಮೆಣಸಿನ ಬೀಜಗಳನ್ನು ಸೃಷ್ಟಿ ಮಾಡುವ ಪಂಡಿತರಿದ್ದಾರೆ ಎಂದು ಪಾಶ್ಚಾತ್ಯ ಸಂಶೋಧನೆಗಳ ಬಗ್ಗೆ ಜನರಿಗೆ ಪರಿಚಯಿಸುತ್ತಾನೆ. ಜೊತೆಗೆ ಹರಿವ ನೀರು ವ್ಯರ್ಥವಾಗಬಾರದೆಂದು ವಿದ್ಯುತ್‌ನ್ನು ತಯಾರಿಸುತ್ತಾನೆ. ಜೊತೆಗೆ ಒಂದು ಸಾರಿ ಹೊಲಕ್ಕೆ ನುಗ್ಗಿ, ಮೆಣಸು, ಗೆಣಸು ನಾಶ ಮಾಡಿದ ಪರಿಣಾಮವಾಗಿ ವಿದ್ಯುತ್ ತಂತಿಯನ್ನು ಅಳವಡಿಸುತ್ತಾನೆ. ಇದರಿಂದ ಜನರಿಗೆ ಯಾವುದೇ ಅಪಾಯವಾಗುವುದಿಲ್ಲ, ಎಂಬ ಎಚ್ಚರಿಕೆಯನ್ನು ಜನರಲ್ಲಿ ಮೂಡಿಸುತ್ತಾನೆ.

ಹೀಗೆ ೧೯೬೦ರ ದಶಕದಲ್ಲಿ ರಚನೆಯಾದಂತಹ ಕಾದಂಬರಿಯ ವಸ್ತು ಕೃಷಿ, ಹಳ್ಳಿ, ಪೂರ್ವಜರು ಎಂಬ ಭಾವನಾತ್ಮಕ ಮೌಲ್ಯಗಳನ್ನು ಎತ್ತಿಹಿಡಿಯುತ್ತದೆ. ಇತ್ತೀಚಿನ ದಿನಗಳಲ್ಲಂತೂ ಸ್ವಂತ ಹೊಲಗಳಿದ್ದರೂ ಅವುಗಳನ್ನು ಮಾರಿ ಅಥವಾ ಗುತ್ತಿಗೆ ಕೊಟ್ಟು ನಗರಗಳಿಗೆ ಹೋಗಿ

ನೆಲೆಯಾಗುವ ಸಂದರ್ಭಗಳನ್ನು ಹೆಚ್ಚು ನೋಡುತ್ತೇವೆ. ಹಾಗಾಗಿ ಈ ಕೃತಿ ಕೃಷಿ ಮತ್ತು ಹಳ್ಳಿ ಎಂಬ ಹಿಂದಿನ ಮೌಲ್ಯಗಳನ್ನು ಪಾತ್ರಗಳ ಮೂಲಕ ಲೇಖಕರು ಸಂವೇದನಾತ್ಮಕವಾಗಿ ಕಟ್ಟಿ ಕೊಡುತ್ತಾರೆ.

ನಗರದ ಜಂಜಾಟ, ತಾಕಲಾಟ, ಅವಸರದ ಜೀವನವನ್ನು ಇಷ್ಟಪಡದ ಶಂಕರನ ವ್ಯಕ್ತಿತ್ವದ ಮೂಲಕ ಹಳ್ಳಿಯಲ್ಲಿನ ನೆಮ್ಮದಿಯ ಬದುಕನ್ನು ಚಿತ್ರಿಸುತ್ತಾರೆ. ಅದರಲ್ಲೂ ವಿದ್ಯಾವಂತನಾದ ಶಂಕರನು ತನ್ನ ಓದಿನ ಬುದ್ಧಿವಂತಿಕೆಯನ್ನು ಬಳಸಿಕೊಂಡು ವೈಜ್ಞಾನಿಕ ರೀತಿಯಲ್ಲಿ ಹೆಚ್ಚಿನ ಬೆಳೆಯನ್ನು ತೆಗೆಯುವ ಮಾರ್ಗಗಳನ್ನು ಹಳ್ಳಿಗರಿಗೆ ತೋರಿಸುವುದರ ಮೂಲಕ ಆದರ್ಶನಾಗುತ್ತಾನೆ. ಹೀಗೆ ಕೃಷಿಗೂ ವಲಸೆಗೂ ಇರುವ ಅಂತಃಸಂಬಂಧವನ್ನು ಈ ಕೃತಿ ಸಮರ್ಥವಾಗಿ ಕಟ್ಟಿಕೊಡುತ್ತದೆ. ಹಾಗೆಯೇ ಗೋಪಾಲಕೃಷ್ಣ ಪೈರವರ ಸ್ವಪ್ನ ಸಾರಸ್ವತ ಕಾದಂಬರಿಯಲಿ ಪೋರ್ಚುಗೀಸರ ದಾಳಿಯಿಂದ ವಲಸೆ ಬಂದ ಸಾರಸ್ವತರೂ ಕುಂಬಳೆಯಲ್ಲಿ ನೆಲೆ ನಿಂತು ವ್ಯಾಪಾರದ ಮೂಲಕ ಹೆಚ್ಚು ಸಂಪಾದಿಸಿ, ಬಳ್ಳಂಬೀಡಿನ ನಾಲ್ಕುನೂರು ಎಕರೆ ಫಲವತ್ತಾದ ನೆಲವನ್ನು ಬಂಬಮಣಿ ಯಾಣಿಯಿಂದ ರಾಮಚಂದ್ರ ಪೈ ಖರೀದಿ ಮಾಡುತ್ತಾನೆ.

ವಲಸೆ ಹೋದಾಗಿನಿಂದ ವಿಟ್ಠು ಪೈ ಈ ಕಡೆಯ ಭೂಭಾಗದಲ್ಲಿ ಒಂದು ತುಂಡು ನೆಲವನ್ನು ತನ್ನದಾಗಿಸಿಕೊಳ್ಳಬೇಕೆಂಬ ಆಸೆಯನ್ನು, ಮೊಮ್ಮಗ ರಾಮಚಂದ್ರ ಪೈ ನೆರವೇರಿಸುತ್ತಾನೆ. ಕುಂಬಳೆ ಸೀಮೆಯ ಎಂಟು ಮಾಗಣೆಗಳನ್ನು ಸುತ್ತಿದರೂ ಸಿಗದ ಭೂಮಿ ಪೆರಡಾಲದ ಮಾಗಣೆಗೆ ಸೇರಿದ ಬಳ್ಳಂಬೀಡಿನಲ್ಲಿ ಅದು ಕಗ್ಗಾಡು, ಆನೆಗಳೂ, ಮಂಗಗಳೂ, ಓಡಾಡುವ ಜಾಗವಾದರೂ ನಾನ್ನೂರು ಎಕರೆ ಜಾಗ ಒಂದೇ ತುಂಡಿನಲ್ಲಿ ಸಿಕ್ಕುತ್ತದೆ ಎಂದಾಗಿ ರಾಮಚಂದ್ರ ಪೈ ಭೂಮಿ ಖರೀದಿಸುವ ಆಸೆ ಹೆಚ್ಚಾಗುತ್ತದೆ. ಅದರಲ್ಲೂ ಒಂದು ಕಡೆ ಪೋರ್ಚುಗೀಸರು ಇನ್ನೊಂದು ಕಡೆ ಅರಬರು ಬರುತ್ತಿರುವಾಗ ಮುಂದೆ ಇವರು ಸ್ಥಳೀಯ ವ್ಯಾಪಾರಿಗಳನ್ನು ಮೇಲೆ ಬರಲು ಬಿಡುವವರಲ್ಲ. ಹಾಗಾಗಿ ನಾಳೆ ವ್ಯಾಪಾರ ಇಲ್ಲದೇ ಮನೆಯಲ್ಲಿ ಕುಳಿತುಕೊಳ್ಳದೇ, ಭವತಿ ಭಿಕ್ಷಾಂದೇಹಿ ಎನ್ನದೇ ಒಬ್ಬೊಬ್ಬರು ಬೇಸಾಯ ಮಾಡಬಹುದು ಎಂಬ ಆಲೋಚನೆಯು ರಾಮಚಂದ್ರ ಪೈಗೆ ಇತ್ತು.

ಹೀಗೆ ೫೦ ವರಹಗಳಿಗೆ ನಾನ್ನೂರು ಎಕರೆ ಭೂಮಿಯನ್ನು ಕೊಂಡು, ಭೂಮಿಯ ಮಾಲೀಕನ ಸಂಪ್ರದಾಯದಂತೆ ಧರ್ಮಸ್ಥಳಕ್ಕೆ ಹೋಗಿ ಕಾಣಿಕೆ ಸಲ್ಲಿಸಿ ತನ್ನ ತಮ್ಮಂದಿರನ್ನು ಬಳ್ಳಂಬೀಡಿಗೆ ಕಳುಹಿಸಿ ಬೇಸಾಯಕ್ಕೆ ತೊಡಗಿಸುತ್ತಾನೆ. ಆಗಾಗ ತಾನು ಕುಂಬಳಿಯಿಂದ ಬಳ್ಳಂಬೀಡಿಗೆ ಹೋಗಿ ಬಂದು ಮಾಡುತ್ತಾನೆ. ಹಾಗೆಯೆ ಆ ವರ್ಷ ಒಳ್ಳೆಯ ಮಳೆಯಾಗಿ ಕೈತುಂಬ ಬೆಳೆಯೂ

ಬರುತ್ತದೆ. "ಈಗ ಅಜ್ಜ ಬದುಕಿರಬೇಕಿತ್ತು, ಹೊಸ ಅಕ್ಕಿಯ ಅನ್ನವುಂಡು ಸಂತೃಪ್ತಿಯಿಂದ ತೇಗು ಬಿಡುತ್ತಿದ್ದ"(ಗೋಪಾಲಕೃಷ್ಣ ಪೈ, ೨೦೧೨, ಪು.೩೨೫) ಎಂದು ವಿಟ್ಠ ಪೈ ನ್ನು ನೆನೆಸಿಕೊಳ್ಳುತ್ತಾನೆ.

ಹೀಗೆ ಹಲವು ವರ್ಷಗಳ ನಂತರ ತನ್ನ ದೊಡ್ಡಪ್ಪ ನಾಗಪ್ಪಯ್ಯ ತೀರಿಕೊಂಡ ನಂತರ ರಾಮಚಂದ್ರ ಪೈ ಕುಂಬಳೆಯಲ್ಲಿ ನಿಲ್ಲಲು ಮನಸ್ಸಾಗದೇ ಬೇಳಕಟ್ಟೆಯ ವ್ಯಾಪಾರವನ್ನು ಭಾವನಾದ ವೀರಪ್ಪನಾಯಕನಿಗೆ ವಹಿಸಿ "ಇನ್ನು ಮುಂದೆ ಈ ವ್ಯಾಪಾರದ ನಫೆಗೆ, ಮುನಾಫೆಗೆ ನೀನೇ ಹಕ್ಕುದಾರ"(ಅದೇ, ಪು.೩೩೪) ಎಂದು ಹೇಳಿ ತನ್ನ ಕೊನೆಯ ತಮ್ಮಂದಿರಾದ ದೇವ ಪೈ ಮತ್ತು ಶಿವಪ್ಪಯ್ಯ ಇಬ್ಬರು ಮಕ್ಕಳಾದ ಅಂತು ಪೈ ಮತ್ತು ತಿಮ್ಮಪ್ಪ ಪೈ ಹಾಗೂ ತಾನು ಹೆಂಡತಿ ಪಾರ್ವತಿಬಾಯಿ ಯೊಂದಿಗೆ ಎರಡು ಎತ್ತಿನ ಗಾಡಿಗಳಲ್ಲಿ ಪಾತ್ರೆ ಪರಡಿ ಹಾಸಿಗೆ ಗದ್ದಡಿ ಎಲ್ಲ ಸೇರಿಸಿ ಬಳ್ಳಂಬೀಡಿನ ದಾರಿ ಹಿಡಿದು ಕುಂಬಳಿಯನ್ನು ಬಿಡುತ್ತಾನೆ.

ಹೀಗೆ ವ್ಯಾಪಾರ ತನ್ನ ತಮ್ಮಂದಿರಿಗೆ ವಹಿಸಿ ಮತ್ತೇ ಕೃಷಿ ಜೀವನಕ್ಕೆ ಕಾಲೀಡುತ್ತಾನೆ. ತುಂಬಿದ ಬಸುರಿ ಹೆಂಡತಿ ಪಾರ್ವತಿ ಮತ್ತು ಮನೆಯವರೊಂದಿಗೆ ಎರಡು ಬಂಡಿಗಳ ತುಂಬ ಪಾತ್ರೆ ಪರಡಿ ಹಾಸಿಗೆ ಗಂಟುಗಳ ಮೂಲಕ ಎರಡು ದಿನಗಳ ಹಾದಿ ಸವೆದು ಪೆರಡಾಲದ ಪದವಿಗೆ ಮುಟ್ಟಿ ತನ್ನ ಕೃಷಿ ಜೀವನವನ್ನು ಆರಂಭಿಸುತ್ತಾರೆ. "ಕಾಡು ಸೇರಿದರೂ ರಾಚು ಪೈ ಗೆದ್ದುಬಿಟ್ಟ"(ಅದೇ, ಪು.೩೩೪) ಎಂದು ಜನ ಹೇಳುವಂತೆ ಸಂಪತ್ತನ್ನು ಗಳಿಸಿದ. ವರ್ಷಕ್ಕೆ ಮೂರು ಬೆಳೆ. ಭತ್ತದ ಜೊತೆ ಮೆಣಸು, ಸೌತೆ, ತೊಂಡೆ, ಚೀನಿ, ಹಾಗಲ, ಪಡುವಲ ಇತ್ಯಾದಿ ಬೆಳೆಗಳನ್ನು ಬೆಳೆಸುತ್ತಿದ್ದ ಮತ್ತು ಕಾಡಿನ ತುಂಬ ತಿನ್ನಬಹುದಾದ ಹಣ್ಣುಗಳುನ್ನು ಬೆಳೆಸಿದ. ಇದರಿಂದ ಬಂದ ಲಾಭದಿಂದ ಕಾರ್ಯಾಡು ಕೊಂಬ್ರಾಜೆಗಳಲ್ಲಿ ಇನ್ನೂರು ಇನ್ನೂರು ಎಕರೆ ಆಸ್ತಿಗಳನ್ನು ಕೊಂಡುಕೊಂಡು. ಶಿವಪ್ಪಯ್ಯನನ್ನು ಕಾರ್ಯಾಡಿನಲ್ಲೂ, ದೇವ ಪೈಯನ್ನು ಕೊಂಬ್ರಾಜೆ ಯಲ್ಲಿ ನಿಲ್ಲಿಸುತ್ತಾನೆ.

ಹೀಗೆ ರಾಮಚಂದ್ರ ಪೈ ಬಳ್ಳಂಬೀಡಿನಲ್ಲಿ ಭೂಮಿ ಖರೀದಿಸುವ ಮೂಲಕ ಕುಂಬಳೆಯಲ್ಲಿ ತನ್ನ ವ್ಯಾಪಾರವನ್ನು ತಮ್ಮಂದಿರಿಗೆ ಬಿಟ್ಟುಕೊಟ್ಟು ತಾನು ಬೇಸಾಯ ಮಾಡಲು ಬಳ್ಳಂಬೀಡಿಗೆ ಬಂದು ಅಲ್ಲಿಯೂ ಸಹ ಯಶಸ್ಸನ್ನು ಗಳಿಸುತ್ತಾನೆ. ಹೀಗೆ ಕೃಷಿ ಮತ್ತು ವಲಸೆಗಿರುವ ಅಂತಃಸಂಬಂಧ ವನ್ನು ನಾವು ಇಲ್ಲಿ ನೋಡಬಹುದಾಗಿದೆ. ಅದೇ ರೀತಿ ಸಾರಸ್ವತರು ಗೋವ ಪ್ರಾಂತದ ವೆರಣೆಗೆ ಬಂದಾಗಲೂ ಕೃಷಿಯಲ್ಲಿ ತೊಡಗಿದ್ದರು, ಸಾಕಷ್ಟು ಭೂಮಿಯೂ ಅವರ ಅಧೀನದಲ್ಲಿತ್ತು. ವಿಟ್ಠು ಪೈ ಸಹ ತೋಟದಲ್ಲಿ ದೈವವಾಗಿತ್ತು. ಇದರಂತೆ ಪೋರ್ಚುಗೀಸರಿಂದ ಅಲ್ವೀರಾ ಫ್ರೈಯರ್ ಗೇಯೆಸಳು ಸಹ ತೋಟದಲ್ಲಿ ಮೈಮುರಿದು ದುಡಿಯುತ್ತಿದ್ದದ್ದು ವಿಶೇಷವಾಗಿದೆ.

ಒಟ್ಟಾರೆ ಸಾರಸ್ವತರು ವ್ಯಾಪಾರ, ಕೃಷಿ ಎರಡರಲ್ಲೂ ಸಮೃದ್ಧಿಯನ್ನು ಸಾಧಿಸಿದ್ದರು. ಅದರಲ್ಲೂ ವೆರಣಿಯಿಂದ ಕುಂಬಳೆಗೆ ವಲಸೆ ಹೋಗಿ ಅಲ್ಲಿಂದ ಬಳ್ಳಂಬೀಡಿಗೆ ರಾಮಚಂದ್ರ ಪೈ ಹೋಗಿದ್ದು ಕೃಷಿಗಾಗಿ ಎಂಬುದು ಇಲ್ಲಿ ಪ್ರಮುಖ ಅಂಶವಾಗಿದೆ.

ಇದೇ ರೀತಿ ಗೀತಾನಾಗಭೂಷಣರವರ 'ಭೂಮಿ ಮತ್ತು ಬೀಜ' ಕತೆಯಲ್ಲೂ ಶಾಣಪ್ಪ ಮತ್ತು ನೀಲವ್ವ ಹೊಟ್ಟೆಪಾಡಿಗಾಗಿ ಕಲಬುರ್ಗಿಗೆ ವಲಸೆ ಬಂದು ಗೌಡ ಗುರುಪಾದಪ್ಪನ ಹೊಲದಲ್ಲಿ ಆಳಾಗಿ ದುಡಿಯುತ್ತಾರೆ. ಇವನು ಕೃಷಿ ಜೀವನವನ್ನು ಅರಸಿ ಬರದಿದ್ದರೂ ಬದುಕುವುದಕ್ಕೆ ಯಾವುದಾದರೇನು ಎಂಬ ಆಲೋಚನೆಯಲ್ಲಿ ಇದ್ದವರಿಗೆ ಜೀವನಕ್ಕೆ ಆಧಾರವಾಗಿ ಕೃಷಿಯು ಸಹಾಯವಾಗುತ್ತದೆ.

ಹಾಗೆಯೇ ಚದುರಂಗರವರ 'ಹೆಜ್ಜಾಲ' ಕಾದಂಬರಿಯಲ್ಲಿ ಕಾಲೂರ ತನ್ನೂರಿನಲ್ಲಿ ಹಲವು ಜನರ ಕುತಂತ್ರಕ್ಕೆ ತನ್ನ ಹೆಸರಿಗಿದ್ದ ಜಮೀನನ್ನು ಕಳೆದುಕೊಂಡು ಬೇರೆ ದಾರಿಯಿಲ್ಲದೇ ಗಂಡ, ಹೆಂಡತಿ ಮಗುವೊಂದಿಗೆ ವಲಸೆ ಬಂದಿದ್ದ. ತೋಟದಲ್ಲಿ ಕೆಲಸ ಮಾಡಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದ. ಆದರೆ ದಾರಿಯುದ್ದಕ್ಕೂ ಕಂಪಲಾಪುರ, ಪಿರಿಯಾಪಟ್ಟಣದಂತಹ ಯಾವ ಊರುಗಳಲ್ಲಿಯೂ ಕೆಲಸ ಸಿಗದೇ ತ್ವಾಟಗಳನ್ನು ಸ್ವಂತ ಯಜಮಾನರೇ ನೋಡಿಕೊಳ್ಳುತ್ತಿದ್ದರೂ ಬೇಕಾದಾಗ ಕೂಲಿ ಆಳುಗಳನ್ನು ನೇಮಿಸಿಕೊಳ್ಳುತ್ತಿದ್ದರು.

ಆದರೂ ದಾರಿಯಲ್ಲಿ ವ್ಯಕ್ತಿಯ ಪರಿಚಯದಿಂದ ಬೆಟ್ಟದೂರಿನ ಕೂಸಪ್ಪನೋರ ಮನೆಯಲ್ಲಿ ಕೆಲಸಕ್ಕೆ ಸೇರಿಕೊಂಡು ಕೆಲವು ದಿನ ಕಾಲೂರ ತ್ವಾಟದಲ್ಲಿ ಕೆಲಸ ಮಾಡುತ್ತಾನೆ. ಆದರೆ ಮನೆಯೊಡನ ದಬ್ಬಾಳಿಕೆ ಶೋಷಣೆಗೆ ಬೇಸತ್ತು ಮುಂದೆ ಸಾಗಿಸುತ್ತಾರೆ. ಹಾಗೆಯೆ ಮುಂದೆ ರಾಮನಾತಪುರ ಶೆಟ್ಟರ ಸಹಾಯದಿಂದ ಶ್ರೀನಿವಾಸಪುರದ ಚೆನ್ನಕೇಶವಯ್ಯನೋರ ತ್ವಾಟದ ಕೆಲಸ ಹಾಗೂ ಫಿಲಿಪ್ಪನ ಸಹಾಯದಿಂದ ಕಾಫಿ ತೋಟದಲ್ಲಿ ಸ್ವಲ್ಪ ದಿನಗಳ ಕಾಲ ಹಾಗೂ ಕೊನೆಗೆ ಸೀನಪ್ಪನೋರ ತ್ವಾಟದಲ್ಲಿ ಕೆಲಸ ಮಾಡುತ್ತಾರೆ. ಹೀಗೆ ಹುಟ್ಟೂರಿನಿಂದ ಬಿಟ್ಟು ಬಂದ ಕಾಲೂರ ಸ್ಯಾವಂತಿ ಅನೇಕ ಊರುಗಳನ್ನು ತಿರುಗಿ ಅಲ್ಲಿ ಇಲ್ಲಿ ತ್ವಾಟದಲ್ಲಿ ಕೆಲಸ ಮಾಡುತ್ತಲೇ ತನ್ನ ಜೀವನವನ್ನು ಸವೆಸುತ್ತಾನೆ.

ಅಂದರೆ ಕಾಲೂರನ ಈ ಅಲೆಮಾರಿತನದಲ್ಲಿ ಬದುಕಿನ ನಿರ್ವಹಣೆಗೆ ಕೃಷಿಯೇ ಆಧಾರವಾಗುತ್ತದೆ. ಇಲ್ಲಿಯ ವಲಸೆ ಅನಿವಾರ್ಯತೆಯಾದರೂ ತ್ವಾಟದಲ್ಲಿ ಕೆಲಸ ಮಾಡಬೇಕೆಂಬ ಮಹಾದಾಸೆ ಇಲ್ಲಿ ವ್ಯಕ್ತವಾಗುತ್ತದೆ. ಬೆನಕನಹಳ್ಳಿ ಜಿ.ನಾಯಕರವರ 'ವಲಸೆ' ಕಾದಂಬರಿಯಲ್ಲಿ ಬರಗಾಲದ ಕಾರಣಕ್ಕಾಗಿ ಬಯಲು ನಾಡಿನಿಂದ ದುಡಿಯಲು ಕೆಲಸವಿಲ್ಲದೆ ಮಲೆನಾಡಿಗೆ ಬಂದ ಲಂಬಾಣಿ ಸಮುದಾಯವು ದುರ್ನಾತದಿಂದ ಹೊಡೆಯುವ ವಾಸನೆಯೊಂದಿಗೆ ದುಡಿಯಲು

ಆಗದೇ ರೋಗರುಜಿನಗಳಿಗೆ ತುತ್ತಾಗುತ್ತಾರೆ. ಕಾಲಕಳೆದಂತೆ ಬೇಸಿಗೆ ಕಾಲ ಹೊರಟು ಹೋಗಿ ಮಳೆಗಾಲ ಮತ್ತೇ ಆರಂಭವಾದಾಗ ಕೃಷಿ ಜೀವನಕ್ಕಾಗಿ ಹೋಗಬೇಕೆಂಬ ಆಸೆ ಎಲ್ಲರಲ್ಲೂ ಹೆಚ್ಚಾಗಿತ್ತು.

ಬೇಸಾಯ ಮಾಡಲು ಸಾಧ್ಯವಿಲ್ಲವೆಂದಾಗ ತಾಂಡೆಯ ಜನ ಯಾವುದಾದರೂ ಕೆಲಸ ಸಿಕ್ಕರೆ ಸಾಕು ಎಂದು ಓಡಿ ಬರುವ ಜನ ಮಲೆನಾಡಿನ ಕಾಡಿನಲ್ಲಿ ಫ್ಯಾಕ್ಟರಿಯಲ್ಲಿ ದುಡಿಯಲು ಆಗದೆ, ಅದೇ ಕೃಷಿಗಾಗಿ ಮತ್ತೇ ಹೊರಹೋಗುವ ತನ್ನ ಊರಿಗೆ ವಾಪಸ್ಸು ಹೋಗುವ ಕನಸೇ ಹೆಚ್ಚಾಗುತ್ತದೆ. ಆದರೆ ಕತೆಯ ಕೊನೆಗೂ ಅವರು ಸಾಹುಕಾರನ ಕಣ್ಣು ತಪ್ಪಿಸಿ ಹೋಗಲು ಅಸಾಧ್ಯವಾದಾಗ ಅದೇ ಫ್ಯಾಕ್ಟರಿಯನ್ನು ಸುಟ್ಟು ಹಾಕುತ್ತಾರೆ.

ಅದೇ ರೀತಿ ನಾ.ಡಿಸೋಜರವರ 'ಕೊಳಗ' ಕಾದಂಬರಿಯಲ್ಲಿ ಪ್ರಮುಖ ಅಂಶ ಗೇಣಿ ಪದ್ಧತಿಯ ಸಮಸ್ಯೆಗಳು ಮತ್ತು ರೈತರ ಹೋರಾಟ. ಈ ಕಾದಂಬರಿಯ ನಾಯಕ ದ್ಯಾವ 'ಮರಸ' ಎಂಬ ಹಳ್ಳಿಯಲ್ಲಿ ಗೇಣಿಗೆ ಹೊಲವನ್ನು ಮಾಡುತ್ತ ಬದುಕುತ್ತಿದ್ದವನಿಗೆ ಗೌಡನ ವರ್ತನೆ ದಬ್ಬಾಳಿಕೆ ದ್ಯಾವನನ್ನು ವಲಸೆ ಬಂದು ಮತ್ತೊಬ್ಬ ಗೌಡನ ಹೊಲದಲ್ಲಿ ಗೇಣಿ ಮಾಡುವಂತೆ ಮಾಡುತ್ತದೆ. ಇಲ್ಲಿ ವ್ಯವಸಾಯಕ್ಕಾಗಿ ವಲಸೆ ಬಂದರೂ ಭಿನ್ನ ಗೌಡರ ದಬ್ಬಾಳಿಕೆ, ಶೋಷಣೆ, ಮೋಸ, ವಂಚನೆ ಭಿನ್ನವಾಗುತ್ತದೆ. ಅಂದಿನ ಕಾಲದಲ್ಲಿನ ಬಡವರು ವ್ಯವಸಾಯ ಮಾಡಬೇಕೆಂದಾಗ ಗೌಡನಿಂದ ಏನೆಲ್ಲಾ ತೊಂದರೆ ಸಮಸ್ಯೆಗಳಿಗೆ ಸಿಲುಕಬೇಕಾಯಿತು ಮತ್ತು ಅನ್ಯಾಯದ ವಿರುದ್ಧ ಹೋರಾಡಿದರೆ ಆ ರೈತ ಆ ಹೊಲವನ್ನು ತೊರೆದು ಮತ್ತೊಂದು ಊರಿಗೆ ಹೋಗಿ ಮತ್ತೊಬ್ಬ ಗೌಡನ ಹೊಲದಲ್ಲಿ ಕೃಷಿ ಮಾಡಬೇಕಾದಂತಹ ಅನಿವಾರ್ಯತೆ, ಬಡತನವನ್ನು ಈ ಕಾದಂಬರಿ ಚಿತ್ರಿಸುತ್ತದೆ.

ದೇವನೂರು ಮಹಾದೇವರವರ 'ಮಾರಿಕೊಂಡವರು' ಕತೆಯಲ್ಲೂ ಸಹ ಹೊಟ್ಟೆ ಪಾಡಿಗಾಗಿ ಒಂದು ನಿರ್ದಿಷ್ಟ ಊರಿಗೆ ಹೋಗಬೇಕೆಂಬ ಯಾವ ಆಲೋಚನೆಯಿಲ್ಲದೆ ರೈಲಿನಲ್ಲಿ ಟೀಕೆಟ್ ಇಲ್ಲದೇ ಹೊರಟಾಗ ಅಲ್ಲಿದ್ದ ಗೌಡನ ಸಹಾಯದಿಂದ ಒಂದು ಹಳ್ಳೀಯಲ್ಲಿ ತ್ವಾಟದ ಆಳಾಗಿ ದುಡಿಯುವ ಕೆಲಸ ಸಿಗುತ್ತದೆ. ಆದರೆ, ಊರಿಂದ ಊರಿಗೆ ವಲಸೆ ಬಂದಾಗ ಹೊಟ್ಟೆ ಪಾಡಿನ ಸಮಸ್ಯೆ ಬಗೆಹರಿದರೂ ಗೌಡನ ಮಗ ಬೀರನ ಹೆಂಡತಿ ಲಕ್ಷ್ಮಿಯನ್ನು ಇಟ್ಟುಕೊಂಡಾಗ ಸಮಸ್ಯೆ ಮತ್ತಷ್ಟು ಭಿನ್ನ ರೀತಿಯಲ್ಲಿ ಬಡವರನ್ನು ಕಾಡುತ್ತದೆ. ಆದರೆ, ಇಲ್ಲಿ ಕೃಷಿಗಾಗಿ ವಲಸೆ ಬರದೇ ಇದ್ದರೂ ಬದುಕುವುದಕ್ಕೆ ಬಡವನಿಗೆ ವ್ಯವಸಾಯವೇ ಗತಿಯಾಗುತ್ತದೆ.

ಮಾಸ್ತಿಯವರ 'ಚೆನ್ನಮ್ಮ' ಕತೆಯಲ್ಲಿ ಚೆನ್ನಮ್ಮಳ ಗಂಡ ರಾಮಪ್ಪ ನಗರದ ಬದುಕಿಗೆ ಹಾತೊರೆದು ಹಳ್ಳಿಯಲ್ಲಿ ವ್ಯವಸಾಯ ಮಾಡಲು ಸ್ವಂತ ಹೊಲವಿದ್ದರೂ ಅದನ್ನು ಅಲ್ಲಗಳೆದು

ನಗರಕ್ಕೆ ಹೆಂಡತಿ ಮಗುವಿನೊಂದಿಗೆ ಬಂದು ಕೆಟ್ಟ ಚಟಗಳಿಗೆ ಬಲಿಯಾಗುತ್ತಾನೆ. ಚೆನ್ನಮ್ಮನಿಗೆ ಫ್ಯಾಕ್ಟರಿಯಲ್ಲಿ ದುಡಿಯಲು ಒತ್ತಾಯ ಮಾಡಿದಾಗ ಫ್ಯಾಕ್ಟರಿಯಲ್ಲಿ ಕೂಲಿ ಮಾಡುವುದಕ್ಕಿಂತ ಹಳ್ಳಿಯಲ್ಲಿ ವ್ಯವಸಾಯ ಮಾಡಿಕೊಂಡಿರುವುದು ಒಳ್ಳೆಯದು ಎಂಬ ನಿರ್ಧಾರವೇ ಬಲವಾಗಿತ್ತು. ಅದರಲ್ಲೂ ಗಂಡನಿಗೆ ನಗರದ ಮೋಸ ವಂಚನೆಯ ಬದುಕಿನಿಂದ ತೊರೆದು ಹಳ್ಳಿಗೆ ಹೋಗಿ ವ್ಯವಸಾಯ ಮಾಡುವುದಾಗಿ ಪರಿಪರಿಯಾಗಿ ಬೇಡಿಕೊಳ್ಳುವ ಸ್ಥಿತಿ ಇಲ್ಲಿ ಹಳ್ಳಿಯ ಕೃಷಿಯ ಬದುಕಿನ ಪ್ರೀತಿಯನ್ನು ತೋರಿಸುತ್ತದೆ. ಇದಕ್ಕೆ ಪೂರಕವಾಗಿ ಡಾ.ಹೆಚ್.ಜೆ. ಲಕ್ಕಪ್ಪಗೌಡ ರವರು ಒಂದು ಕಡೆ  ಈ ಕತೆಯ ಕುರಿತು ಹೇಳುವ ಹಾಗೇ "ತಾಯ್ನೆಲದ ಅಪ್ಪುಗೆಗಾಗಿ ಅವಳು ಪಡುವ ಹಂಬಲ ತನ್ನ ಮನೆತನದ ಮೇಲೆ ಬೇಸಾಯ ವೃತ್ತಿಯ ಮೇಲೆ ಅವಳಿಗಿರುವ ಅಭಿಮಾನ ಗೌರವಗಳು ಅಭಿನಂದನಾರ್ಹವಾಗಿವೆ".(ಲಕ್ಕಪ್ಪಗೌಡ ಹೆಚ್.ಜೆ, ೨೦೦೩, ಪು.೨೮೯) ಎಂಬ ಮಾತು ಕತೆಗೆ ಪೂರಕವಾಗಿವೆ.

ಶಾಂತಿನಾಥ ದೇಸಾಯಿರವರ 'ಬೀಜ' ಕಾದಂಬರಿಯಲ್ಲಿ ಶ್ರೇಯಾಂಸನು ತಂದೆಯೊಂದಿಗೆ ಜಗಳವಾಡಿ ಮುಂಬಯಿಗೆ ಹೋಗಿ ನೆಲೆಯಗುತ್ತಾನೆ. ಕಾಲನಂತರ ತಂದೆಯ ಮರಣದ ವಿಷಯ ತಿಳಿದು ಬಂದವನು ತಿರುಗಿ ವಾಪಾಸು ಮುಂಬಯಿಗೆ ಹೋಗದೆ ತನ್ನ ಹಳ್ಳಿಯ ಸ್ವಂತ ಭೂಮಿಯಲ್ಲಿ ಮತ್ತೇ ವ್ಯವಸಾಯ ಮಾಡಬೇಕೆಂದು ಹಂಬಲಿಸುತ್ತಾನೆ. ಕೊನೆಗೆ ಮುಂಬಯಿ ನಗರದಲ್ಲಿ ಜೀವಿಸಿ ಬಂದಾಗಲೂ ತನ್ನ ಮನಸ್ಸನ್ನು ಬದಲಿಸಿ ಕೃಷಿಗೆ ಬೆಲೆಕೊಡುತ್ತಾನೆ. ಕೊನೆಗೆ ತನ್ನ ಕುಟುಂಬ ಬರಲು ಒಪ್ಪದಿದ್ದಾಗ ತನ್ನ ನಿರ್ಧಾರ ಬದಲಾಗದೇ ಹಳ್ಳಿ, ಕೃಷಿ ಎಂಬ ಭಾವನಾತ್ಮಕ ಸಂಬಂಧಗಳಿಗೆ ಹೆಚ್ಚು ಮಹತ್ವ ಕೊಡುತ್ತಾನೆ.

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಕತೆಯ ನಾಯಕ ಮೂರನೇ ತಲೆಮಾರಿನ ರಾಮ ತನ್ನ ತಾತನ ಉದ್ಯೋಗದಂತೆ ತಾನು ಸಹ ನಗರಗಳಲ್ಲಿ ಹೊಟ್ಟೆ ಬಟ್ಟೆ ಕಟ್ಟಿ ಓದಿ ಬಂದಾಗಲೂ ಹಳ್ಳಿಯ ಶಾಲೆವೊಂದರಲ್ಲಿ ಪಾಠ ಹೇಳುವ ಗುರುಗಳಾದರೂ ಕೃಷಿ ಜೀವನವನ್ನು ಬಿಡದೇ ತಾಯಿ ಮತ್ತು ತಾನು ವ್ಯವಸಾಯವನ್ನು ಮುಂದುವರೆಸಿಕೊಂಡು ಹೋಗುತ್ತಾರೆ.

ಬಸವರಾಜ ಕಟ್ಟಿಮನಿಯವರ 'ಜ್ವಾಲಮುಖಿಯ ಮೇಲೆ' ಕಾದಂಬರಿಯು ಒಂದು ಚಾರಿತ್ರಿಕ, ಸಾಮಾಜಿಕ ಕಾದಂಬರಿಯಾಗಿದೆ. ೧೯೪೭ ರ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳುವಳಿಯ ಪ್ರಭಾವದಿಂದ ಹಳ್ಳಿಯಲ್ಲಿ ವ್ಯವಸಾಯ ಮಾಡಿಕೊಂಡು ಬದುಕುತ್ತಿದ್ದ ರೈತರು, ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದಾಗ ಪೊಲೀಸರು ಅವರ ಮನೆಗಳನ್ನು ನಾಶಮಾಡಿ ಅವರನ್ನು ಬಂಧಿಸಲು ಮುಂದಾಗುತ್ತಾರೆ. ಆಗ ಅಲ್ಲಿದ್ದ ಎಷ್ಟೋ ಕುಟುಂಬಗಳು ಪೊಲೀಸರಿಂದ ತಪ್ಪಿಸಿಕೊಂಡು ಹೊಟ್ಟೆ ಪಾಡಿಗಾಗಿ ಫ್ಯಾಕ್ಟರಿಯಲ್ಲಿ ಕಡಿಮೆ ಕೂಲಿಗೆ ದುಡಿಯಲು ಬರುತ್ತಾರೆ. ಅಂದರೆ ಹಳ್ಳಿಗಳಲ್ಲಿ ಸ್ವಂತ

ಹೊಲದಲ್ಲಿ ದುಡಿಯಲು ಆಗದೇ ಅನಿವಾರ್ಯವಾಗಿ ಸಾಹುಕಾರನ ದಬ್ಬಾಳಿಕೆ ಮತ್ತು ಶೋಷಣೆಗೆ ಗುರಿಯಾಗಿ ತಮ್ಮ ನೆಮ್ಮದಿಯ ಕೃಷಿ ಜೀವನವನ್ನು ಸ್ಮರಿಸುತ್ತಾ ಬದುಕುವ ಸ್ಥಿತಿಯನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಹಾಗೆಯೆ ನಾ.ಡಿಸೋಜರವರ ಮುಳುಗಡೆ, ದ್ವೀಪ, ಗುಣವಂತೆ ಕಾದಂಬರಿಗಳಲ್ಲಿ ಅಣೆಕಟ್ಟು ನಿರ್ಮಾಣದಿಂದಾಗಿ ಸಾವಿರಾರು ವರ್ಷಗಳಿಂದ ಇರುವ ಪೂರ್ವಜರ ಹೊಲಗಳೆಲ್ಲವೂ ನೀರಿನಿಂದ ಮುಳುಗುತ್ತವೆಂದು ಗೊತ್ತದಾಗ ಹಳ್ಳಿಯ ಜನ ದುಃಖಪಡುತ್ತಾರೆ. ಅನೇಕ ವರ್ಷಗಳಿಂದ ಭೂಮಿಗೂ ತಮಗೂ ಇದ್ದ ಒಂದು ಅವಿನಾಭಾವ ಸಂಬಂಧ ಇವರ ವೇದನೆಗಳ ಮೂಲಕ ವ್ಯಕ್ತವಾಗುತ್ತದೆ. ಮತ್ತೊಂದು ಊರಿನಲ್ಲಿ ಸರ್ಕಾರ ಪರಿಹಾರದ ಹಣದ ಜೊತೆ ಹೊಲವೂ ದೊರಕಿಸಿಕೊಟ್ಟರೂ ಅದು ತಮ್ಮ ಪೂರ್ವಜರ ಭೂಮಿ ಆಗದು ಎಂಬ ನೋವು ಅವರಲ್ಲಿ ಕಾಣಿಸುತ್ತದೆ.

ಒಟ್ಟಾರೆ ಕೃಷಿ ಮತ್ತು ವಲಸೆಗೆ ಅನಾದಿಕಾಲದಿಂದಲೂ ಸಂಬಂಧ ಇದ್ದೇ ಇದೆ. ಅತಿ ಹೆಚ್ಚು ಹಳ್ಳಿಗಳಲ್ಲಿ ರೈತರ ಜೀವನಕ್ಕೆ ಕೃಷಿಯೇ ಮೂಲ ಆಧಾರವಾಗಿರುವುದು ಇಲ್ಲಿ ಬರುವ ಕಥನಗಳ ಮೂಲಕ ಸ್ಪಷ್ಟವಾಗುತ್ತದೆ. ಕೆಲವು ಕಾದಂಬರಿಗಳಲ್ಲಿ ಉದಾ: ಚಿಗುರಿದ ಕನಸು, ಬೀಜದಂತಹ ಕಾದಂಬರಿಗಳಲ್ಲಿ ಕತೆಯ ನಾಯಕರು ಪಟ್ಟಣಗಳಲ್ಲಿ ಬೆಳೆದಾಗಲೂ ಹಳ್ಳಿ, ವ್ಯವಸಾಯ ಎಂಬ ಭಾವನೆಗಳಿಗೆ ಬೆಲೆಕೊಟ್ಟು ಹಳ್ಳಿಗೆ ಬಂದು ವ್ಯವಸಾಯ ಮಾಡುವ ವಿಚಾರಗಳು ಪ್ರಮುಖವಾಗುತ್ತವೆ. ಜೊತೆಗೆ ಹಳ್ಳಿಗಳಲ್ಲಿ ಸ್ವಂತ ಹೊಲವಿಲ್ಲದೆ ಅನಿವಾರ್ಯ ಕಾರಣದಿಂದಲೂ ಬರಗಾಲ ಪರಿಸ್ಥಿತಿಯಿಂದ ವಲಸೆ ಬಂದಾಗ ಅನೇಕ ಕಡೆ ತ್ವಾಟಗಳಲ್ಲಿ ಆಳಾಗಿ ದುಡಿದು ಬದುಕುವುದಕ್ಕೆ ಕೃಷಿಯೇ ಪ್ರಮುಖವಾಗುತ್ತದೆ. ಉದಾ: ಹೆಜ್ಜಾಲ, ಮರಳಿ ಮಣ್ಣಿಗೆ, ಭೂಮಿ ಮತ್ತು ಬೀಜದಂತಹ ಕತೆಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಹಾಗೆಯೆ ಹೇಗೂ ಹಳ್ಳಿಯಲ್ಲಿ ಭೂಮಿಯಲ್ಲಿ ದುಡಿಯುವ ಅವಕಾಶ ಸಿಕ್ಕಾಗಲೂ ಮತ್ತೊಂದು ತರಹದ ಸಮಸ್ಯೆ, ಶೋಷಣೆಗಳಿಗೆ ಗುರಿಯಾಗುತ್ತಾರೆ. ಇದಕ್ಕೆ ಸಾಹುಕಾರ, ಗೌಡರ ದಬ್ಬಾಳಿಕೆ, ಹಿಂಸೆ, ಶೋಷಣೆಗಳು ಕಾರಣವಾಗುತ್ತದೆ.

ಹೀಗೆ ಕೃಷಿಯನ್ನು ಅರಸಿ ವಲಸೆ ಬಂದವರಿಗಿಂತ ಅನಿವಾರ್ಯತೆಗಳಿಂದ ಬಂದು ಕೃಷಿಯಲ್ಲಿ ತೊಡಗಿದ ಕಾದಂಬರಿಗಳೇ ಹೆಚ್ಚು, ಉದಾ: ಮಾರಿಕೊಂಡವರು, ಹೆಜ್ಜಾಲ, ಭೂಮಿ ಮತ್ತು ಬೀಜ, ಸ್ವಪ್ನ ಸಾರಸ್ವತದಂತಹ ಹಲವು ಕೃತಿಗಳು ಸಿಗುತ್ತವೆ. ಹಾಗಾಗಿ ವಲಸೆ ಬಂದು ಕೃಷಿಯಲ್ಲಿ ತೊಡಗಿದವರು ಇದ್ದಾರೆ. ಅಥವಾ ಕೃಷಿ ಜೀವನವನ್ನು ತೊರೆದು ವಲಸೆ ಬಂದವರೂ ಇದ್ದಾರೆ. ಈ ಎರಡು ತರದ ಭಿನ್ನತೆಗಳು ಇಲ್ಲಿ ಕಾಣಸಿಗುತ್ತವೆ.

## ೭.೩. ವಲಸೆ ಮತ್ತು ವ್ಯಾಪಾರೋದ್ಯಮ ಸಂಸ್ಕೃತಿಗಿರುವ ಅಂತಃಸಂಬಂಧದ ಕಥನ

ವಲಸೆಗೂ, ವ್ಯಾಪಾರಕ್ಕೂ ಒಂದು ಅವಿನಾಭಾವ ಸಂಬಂಧವನ್ನು ಹೊಂದಿದೆ. ಈ ಸಂಬಂಧ ನಿನ್ನೆ ಮೊನ್ನೆಯದಲ್ಲ. ಹಿಂದೆ ಎತ್ತಿನಗಾಡಿ, ಕುದುರೆಗಾಡಿಗಳ ಮೂಲಕ ಆರಂಭವಾದ ವ್ಯಾಪಾರ ಇಂದು ದೊಡ್ಡ ದೊಡ್ಡ ಹಡಗು, ರೈಲುಗಳ ಮೂಲಕ ನಡೆಯುತ್ತಿರುವುದನ್ನು ಕಾಣಬಹುದು. ಹೀಗಾಗಿ ವ್ಯಾಪಾರಕ್ಕೆಂದು ಜನರು ಗಾಡಿಗಳ ಮೂಲಕ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ವ್ಯಾಪಾರ ಮಾಡಬೇಕೆಂದಾಗ ವಲಸೆ ಅನಿವಾರ್ಯವಾಗಿತ್ತು.

ಹೀಗೆ ಇಂಥ ಹಲವು ಅಂಶಗಳನ್ನು ವಸ್ತುವಾಗಿರಿಸಿಕೊಂಡು ರಚನೆಯಾದ ಕತೆ, ಕಾದಂಬರಿಗಳು ವಲಸೆ ಮತ್ತು ವ್ಯಾಪಾರದ ಸಂಬಂಧವನ್ನು ಲೇಖಕರು ಅಭಿವ್ಯಕ್ತಿಸಿದ್ದಾರೆ. ಅವುಗಳೆಂದರೆ ಗೋಪಾಲಕೃಷ್ಣ ಪೈರವರ ಸ್ವಪ್ನ ಸಾರಸ್ವತ, ಎಸ್.ಎಲ್.ಭೈರಪ್ಪನವರ ಸಾರ್ಥದಂತಹ ಕಾದಂಬರಿಗಳು ವ್ಯಾಪಾರ ಮತ್ತು ವಲಸೆಯ ಸಂಬಂಧವನ್ನು ಹೆಚ್ಚು ವಿವರಿಸಿದರೆ ಇನ್ನು ಕೆಲವು ಕತೆ, ಕಾದಂಬರಿಗಳು  ಅಲ್ಲಲ್ಲಿ ಸಂದರ್ಭಕ್ಕೆ ಅನುಗುಣವಾಗಿ ಕತೆಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಈಗ ಮೊದಲಿಗೆ ಗೋಪಾಲಕೃಷ್ಣ ಪೈ ರವರ ಸ್ವಪ್ನ ಸಾರಸ್ವತ ಕಾದಂಬರಿಯನ್ನು ನೋಡುವುದಾದರೆ ವ್ಯಾಪಾರಕ್ಕೆಂದೇ ಪೋರ್ಚುಗೀಸರು ಭಾರತಕ್ಕೆ ಬಂದಿದ್ದು, ಒಂದು ತರವಾದರೆ ಪೋರ್ಚುಗೀಸರ ದಬ್ಬಾಳಿಕೆಯಿಂದ ಸಾರಸ್ವತರು ಗೋವೆಯಿಂದ ವಲಸೆ ಹೋಗಿ ವ್ಯಾಪಾರ ಶುರುಮಾಡಿದ್ದು ಇನ್ನೊಂದು ತರದ ವಲಸೆಯಾಗುತ್ತದೆ. ಹಾಗಾಗಿ ಇಲ್ಲಿ ಪ್ರಮುಖವಾಗಿ ಎರಡು ತರಹದ ವಲಸೆಯನ್ನು ನೋಡಬಹುದಾಗಿದೆ. ಕತೆಯಲ್ಲಿ ಅರಬರು, ಮುಸ್ಲಿಂರು ವ್ಯಾಪಾರದ ಅಂಶಗಳು ಕಂಡುಬಂದರೂ ಅದು ಅಷ್ಟಾಗಿ ಕತೆಯಲ್ಲಿ ವ್ಯಕ್ತವಾಗುವುದಿಲ್ಲ.

ಹಾಗಾಗಿ ಪೋರ್ಚುಗೀಸರ ವಲಸೆ ವ್ಯಾಪಾರವೇ ಇಲ್ಲಿ ಪ್ರಮುಖ ಉದ್ದೇಶವಾಗಿದ್ದರೂ ಈ ಮೂಲಕ ತಮ್ಮ ಆಡಳಿತವನ್ನು ಭಾರತದಲ್ಲಿ ನೆಲೆಯಾಗಿಸಬೇಕೆಂಬ ಆಸೆ ಅವರಲ್ಲಿತ್ತು. ಹಾಗಾಗಿ ತಮ್ಮ ವ್ಯಾಪಾರದ ಮೂಲಕ ಗೋವಾ ಪ್ರಾಂತ್ಯದ ಸುತ್ತ ಮುತ್ತಲಿನ ಊರಿನ ಜನರನೆಲ್ಲಾ ಮತಾಂತರದ ಬೆದರಿಕೆ ಒಡ್ಡಿ ಹಿಂಸೆಗೆ ಒಳಪಡಿಸಿದ್ದರು.

ಇಲ್ಲಿ ಒಬ್ಬ ಇಂಗ್ಲೀಷ್ ತತಜ್ಞಾನಿ ಥಾಮಸ್‌ರವರು ಹೀಗೆ ಹೇಳುತ್ತಾರೆ. "ವಿರಳ ಜನಸಂಖ್ಯೆಯಿರುವ ಆದರೆ ಅಗಾದ ಭೌಗೋಳಿಕ ವಿಸ್ತೀರ್ಣವಿರುವ ಹೊಸ ಪ್ರಪಂಚಕ್ಕೆ ದಟ್ಟ ಜನಸಂಖ್ಯೆಯಿರುವ ಹಳೆಯ ಪ್ರಪಂಚದ ಜನರು ಜೀವನಕ್ಕಾಗಿ ವಲಸೆ ಹೋಗುತ್ತಿರುವುದು ಅನಿವಾರ್ಯ ಮತ್ತು ನ್ಯಾಯ ಸಮ್ಮತವಾದದ್ದು, ಆದರೆ ಇಂತಹ ವಲಸೆಗಾರರಿಗೆ ಒಂದು ಎಚ್ಚರಿಕೆಯನ್ನು ಕೊಡುತ್ತಾನೆ. ಉದಾಹರಣೆಗೆ ಉತ್ತರ ಅಮೇರಿಕಾ, ಕೆನಡಾ ಮತ್ತು ಆಸ್ಟ್ರೇಲಿಯಾ ಖಂಡಗಳಲ್ಲಿ

ವಲಸೆಗಾರರು ಸ್ಥಿರವಾಗಿ ನೆಲೆಯೂರಿ ಸ್ಥಳೀಯರನ್ನು ವ್ಯವಸ್ಥಿತವಾಗಿ ಧ್ವಂಸ ಮಾಡಿ ತಾವೇ ಬಹುಸಂಖ್ಯಾತರಾದುದು ಆಧುನಿಕ ಇತಿಹಾಸದ ಅಧ್ಯಯನಗಳಲ್ಲೊಂದಾಗಿದೆ."(ಮಹೇಶನ್,ಮ, ೨೦೦೨, ಪು.೧೭)

ಅಂದರೆ ಇವರ ಈ ಮಾತು ಪೋರ್ಚುಗೀಸರು ಗೋವಾದ ಸ್ಥಳೀಯ ಜನರನ್ನು ಹಿಂಸೆಗೆ ಒಳಪಡಿಸಿ, ವಲಸೆ ಹೋಗುವಂತೆ ಮಾಡಿದ ಪ್ರಸಂಗವನ್ನು ನೆನಪಿಸುತ್ತದೆ. ಅದರಲ್ಲೂ ಇವರ ಶೋಷಣೆ ಹೆಚ್ಚು ಪರಿಣಮಿಸಿದ್ದು ಸಾರಸ್ವತರ ಮೇಲೆ ಎಂಬುದನ್ನು ಇಲ್ಲಿ ಗಮನಿಸ ಬಹುದಾಗಿದೆ. ಇದನ್ನು ಇನ್ನಷ್ಟು ವಿಸ್ತರಿಸಿ ಹೇಳುವುದಾದರೆ ಪೋರ್ಚುಗೀಸರು ವ್ಯಾಪಾರಕ್ಕಾಗಿ ವಲಸೆ ಬಂದರೂ ಸ್ಥಳೀಯ ಜನರನ್ನು ದೈಹಿಕ ಹಾಗೂ ಮಾನಸಿಕವಾಗಿ ಹಿಂಸೆಗೊಳಿಸಿದರು. ಸಮೃದ್ಧವಾಗಿ ಬದುಕಿದ್ದ ಸಾರಸ್ವತರ ವ್ಯಾಪಾರದಲ್ಲಿ ನಷ್ಟ ಉಂಟು ಮಾಡಿದರು. ಅಷ್ಟೇ ಅಲ್ಲದೇ ತಮ್ಮ ಆಡಳಿತವನ್ನು ಸ್ಥಳೀಯ ಜನರ ಮೇಲೆ ಹೇರಿದರು.

ಆದರೆ, ಈ ಹಿಂಸೆಯನ್ನು ತಾಳಲಾರದೆ ತಮ್ಮ ಮತ ನಂಬಿಕೆಯನ್ನು ಉಳಿಸಿಕೊಳ್ಳಲು ಹೋದ ಸಾರಸ್ವತರೂ ಕುಂಬಳೆಯಲ್ಲಿ ವ್ಯಾಪಾರ ಆರಂಭಿಸಿದರು. ವ್ಯಾಪಾರದಲ್ಲಿ ಹಣದ ಬಂಡವಾಳ, ಜೊತೆಗೆ ಮಾತಿನ ಬಂಡವಾಳವನ್ನು ಸೇರಿಸಿ ವ್ಯಾಪಾರದಲ್ಲಿ ಅಭಿವೃದ್ಧಿಯನ್ನು ಕಂಡರು.

ಅಂದಿನ ಕಾಲದಲ್ಲಿ ಅಂದರೆ ೧೩-೧೪ನೇ ಶತಮಾನದಲ್ಲಿ ವಸ್ತು ವಿನಿಮಯ ಪದ್ಧತಿ ಇತ್ತು, ಮತ್ತು ವ್ಯಾಪಾರ ಮಾಡುವ ಮಂದಿಯು ಹೆಚ್ಚಾಗಿರಲಿಲ್ಲ. ಮುಸಲ್ಮಾನರು, ಅರಬರು ಮಾತ್ರ ಹೆಚ್ಚಾಗಿ ವ್ಯಾಪಾರ ಮಾಡುತ್ತಿದ್ದರೂ, ಕಾದಂಬರಿಯ ಆರಂಭದಲ್ಲಿಯೇ ಬರುವಂತೆ "ವಿಟ್ಠು ಪೈಯ ಅಜ್ಜ ನರಸಪ್ಪಯ್ಯ ವೆರಣೆಯಲ್ಲಿ ದೊಡ್ಡ ವ್ಯಾಪಾರಸ್ಥರಾಗಿದ್ದರು. ಅದರಲ್ಲೂ ವಿಜಯನಗರದ ಅರಸರ ಆಳ್ವಿಕೆಯ ಸಮಯ ಅವರದ್ದು. ಊರ್ಜಿತಗೊಂಡ ವ್ಯಾಪಾರ ಮನೆಯ ಹಜಾರದ ಒಂದು ಭಾಗವೇ ಅವರ ಮಳಿಗೆ."(ಗೋಪಾಲಕೃಷ್ಣ ಪೈ, ೨೦೧೨, ಪು.)

ಇದರಿಂದಲೇ ತಿಳಿಯಬಹುದು ಅಂದಿನ ಕಾಲದ ವ್ಯಾಪಾರ ಸಾರಸ್ವತ ವ್ಯಾಪಾರ ಎಷ್ಟೊಂದು ಅಭಿವೃದ್ಧಿಗೊಂಡಿತ್ತು ಎನ್ನುವುದನ್ನು ಇವರು ವೆರಣೆಯಲ್ಲಿ ಮಾತ್ರ ವ್ಯಾಪಾರಸ್ಥರಾಗಿರಲಿಲ್ಲ. ಪೋರ್ಚುಗೀಸರು ಭಾರತದ ನೆಲದ ಮೇಲೆ ಕಾಲೀಡುವ ಕನಿಷ್ಠ ಮೂರು ಶತಮಾನಗಳ ಮೊದಲೇ ಗೌಡ ಸಾರಸ್ವತರು ಉತ್ತರ ಕನ್ನಡ ಜಿಲ್ಲೆ, ತಮಿಳುನಾಡು ಮತ್ತು ಕೇರಳಕ್ಕೆ ಬಂದು ವ್ಯಾಪಾರ ಮಾಡುತ್ತಿದ್ದರೆಂಬ ಬಗ್ಗೆ ಐತಿಹಾಸಿಕ ದಾಖಲೆಗಳಿವೆ. ಜೊತೆಗೆ ಮಂಗಳೂರು, ಮಂಜೇಶ್ವರ, ಬಂಟವಾಳ, ಕಾರ್ಕಳ, ಮೂಲ್ಕಿ, ಕಟಪಾಡಿ, ಗಂಗೊಳ್ಳಿ, ಕೊಟ್ಟಿಯ ಸುತ್ತಮುತ್ತ ಪೋರ್ಚುಗೀಸರ ಆಕ್ರಮಣದ ಮೊದಲೇ ಬಂದು ನೆಲೆಸಿ ವ್ಯಾಪಾರದಲ್ಲಿ ತೊಡಗಿದರು ಎಂದು ಇತಿಹಾಸ ತಿಳಿಸುತ್ತದೆ.

ಅಂದರೆ ಸಾರಸ್ವತರು ಗೋವಾಕ್ಕೆ ಬಂದ ಮೇಲೂ ವ್ಯಾಪಾರವನ್ನೇ ಮಾಡ ತೊಡಗುತ್ತಾರೆ. ಆದರೆ, ವ್ಯಾಪಾರದ ಜೊತೆಗೆ ಕೃಷಿಯೂ ಇವರ ಉದ್ಯೋಗವಾಗಿತ್ತು. ವಲಸೆ ಹೋದ ನಂತರವೂ ತಮ್ಮ ಮೂಲ ವೃತ್ತಿಯನ್ನು ಬಿಡದೇ ತಾತ ನರಸಪಯ್ಯನವರು ಮಾಡುತ್ತಿದ್ದ ವ್ಯಾಪಾರದಿಂದ ಮಕ್ಕಳು, ಮರಿಮಕ್ಕಳು ಕಲಿತು ಕರಗತವಾಗಿದ್ದರಿಂದ ಪೋರ್ಚುಗೀಸರ ಆಕ್ರಮಣದ ನಂತರ ವಲಸೆ ಹೊರಟ ಸಾರಸ್ವತರು ಕುಂಬಳೆಯಲ್ಲಿ ನೆಲೆನಿಂತು ವ್ಯಾಪಾರಕ್ಕಿಳಿದರು.

ಇವರಲ್ಲಿ ವ್ಯಾಪಾರವೆನ್ನುವುದು ಎಷ್ಟು ಕರಗತವಾಗಿತ್ತು ಅಂದರೆ ಅಲ್ಲಿಯ ಜನ ವಿಟ್ಠು ಪೈಗೆ "ವಿಟ್ಠೂ ವ್ಯಾಪಾರ ನಿಮಗೆ ಹೇಳಿಕೊಡಬೇಕಾಗಿಲ್ಲ. ನಿಮ್ಮ ಅಜ್ಜ ನರಸಪ್ಪಯ್ಯನವರ ಕಾಲದಲ್ಲಿ ವೆರಣಿಯ ಮನೆಯಲ್ಲಿಯೇ ವ್ಯಾಪಾರ ನಡೆಯುತ್ತಿತ್ತಂತೆ ಅಂತವರ ಮೊಮ್ಮಗನಿಗೆ ವ್ಯಾಪಾರ ಹೇಳಿಕೊಡುವುದೆಂದರೆ ಮೀನಿಗೆ ಈಜು ಕಲಿಸಿದಂತೆ."(ಅದೇ, ಪು.೨೩೧) ಎಂದು ಹೇಳುವ ಮಾತು ವಿಟ್ಠು ಪೈ ಕುಟುಂಬದ ವ್ಯಾಪಾರದ ಚಾಣಕ್ಷತೆಯನ್ನು ತೋರಿಸುತ್ತದೆ.

ಕಾಡಿನಿಂದ ಬರುವ ಯಾವುದೇ ವಸ್ತುವನ್ನು ಬಹಳ ಕಡಿಮೆ ದರದಲ್ಲಿ ಕೊಂಡುಕೊಂಡು ಅವರಿಗೆ ಬೇಕಾದ ತನ್ನಲ್ಲಿದ್ದ ವಸ್ತುಗಳನ್ನು ಲಾಭಕ್ಕೆ ಮಾರುವುದರಿಂದ ಯಶಸ್ಸುಗಳಿಸಿದ. ಇವನ ನಂತರ ಬಂದ ರಾಮಚಂದ್ರ ಪೈ ಅದೇ ವ್ಯಾಪಾರವನ್ನೇ ಮುಂದುವರಿಸಿದ. ಹಾಗೆಯೆ ವ್ಯಾಪಾರದಲ್ಲಿ ಜನರನ್ನು ಆಕರ್ಷಿಸಲು ಕೆಲವೊಂದು ತಂತ್ರಗಳನ್ನು ಬಳಸಿದ್ದ. ಅಗತ್ಯ ವಸ್ತುಗಳನ್ನು ತಂದು ಅರಳೀ ಕಟ್ಟೆಯ ಮೇಲೆ ಬಿಡಿಸಿ ಇಟ್ಟು ಜನರನ್ನು ಆಕರ್ಷಿಸುವಂತೆ ಮಾಡುತ್ತಿದ್ದ ಜೊತೆಗೆ ಕಟ್ಟೆಯ ಮೂಲೆಯಲ್ಲಿ ಹೂಜಿಯೊಂದರಲ್ಲಿ ತಣ್ಣೀರು ತುಂಬಿ ಇಡುತ್ತಿದ್ದ ಬಂದವರಿಗೆ ನೀರು ಬೆಲ್ಲದ ಮುದ್ದೆ ಎದುರಿಟ್ಟು ಅದೂ ಇದೂ ಮಾತಾನಾಡುತ್ತಾ ವ್ಯಾಪಾರವನ್ನು ಕುದುರಿಸಿಕೊಳ್ಳ ತೊಡಗಿದ್ದ. ಕುಂಬಳೆಗೆ ಹೋಗಲೆಂದು ಬಂದವರನ್ನು ತನ್ನ ಮಾತಿನ ಬಂಡವಾಳದಿಂದ "ನಿಮಗೆ ಅಲ್ಲಿ ಸಿಗುವ ದರ ನಾವೇ ಕೊಟ್ಟರಾಯಿತಲ್ಲವೋ?"(ಅದೇ, ಪು.೨೩೧) ಎಂದು ನಕ್ಕು ವ್ಯಾಪಾರದಲ್ಲಿ ಯಶಸ್ಸು ಗಳಿಸಿದ.

ಇವರು ವ್ಯಾಪಾರದಲ್ಲಿ ಎಷ್ಟು ಹೆಸರುವಾಸಿಯಾಗಿದ್ದರು ಅಂದರೆ ಜನರು "ಬೇಳದ ಸಾಹುಕಾರರಲ್ಲವೇ? ಅವರ ಕಣ್ಣಿಗೊಂದು ವಸ್ತು ಬಿದ್ದರೆ ಅದು ಬೇಲಿದಾಟಿ ಬರುವುದುಂಟೆ? ಸುಂಕದ ಕಟ್ಟೆಯವರಿಗಿಂತ ಸೂಕ್ಷ್ಮ ಆ ಕೊಂಕಣಿಯ ಕಣ್ಣು"ಅದೇ, ಪು.೨೩೦) ಎಂದು ಮಾತಾಡುತ್ತಿದ್ದರು. ಇದಷ್ಟೇ ಅಲ್ಲದೇ ಈ ವ್ಯಾಪಾರಿಗಳನ್ನು ಬಗ್ಗುಬಡಿಯಬೇಕಾದರೆ ಆ ಕೊಂಕಣಿಯೇ ಬೇಕು ಎಂದು ಜನ ಮಾತನಾಡಿಕೊಳ್ಳುತ್ತಿದ್ದರು. ಹೀಗೆ ವ್ಯಾಪಾರದ ಯಶಸ್ಸಿನಿಂದ ಬೇಳಕಟ್ಟೆ ರಾಮಚಂದ್ರ ಪೈ ಎಂದೇ ಹೆಸರು ಪಡೆದ ಆಸ್ತಿಯನ್ನು ಖರೀದಿಸುತ್ತಾನೆ.

ಡಾ.ಕೆ.ಮೋಹನ್‌ಕೃಷ್ಣ ರೈ ಅವರು ಒಂದು ಕಡೆ ವ್ಯಾಪಾರಕ್ಕಾಗಿ ಸಾರಸ್ವತರು ವಲಸೆ ಬಂದುದರ ಕುರಿತು ಉಲ್ಲೇಖಿಸುತ್ತಾರೆ. "ಕೊಂಕಣಿಗಳು ಅಥವಾ ಗೌಡ ಸಾರಸ್ವತ ಬ್ರಾಹ್ಮಣರು ಕರಾವಳಿ ತೀರದ ಪಟ್ಟಣಗಳಲ್ಲಿ ಹೆಚ್ಚಾಗಿ ವ್ಯಾಪಾರ ನಡೆಸುತ್ತಿದ್ದರು. ಕೊಂಕಣಿಗಳು ಭಾರತದ ಪಶ್ಚಿಮ ಕರಾವಳಿಯ ಪ್ರಮುಖ ವರ್ತಕ ಸಮುದಾಯವಾಗಿದ್ದು, ಮುಂಬಯಿಯಿಂದ ಕೇರಳದವರೆಗೆ ವ್ಯಾಪಾರ ನಡೆಸುತ್ತಿದ್ದರು. ಕೊಂಕಣಿಗಳು ಗೋವಾವನ್ನು ಪ್ರಮುಖ ಕೇಂದ್ರವನ್ನಾಗಿ ಆಯ್ಕೆ ಮಾಡಿಕೊಂಡಿದ್ದರು. ಅಲ್ಲಿಂದ ವಿವಿಧ ಪ್ರದೇಶಗಳಿಗೆ ವಲಸೆ ಬಂದರು. ಹೈದರಾಲಿಯು ಇವರನ್ನು ಮೈಸೂರು ರಾಜ್ಯಕ್ಕೆ ಬರಮಾಡಿಕೊಂಡನು. ಬ್ರಿಟಿಷರ ಆಳ್ವಿಕೆ ಯುದ್ಧಕ್ಕೂ ಇವರು ಯಶಸ್ವಿ ವರ್ತಕರಾಗಿಯೇ ಮುಂದುವರೆದರು. ಬ್ರಿಟೀಷ್ ಮತ್ತು ಅರಬ್ ವರ್ತಕರ ನಡುವಿನ ಮನಸ್ತಾಪದ ಲಾಭವನ್ನು ಇವರು ಪಡೆದುಕೊಂಡರು."(ಡಾ.ಕೆ.ಮೋಹನ್‌ಕೃಷ್ಣ ರೈ, ಪು.೩೮) ಎಂದು ವಿಶ್ಲೇಷಿಸುತ್ತಾರೆ. ಈ ಮಾಹಿತಿ ಪ್ರಕಾರ ಸಾರಸ್ವತರು ಪೋರ್ಚುಗೀಸರ ಆಕ್ರಮಣದ ಜೊತೆಗೆ ವ್ಯಾಪಾರದ ನಿಮಿತ್ತವಾಗಿ ಕರೆಸಿಕೊಂಡ ಹೈದರಾಲಿಯ ಮಾತಿನಂತೆ ಸಾರಸ್ವತ ಬ್ರಾಹ್ಮಣರು ಮೈಸೂರು ರಾಜ್ಯಕ್ಕೆ ವಲಸೆ ಹೋಗಿ ಬ್ರಿಟೀಷರ ಆಳ್ವಿಕೆಯಲ್ಲಿ ಯಶಸ್ವಿ ವ್ಯಾಪಾರಸ್ಥರಾಗಿ ಬದುಕಿದರೂ ಎಂಬ ಅಂಶ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ವ್ಯಾಪಾರ ಮತ್ತು ವಲಸೆಗಿರುವ ಅಂತಃಸಂಬಂಧದ ಕಥನದಲ್ಲಿ ಸ್ವಪ್ನ ಸಾರಸ್ವತ ಕಾದಂಬರಿ ಪ್ರಮುಖ ವಸ್ತುವಾಗುತ್ತದೆ. ಮತ್ತು ಪೋರ್ಚುಗೀಸರ ವ್ಯಾಪಾರ ಹಾಗೂ ವಲಸೆಗಿರುವ ಸಂಬಂಧ ಮತ್ತು ಸಾರಸ್ವತ ಬ್ರಾಹ್ಮಣರ ವ್ಯಾಪಾರ ವಲಸೆಗಿರುವ ಸಂಬಂಧ ಭಿನ್ನ ಕಾರಣ, ಪ್ರಕ್ರಿಯೆ, ಪರಿಣಾಮಗಳನ್ನು ಗುರುತಿಸಬಹುದು.

ಅದರಲ್ಲೂ ಮುಸಲ್ಮಾನರು, ಪೋರ್ಚುಗೀಸರ ಮುಂಚೆಯೇ ತಮ್ಮ ವ್ಯಾಪಾರವನ್ನು ಭಾರತದದ್ಯಾಂತ ನಡೆಸುತ್ತಿದ್ದರೂ ಮುಸ್ಲಿಮರನ್ನೇ ಬಗ್ಗು ಬಡಿಯುವಷ್ಟು ಚಾಣಕ್ಷತೆ ಸಾರಸ್ವತರಲ್ಲಿದ್ದುದು ಪ್ರಮುಖ ಅಂಶವಾಗುತ್ತದೆ. ಹಾಗೆಯೆ ಪೋರ್ಚುಗೀಸರು ಸ್ಥಳೀಯರಿಗೆ ಸಹಾಯ ಮಾಡುವ ನೆಪದಲ್ಲಿ ಮುಸಲ್ಮಾನರನ್ನು ಬಗ್ಗುಬಡಿದು ತಾವು ನೆಲೆಯಾದರು. ಸ್ಥಳೀಯ ಜನರನ್ನು ತುಳಿದು ತಾವು ಮೇಲೆ ಬಂದರು. ಸಾರಸ್ವತರ ವ್ಯಾಪಾರದಲ್ಲಿ ಹಣ, ಮಾತು, ಬಂಡವಾಳವಾದರೆ, ಪೋರ್ಚುಗೀಸರ ವ್ಯಾಪಾರದಲ್ಲಿ ದಬ್ಬಾಳಿಕೆ, ದೌರ್ಜನ್ಯ, ಕೊಲೆ, ವಂಚನೆ, ಮೋಸಗಳೇ ಮುಖ್ಯವಾಗುತ್ತದೆ. ಪೋರ್ಚುಗೀಸರು ವ್ಯಾಪಾರಕ್ಕಾಗಿಯೇ ವಲಸೆ ಬಂದರೆ, ಸಾರಸ್ವತರು ಬದುಕುವುದಕ್ಕಾಗಿ ವಲಸೆ ಹೋಗಿ ಜೀವನ ನಿರ್ವಹಣೆಗೆ ವ್ಯಾಪಾರವನ್ನು ಕಂಡುಕೊಂಡರು.

ಪೋರ್ಚುಗೀಸರ ವ್ಯಾಪಾರದಿಂದ ಅನೇಕ ಜನ ಸಾವು ನೋವುಗಳಿಗೆ ಗುರಿಯಾದರು. ಸಾರಸ್ವತರಿಂದ ಕುಂಬಳೆಯಲ್ಲಿ ಈ ಮೊದಲೇ ಇದ್ದ ಮುಸಲ್ಮಾನರ ವ್ಯಾಪಾರ ಸ್ವಲ್ಪಮಟ್ಟಿಗೆ

ಕಡಿಮೆಯಾದದ್ದು ನಿಜ. ಆದರೆ ಇದು ಸಾರಸ್ವತರ ಜಾಣ್ಮೆ, ಬುದ್ಧಿವಂತಿಕೆ, ವ್ಯಾಪಾರ ಕೌಶಲತೆಯನ್ನು ತೋರಿಸುತ್ತದೆ. ಸಾರಸ್ವತರ ವ್ಯಾಪಾರದಲ್ಲಿ ಅವರ ಸಮುದಾಯದಲ್ಲಿದ್ದ ಒಗ್ಗಟ್ಟು, ಆತ್ಮೀಯತೆ ಸಹಾಯ ಗುಣವನ್ನು ತೋರಿಸುತ್ತದೆ. ಒಟ್ಟಾರೆ ವ್ಯಾಪಾರ ಮತ್ತು ವಲಸೆಯ ಸಂಬಂಧ ಅದು ಇಂದಿನದಲ್ಲದೆ ಚಾರಿತ್ರಿಕವಾಗಿಯೂ ಸಹ ಬೆಳೆದುಕೊಂಡು ಬಂದ ಅವಿನಾಭಾವ ಸಂಬಂಧದ ಕೊಂಡಿ ಎಂದು ಹೇಳಬಹುದು.

ಇದೇ ರೀತಿ ಎಸ್.ಎಲ್.ಭೈರಪ್ಪರವರ 'ಸಾರ್ಥ' ಕಾದಂಬರಿಯು "ಕ್ರಿ.ಶ.ಎಂಟನೇ ಶತಮಾನದಲ್ಲಿ ನಡೆಯಿತೆಂದು ಕಲ್ಪಿಸಿಕೊಳ್ಳಬೇಕಾದ ಸಂಗತಿಗಳನ್ನಾಧರಿಸಿದ ಕಾದಂಬರಿ. ಆನೆ, ಕುದುರೆ, ಹೆಸರಗತ್ತೆ ನೂರಾರು ಗಾಡಿಗಳ ಮೇಲೆ ವಾಣಿಜ್ಯ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತ ದೂರ ದೂರ ದೇಶಗಳಲ್ಲಿ ಸಂಚರಿಸುವುದನ್ನು ಆ ಕಾಲದಲ್ಲಿ ಸಾರ್ಥ ಎನ್ನುತ್ತಿದ್ದರು"(ಭೈರಪ್ಪಎಸ್.ಎಲ್. ೧೯೯೮, ಮುನ್ನುಡಿ) ಎಂಬ ಮಾತನ್ನು ಲೇಖಕರು ಮುನ್ನುಡಿಯಲ್ಲಿ ಕಾದಂಬರಿಯ ವಸ್ತುವನ್ನು ಕುರಿತು ವಿವರಿಸುತ್ತಾರೆ.

ಅಂದರೆ ಕ್ರಿ.ಶ.೮ ನೇ ಶತಮಾನದಲ್ಲೂ ಸಹ ವ್ಯಾಪಾರಕ್ಕಾಗಿ ವಲಸೆ ಹೋಗುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಕಥಾನಾಯಕ ನಾಗಭಟ್ಟ ರಾಜನ ಆಜ್ಞೆಯ ಮೇರೆಗೆ ಸಾರ್ಥದ ಮರ್ಮವನ್ನು ತಿಳಿಯಲೆಂದೇ ತಾತ್ಕಾಲಿಕ ವಲಸೆ ಹೋಗುತ್ತಾನೆ. ಆದರೆ ನಾನಾ ಕಾರಣಗಳಿಂದ ತಿರುಗಿ ಬರಲಾಗದೇ ಅಲ್ಲೇ ನೆಲೆಯಾಗುತ್ತಾನೆ. ಈ ನಡುವೆ ನಡೆಯುವ ಯಾವ ಯಾವ ಪದಾರ್ಥಗಳನ್ನು ಎಲ್ಲೆಲ್ಲಿಂದ ಕೊಳ್ಳುತ್ತಾರೆ, ಎಲ್ಲೆಲ್ಲಿಗೆ ಮುಟ್ಟಿಸಿ ಮಾರುತ್ತಾರೆ. ಮೂಲ ಬೆಲೆ ಎಷ್ಟು, ಅಂತಿಮ ಬೆಲೆ ಎಷ್ಟು, ವಾಣಿಜ್ಯ ಕೇಂದ್ರಗಳಾವುವು, ಪ್ರಯಾಣದ ಸಾಗಾಣಿಕೆಯ ಕಷ್ಟನಷ್ಟಗಳೇನು, ಯಾವ ಯಾವ ರಾಜ್ಯಗಳಲ್ಲಿ ಯಾವ ಲೆಕ್ಕದ ಕರ ಬೀಳುತ್ತದೆ ಎಂಬ ವಿಷಯಗಳ ಸಂಗ್ರಹಣೆಗೆ ಕಥಾನಾಯಕ ಹೊರಡುತ್ತಾನೆ.

"ಅರಸರ ಆಡಳಿತ ಕಾಲದಲ್ಲಿ ಸಾರ್ಥದಲ್ಲಿ ಆಳುತನಕ್ಕೆ ಸೇರಿದವರು ವ್ಯಾಪಾರಿ ಸರಕುಗಳನ್ನು ಹೊತ್ತ ಎತ್ತು, ಕತ್ತೆ, ಆನೆ, ಕುದುರೆಗಾಡಿಗಳನ್ನು ಒಯ್ಯುತ್ತಿದ್ದರು. ಅಂದಿನ ಕಾಲದಲ್ಲಿ ಸಾರಿಗೆ ಸಂಪರ್ಕವಿಲ್ಲದ ವರ್ಷನುಗಟ್ಟಲೇ ಅಲೆದು  ವ್ಯಾಪಾರ ಮಾಡುತ್ತಿದ್ದರು. ಇದಷ್ಟೇ ಅಲ್ಲದೇ ಈ ಕತೆಯಲ್ಲಿ ವಿವರಿಸಿದಂತೆ ಇನ್ನೂರು ಎತ್ತಿನ ಗಾಡಿಗಳು, ಚಕ್ರದ ಗಾಲಿಗಳು ಮುರಿದರೆ ಸರಿ ಮಾಡುವ ಬಡಗಿಗಳು ಕಮ್ಮಾರರು ಸಾಮಾನು ಹೊರುವ ಹತ್ತು ಆನೆಗಳು ಜನ ಮತ್ತು ಪದಾರ್ಥಗಳನ್ನು ಹೊರುವ ಎಪ್ಪತ್ತೈದು ಕುದುರೆಗಳು ನೂರು ಕತ್ತೆಗಳು ಬರೀ ವ್ಯಾಪಾರದ ಸರಕುಗಳಲ್ಲಿ ಅಷ್ಟು ಜನರಿಗೆ ಊಟಕ್ಕೆ ಬೇಕಾದ ದಿನಸಿ ಧಾನ್ಯಗಳನ್ನು ಮಾಂಸಕ್ಕೆ ಬೇಕಾದ ಆಡುಕುರಿಗಳನ್ನು ದಾರಿಯ ಹಳ್ಳಿ ಕಿರುಪಟ್ಟಣಗಳಲ್ಲಿ ಕೊಳ್ಳುತ್ತಿದ್ದರು. ಬೀಡಾರ ಬಿಟ್ಟಲ್ಲಿ ಅಡುಗೆ

ಮಾಡುವ ಆಳುಗಳು, ಗುಂಪಿನಲ್ಲಿ ಎಷ್ಟು ಜಾತಿಗಳಿವೆಯೋ ಅಷ್ಟು ಜಾತಿಯ ಅಡಿಗೆಯಾಳುಗಳು ತಮ್ಮ ಜಾತಿಯವರಿಗೆ, ಅಡಿಗೆಯವರಿಲ್ಲದಾಗ ಒಬ್ಬೊಬ್ಬರು ತಾವೇ ಮಾಡಿ ಉಂಡು ಉಳಿದುದನ್ನು ಕಟ್ಟಿಕೊಂಡು ನಡೆಯುತ್ತಿದ್ದರು. ಇಷ್ಟೆಲ್ಲ ಸರಕು ಸಂಪತ್ತುಗಳನ್ನು ದೋಚುವ ದರೋಡೆಕಾರರಿಂದ ರಕ್ಷಿಸಲು, ಬಿಲ್ಲು ವಿದ್ಯೆ, ಕತ್ತಿ ವಿದ್ಯೆಗಳಲ್ಲಿ ನುರಿತ ವೀರಭಟ್ಟರ ಒಂದು ತಂಡವೇ ಇತ್ತು. ಸಾರ್ಥದಲ್ಲಿ ಕೆಲಸ ಮಾಡುವ ಪ್ರತಿಯೊಬ್ಬ ಆಳು, ಅಸ್ತ್ರ, ಶಸ್ತ್ರಗಳಲ್ಲಿ ನುರಿತನಾಗಿರಬೇಕು. ಪ್ರತಿಯೊಂದು ರಾಜ್ಯ, ಪ್ರತಿಯೊಂದು ಪಟ್ಟಣವನ್ನು ಪ್ರವೇಶಿಸುವಾಗಲೂ ತಮ್ಮಲ್ಲಿರುವ ಸರಕಿನ ಲೆಕ್ಕ ಹೇಳಿ ಸುಂಕ ವಸೂಲು ಮಾಡುತ್ತಿದ್ದರಾದರೂ ಅದಕ್ಕೆ ಪ್ರತಿಯಾಗಿ ಕಳ್ಳಕಾಕರಿಂದ, ಕಾಡುಮೃಗಗಳಿಂದ ರಕ್ಷಣೆಯೊದಗಿಸುವುದು, ಸಂಚಾರ ಮಾರ್ಗಗಳನ್ನು ಸುಸ್ಥಿತಿಯಲ್ಲಿಟ್ಟು ದಾರಿಯಲ್ಲಿ ನೆರಳು, ನೀರು, ತಂಗುದಾಣ ಮೊದಲಾದ ಸೌಕರ್ಯಗಳನ್ನು ಕಲ್ಪಿಸುವ ತಮ್ಮ ಕರ್ತವ್ಯಗಳನ್ನು ಎಲ್ಲ ರಾಜರೂ ಪೂರೈಸುವುದಿಲ್ಲ. ವಿದ್ಯಾರ್ಥಿಗಳು, ತೀರ್ಥಯಾತ್ರಿಕರು, ಪ್ರವಾಸಿಗರು, ನಟನಟಿ, ಗಾಯಕ, ವಾದಕ, ಕಸರತ್ತು ಮೊದಲಾದ ಅಲೆಮಾರಿ ವೃತ್ತಿಯವರು, ಸಾಧುಸನ್ಯಾಸಿಗಳು, ಧರ್ಮ ಪ್ರಚಾರಕರು ಮೊದಲಾಗಿ ದೂರಪ್ರಯಾಣ ಮಾಡುವವರೆಲ್ಲ ಒಂದಲ್ಲ ಒಂದು ಸಾರ್ಥದ ಜೊತೆ ಸೇರುತ್ತಿದ್ದರು. ತಮ್ಮ ಊಟ ತಿಂಡಿ, ನೀರು, ನಿದ್ರೆಗಳ ವ್ಯವಸ್ಥೆಯನ್ನು ತಾವು ಮಾಡಿಕೊಳ್ಳುತ್ತಿದ್ದರಾದರೂ ರಕ್ಷಣೆ ಮತ್ತು ಮಾರ್ಗದರ್ಶನಗಳಿಗಾಗಿ ಅವರು ಸಾರ್ಥಗಳನ್ನು ಆಶ್ರಯಿಸುತ್ತಿದ್ದರು. ಸಾಧು ಸಂತರ, ನಟನಟಿಯರ, ತೀರ್ಥಯಾತ್ರಿಕರ ವೇಷದಲ್ಲಿ ಬಂದು ಸೇರಿಕೊಂಡು ಆಯಕಟ್ಟಿನ ಜಾಗದಲ್ಲಿಇಡೀ ಸಾರ್ಥವನ್ನು ದೋಚುವವರ, ಬೇಹುಗಾರಿಕೆ ಮಾಡುತ್ತಿರುವವರಾಗಿರಬಹುದೆಂಬ ಅನುಮಾನ ಸಾರ್ಥದವರಿಗೂ ಇರುತ್ತದೆ. ಅವರು ಇವರನ್ನು ಬಗೆಬಗೆಯಾಗಿ ಪರೀಕ್ಷಿಸುತ್ತಾರೆ. ನಮ್ಮ ಸಾರ್ಥದ ಜೊತೆ ಬರಬೇಕಾದರೆ ನಾವು ಹೇಳುವ ನೀತಿ ನಿಯಮಗಳನ್ನು ಅನುಸರಿಸಬೇಕು. ರಸ್ತೆ ಕಡೆಯುವುದು, ಮೊದಲಾದ ಕೆಲಸಗಳಲ್ಲಿ ನಮ್ಮ ಆಳುಗಳ ಜೊತೆಗೆ ಕೆಲಸ ಮಾಡಬೇಕು. ದಾರಿಯಲ್ಲಿ ದೊರೆಯುವ ನೀರು, ಸೌದೆ ಮೊದಲಾದವುಗಳನ್ನು ನಮ್ಮ ಜನ, ದನಗಳು ಬಳಸಿ ಉಳಿದರೆ ಮಾತ್ರ ನೀವು ಬಳಸಬೇಕು ಎಂಬಂತಹ ಸಾರ್ಥದವರು ಹಾಕುವ ವಿಧಿಗಳನ್ನು ಅವರೆಲ್ಲ ಬೇರೆ ದಾರಿ ಇಲ್ಲದೇ ಒಪ್ಪಿ ನಡೆಯಬೇಕು."(ಅದೇ, ಪು.೧೫) ಹೀಗೆ ಈ ಕೃತಿ ತಿಳಿಸುತ್ತದೆ

ಈ ತರಹದ ವ್ಯಾಪಾರದ ವಲಸೆಯಲ್ಲಿನ ಸೂಕ್ಷ್ಮ-ವಿಷಯಗಳನ್ನು ಸಮಸ್ಯೆಗಳನ್ನು ಕಟ್ಟಿಕೊಡುತ್ತದೆ. ವಾಹನ ಸೌಕರ್ಯಗಳು ಇಲ್ಲದಂತಹ ಕಾಲದಲ್ಲಿ ಎತ್ತು, ಗಾಡಿಗಳು, ಆನೆ, ಕುದುರೆಗಳಲ್ಲಿ ವರ್ಷನುಗಟ್ಟಲೆ ವಲಸೆ ಹೋಗಿ ಅಲ್ಲಲ್ಲಿ ನೆಲೆಯಾಗಿ ಹೋಗುತ್ತಿದ್ದರು. ಅದರಲ್ಲೂ ವ್ಯಾಪಾರಕ್ಕಾಗಿ ವಲಸೆ ಹೊರಡುವಾಗ ಮುಂದಾಲೋಚನೆಗಳನ್ನು ಮಾಡಿಕೊಂಡು ಗಾಡಿ ಚಕ್ರಗಳಲ್ಲಿ ತೊಂದರೆಯಾದಾಗ ಅವುಗಳನ್ನು ಸರಿಮಾಡಲೆಂದೇ ಕಮ್ಮಾರರು, ಬಡಿಗರನ್ನು ಜೊತೆಗೆ ಕರೆದುಕೊಂಡು ಹೋಗುತ್ತಿದ್ದ ಅವರ ಆಲೋಚನೆಗಳು ಪ್ರಮುಖವಾಗುತ್ತವೆ.

ಹಾಗೆಯೆ ವ್ಯಾಪಾರಕ್ಕೆಂದು ವಲಸೆ ಹೊಗುವವರ ಸಾಂಸಾರಿಕ ಸಮಸ್ಯೆಗಳನ್ನು ಸಹ ನಾವು ಇಲ್ಲಿ ನೋಡಬಹುದು. "ಸಾರ್ಥದಲ್ಲಿ ಆಳುತನಕ್ಕೆ ಸೇರಿದವರಿಗೆ ಸ್ವಂತ ಊರುಕೇರಿಗಳೆಲ್ಲುಂಟು? ಒಮ್ಮೆ ಹೊರಟರೆ ಹಿಂತಿರುಗುವುದು ವರ್ಷಕ್ಕೋ ಎರಡು ವರ್ಷಕ್ಕೋ! ಅಂಥವನಿಗೆ ಊರಿನಲ್ಲಿ ಯಾವ ಹೆಂಡತಿ ನಿಷ್ಠೆಯಿಂದ ಬಾಗಿಲು ಭದ್ರಪಡಿಸಿಕೊಂಡು ಕಾದಿದ್ದಾಳು? ಕೊನೆಗೆ ಅವನಿಗೆ ಸಾರ್ಥವೇ ಊರಾಗುತ್ತದೆ. ಅದೇ ಕೇರಿಯಾಗುತ್ತದೆ. ಅಪರೂಪಕ್ಕೆ ಮೂಲ ಊರಿಗೆ ಹೋದಾಗ ಕೂಡ ಶ್ರೇಣಿಯ ಉಗ್ರಾಣದ ಜಗುಲಿಯೇ ವಾಸ. ಶ್ರೇಷ್ಠಿಯ ಪಾಕ ಶಾಲೆಯೇ ಊಟದ ದಿಕ್ಕಾಗಿ ಬಿಡುತ್ತದೆ. ಇಂಥ ಸ್ಥಿತಿಯಲ್ಲೂ ಸ್ವಂತ ಮನೆ, ಮಠ, ಅಣ್ಣ ತಮ್ಮಂದಿರು, ಹೆಂಡತಿ, ಮಕ್ಕಳನ್ನು ಉಳಿಸಿಕೊಂಡಿರುವವನು ಅದೃಷ್ಟಶಾಲಿ."(ಅದೇ, ಪು.೧೫) ಹೀಗೆ ವ್ಯಾಪಾರಕ್ಕೆಂದು ಹೋಗುವವರ ಸಾರ್ಥ ಜನರ ಕುಟುಂಬಗಳ ಸ್ಥಿತಿಗತಿಗಳನ್ನು ಈ ಕೃತಿ ತೆರೆಡುತ್ತದೆ. ಅದರಲ್ಲೂ ಒಂದೊಂದು ಸಾರಿ ಹೆಂಡತಿ ರಾಜನ ಕೈವಶವಾಗುವ ಸಾಧ್ಯತೆಗಳನ್ನು ಇಲ್ಲಿ ಕಾಣಬಹುದು. ಉದಾ: ನಾಗಭಟ್ಟ ರಾಜನ ಆದೇಶದಂತೆ ವ್ಯಾಪಾರದ ವಹಿವಾಟನ್ನು ತಿಳಿಯಲು ಹೋದಾಗ ಅತನ ಹೆಂಡತಿ ರಾಜನೊಂದಿಗೆ ಸಂಪರ್ಕವಿಟ್ಟು ಕೊಳ್ಳುತ್ತಾಳೆ. ಅಷ್ಟೇ ಅಲ್ಲದೇ ಇದೇ ಉದ್ದೇಶಕ್ಕಾಗಿ ರಾಜ ನಾಗಭಟ್ಟನನ್ನು ವ್ಯಾಪಾರದ ತಂತ್ರಗಳನ್ನು ತಿಳಿಯಲು ಕಳುಹಿಸುತ್ತಾನೆ. ಈ ಕಡೆ ನಾಗಭಟ್ಟನ ಹೆಂಡತಿಯನ್ನು ತನ್ನ ಕಾಮಾಸಕ್ತಿಗೆ ಬಳಸಿಕೊಳ್ಳುತ್ತಾನೆ. ಈ ವಿಷಯ ತಿಳಿದ ನಾಗಭಟ್ಟ ಮತ್ತೇ ತನ್ನ ಊರಿಗೆ ವಾಪಸ್ಸಾಗದೇ ಮಿತ್ರದ್ರೋಹ ಮಾಡಿದ ರಾಜನ ಮೇಲೆ, ಪತಿದ್ರೋಹ ಮಾಡಿದ ಹೆಂಡತಿ ಮೇಲೆ ಸಿಟ್ಟುಗೊಂಡು ತನ್ನ ಅಲೆಯುವಿಕೆಯನ್ನು ಮುಂದುವರಿಸುತ್ತಾನೆ.

ಅಂದರೆ ಈ ವ್ಯಾಪಾರಕ್ಕಾಗಿ ಸಾರ್ಥ ಆಳುಗಳಾಗಿ ವಲಸೆ ಹೋಗುವವರ ಸಂಸಾರಗಳು ಹಾಳಾಗುತ್ತಿದ್ದವು ಮತ್ತು ರಾಜ ವ್ಯಾಪಾರಕ್ಕೆಂದು ಕಳಿಸಿ ಈ ಕಡೆ ಅವರ ಹೆಂಡತಿಯರನ್ನು ಬಳಸಿಕೊಳ್ಳುವ ವಂಚನೆ ಮೋಸವನ್ನು ಸಹ ಬಯಲಿಗೆಳೆಯುತ್ತದೆ, ಎಂದು ಅಭಿವ್ಯಕ್ತಿಸುತ್ತಾರೆ.

ಹಾಗೆಯೆ ಸಾರ್ಥದ ಆಳುಗಳೆಲ್ಲ ಅದೆಷ್ಟು ದೇಶಗಳನ್ನು, ಅದೆಷ್ಟು ನದಿಗಳನ್ನು, ಕಾಡು ಮೇಡುಗಳನ್ನು ನೋಡಿದ್ದಾರೆ. ಗಾಂಧಾರದಿಂದ ಗೌಡ ದೇಶದವರೆಗೆ ನಡುವಣ ಕೇಕಯ ಮಂದ್ರ ಪಾಂಚಾಲ ಕುರು, ಜಾಂಗಲ ಕೋಸಲ ಶ್ರಾವಸ್ತಿ ಅಂತಹ ನಾನಾ ದೇಶಗಳ ವೈಶಿಷ್ಟ್ಯಗಳು, ತಕ್ಷಶಿಲೆಯಿಂದ ರಾಮೇಶ್ವರದವರೆಗಿನ ಹವಾಮಾನ ಬದಲಾವಣೆಗಳು, ಸಸ್ಯ, ಕೃಷಿ ವೈವಿಧ್ಯಗಳನ್ನು ಕಲಿಯುತ್ತಾರೆ. ಇದರಿಂದಾಗಿಯೇ, ನಾಗಭಟ್ಟನಿಗೂ ಸಂಚಾರವೆಂದರೆ ಕಷ್ಟವೆನ್ನಿಸಿದಾತನಿಗೆ ಕ್ರಮೇಣ ನನಗೆ ಸಾರ್ಥ ಜೀವನದಲ್ಲಿ ಪ್ರೀತಿ ಹುಟ್ಟಿ ನಾನು ಒಂದಲ್ಲ ಒಂದು ದಿನ ಸಾರ್ಥವಾಹನೇ ಆಗಬೇಕು ಎಂದು ಕನಸು ಚಿಗುರತೊಡಗಿತು. ಅಂದರೆ ಈ ತರಹದ ಪ್ರಯಾಣದಲ್ಲೂ ಕಷ್ಟಗಳ ನಡುವೆಯೂ ವಿವಿಧ ದೇಶಗಳ ವಿದ್ಯೆಗಳನ್ನು ಕಲಿಯುವ ಅವಕಾಶ ಸಿಗುತ್ತದೆ.

ಸಂಜೆ ಒಂದು ಕಡೆ ನೆಲೆಯಾಗುವಾಗ ಸಾರ್ಥ ಆಳುಗಳು ನೀರು ಹರಿಯುವ ಜಾಗದಲ್ಲಿ ನೆಲೆಯುರುತ್ತಿದ್ದರು. ಇದಷ್ಟೇ ಅಲ್ಲದೇ ಸಾರ್ಥದ ಇಬ್ಬರು ಆ ಕಡೆ ಈ ಕಡೆಗಳಲ್ಲಿ ಒಂದು ಸಾವಿರ ಹೆಜ್ಜೆಗಳಷ್ಟು ದೂರ ಹೋಗಿ ಸ್ಥಳ ಪರೀಕ್ಷೆ ಮಾಡಿಕೊಂಡು ಬರುತ್ತಿದ್ದರು. ಏಕೆಂದರೆ ಇದು ಆನೆಗಳು ಸಂಚರಿಸುವ ಜಾಗವೇ, ರಾತ್ರಿಯ ಹೊತ್ತು ಆನೆಗಳು ನೀರು ಕುಡಿಯಲು ಬರುವ ಸ್ಥಳವೇ ಹೆಜ್ಜೆ ಗುರುತುಗಳಿವೆಯೇ ಎಂದು ಪರೀಕ್ಷಿಸುತ್ತಿದ್ದರು. ಒಂದು ವೇಳೆ ಹುಲಿಗಳು ಬರಬಹುದೆಂದು ರಾತ್ರಿ ಇಡೀ ಬೆಂಕಿ ಉರಿಸುತ್ತಾ ಕಾವಲು ಕಾಯುತ್ತಿದ್ದರು. ಹೀಗೆ ರಕ್ಷಣೆಯ ಜೊತೆಗೆ ಮನರಂಜನೆಯೂ ಇರುತ್ತಿತ್ತು. ದೊಂಬರು ರಾತ್ರಿ ಹೊತ್ತು ಹಾಡಿಕೊಳ್ಳುತ್ತಾ ಕುಳಿಯುತ್ತಿದ್ದರು. ಯಾವ ಯಾವ ಗಾಡಿಗಳಲ್ಲಿ ಯಾವ ಪದಾರ್ಥಗಳಿವೆ ಎಂಬುದು ಸಾರ್ಥವಾಹರಿಗೆ ಮಾತ್ರ ಗೊತ್ತಿದ್ದರೂ ಏಲಕ್ಕಿ, ಮೆಣಸು, ಜಾಯಿ, ಸತ್ರಿಯಂತಹ ಮೊದಲಾದ ಸಾಂಬಾರ ಪದಾರ್ಥಗಳು ಯಾವ ಗಾಡಿಯಲ್ಲಿ ಇವೆ ಎಂಬುದು ವಾಸನೆಯಿಂದ ತಿಳಿಯಬಹುದಾಗಿತ್ತು. ಸಾರ್ಥದ ಕೆಲಸಗಾರರಲ್ಲಿ ಪ್ರತಿಯೊಬ್ಬನೂ ಭಟನೇ ಆಗಿರುತ್ತಾನೆ. ಕತ್ತಿ, ಭರ್ಜಿ, ಬಿಲ್ಲು, ಬಾಣಗಳನ್ನು ಬಳಸುವ ಕೌಶಲ್ಯ, ಧೈರ್ಯಗಳಿಲ್ಲದವನನ್ನು ಈ ಉದ್ಯೋಗಕ್ಕೆ ಸೇರಿಸಿಕೊಳ್ಳುತ್ತಲೇ ಇರಲಿಲ್ಲ. ಯಾವ ಪ್ರಶ್ನೆಗೂ ನೇರವಾಗಿ ಉತ್ತರವನ್ನು ಯಾವ ಕಸುಬುದಾರನೂ ಹೇಳುವುದಿಲ್ಲ. ಮರ್ಮಗಳನ್ನು ಪರ್ಯಾಯವಾಗಿಯೇ ತಿಳಿದುಕೊಳ್ಳಬೇಕು ಮತ್ತು ದರೋಡೆಕಾರರ, ಕಳ್ಳಕಾಕರ, ಕಾಡು ಮೃಗಗಳ ದಾಳಿಯನ್ನು ರಕ್ಷಿಸಬೇಕಿತ್ತು ಹಾಗೂ ಇಂಥ ಸಂದರ್ಭದಲ್ಲಿ ಎಲ್ಲರಿಗೂ ಸೂಚನೆ ಕೊಡುವುದಕ್ಕಾಗಿ ನಗಾರಿಯನ್ನು ಬಡಿಯಲಾಗುತ್ತಿತ್ತು. ಹಾಗೆಯೆ ಇಂಥ ದೇಶ ಸಂಚಾರದಿಂದ ಧರ್ಮ, ವೇದಾಂತ, ಜ್ಯೋತಿಷ್ಯ, ರಾಜ್ಯಾಡಳಿತದಂತಹ ಹಲವು ವಿಷಯಗಳಲ್ಲಿ ಜ್ಞಾನವುಳ್ಳವರಾಗಿದ್ದರು. ಇಡೀ ವೈದಿಕ ಪರಂಪರೆಯಲ್ಲಿ ಸಾರ್ಥರನ್ನು ಪ್ರಯಾಣಿಕರನ್ನು ಸಂರಕ್ಷಿಸಲು ಮಣಿಭದ್ರ ಎಂಬ ದೇವತೆಯಿತ್ತು ಮತ್ತು ಈ ದೇವತೆಯನ್ನು ಭಟರಲ್ಲಿ ಅನೇಕರು ರಾತ್ರಿ ಮಲಗುವಾಗ, ಬೆಳಿಗ್ಗೆ ಎದ್ದ ತಕ್ಷಣ ಮತ್ತು ಪ್ರಯಾಣವನ್ನು ಆರಂಭಿಸುವ ಮುನ್ನ ತಪ್ಪದೇ ನಮೋ ಮಣಿಭದ್ರಾಯ ಎಂಬ ಪ್ರಾರ್ಥನಾ ವಾಕ್ಯವನ್ನು ಹೇಳಿಕೊಳ್ಳುತ್ತಿದ್ದರು.

ಆದರೆ ಭೂವಾಣಿಜ್ಯ ಸಾರ್ಥರಂತೆ ಜಲ ವಾಣಿಜ್ಯಸಾರ್ಥವೂ ಇದೆ. ಬೆಟ್ಟ, ಕಾಡು, ನದಿ, ಮರುಭೂಮಿಗಳನ್ನು ಹಾಯ್ದು ಹೋಗುವ ಭೂಸಾರ್ಥಕ್ಕಿಂತ ಜಲಸಾರ್ಥ ಸುಲಭವೆಂದು ವಾಣಿಜ್ಯರು ಕಂಡುಕೊಂಡಿದ್ದರು. ಆದರೆ ಧರ್ಮಶಾಸ್ತ್ರಗಳು ಸಾಗರ ಪ್ರಯಾಣವನ್ನೇ ವಿರೋಧಿಸಿ ಬಿಟ್ಟಿವೆ. ಹಾಗಾಗಿ ಭೂಸಾರ್ಥಗಳನ್ನು ಸಂರಕ್ಷಿಸುವ ದೇವತೆಗಳಿದ್ದಂತೆ ಸಾಗರಸಾರ್ಥಗಳನ್ನು ಸಂರಕ್ಷಿಸುವ ದೇವ ದೇವತೆಯರಾಗಲೀ ಯಕ್ಷಯಕ್ಷಣಿಯರಾಗಲಿ ಎಲ್ಲಿಂದ ಬರಬೇಕು? ಗೌತಮ ಸೂತ್ರದಲ್ಲಿ ಬ್ರಾಹ್ಮಣಿಗೆ ಸಮುದ್ರ ಪ್ರಯಾಣವನ್ನು ನಿಷೇಧಿಸಿರುವುದನ್ನು ನೆನಪಿಸಿಕೊಂಡು ನಾಗಭಟ್ಟ ಇತರ ಆಲೋಚನೆಗಳನ್ನು ಮಾಡುತ್ತಾನೆ.

ಹಾಗೆಯೇ ಜಲಸಾರ್ಥದವರೆಗೆಂದೆ ಕೆಲವು ದಂತ ಕತೆಗಳನ್ನು ನಾವಿಲ್ಲಿ ನೋಡಬಹುದು. ಸಮುದ್ರದಲ್ಲಿ ವ್ಯಾಪಾರಿಗಳೆಲ್ಲರೂ ಮುತ್ತುರತ್ನಗಳನ್ನು ತುಂಬಿಕೊಂಡು ಹೋಗುತ್ತಿರುವಾಗ ಅತಿದೊಡ್ಡದಾದ ತಿಮಿಂಗಿಲವು ಹಡಗಿಗೆ ಅಪಾಯ ಮಾಡುವ ಹಂತದಲ್ಲಿರುವಾಗ ಅಲ್ಲಿದ್ದ ನಿರ್ಯಾನುಕನು ಎಲ್ಲಾ ವರ್ತಕರಿಗೂ ಕೂಗಿ ಹೇಳಿ ಕಣ್ಣುಮುಚ್ಚಿ ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ ಎಂದು ಪ್ರಾರ್ಥನೆ ಮಾಡತೊಡಗಿದೊಡನೆ ಬಾಯಿ ತೆರಿದಿದ್ದ ತಿಮಿಂಗಿಲ ತನ್ನ ಬಾಯಿಯನ್ನು ಮುಚ್ಚಿಕೊಂಡಿತು ಮತ್ತು ನೀರಿನ ಅಲೆಗಳೆಲ್ಲವೂ ಮರೆಯಾದವೂ ಎಂಬ ಧರ್ಮ ಪ್ರಚಾರಕ್ಕಾಗಿ ಕಟ್ಟಿಕೊಟ್ಟ ಸಾರ್ಥದ ದಂತಕತೆಗಳು ಇಲ್ಲಿದ್ದವು.

ಆದರೆ "ಊರುಕೇರಿ ಮನೆ ಮಠಗಳನ್ನು ಬಿಟ್ಟು ವರ್ಷಗಟ್ಟಲೇ ಹೇಗೆ ದೂರದೂರಿನ ದೇಶಗಳನ್ನು ಸುತ್ತುವ, ಜಂಝಾವಾತಗಳು ಭಯಂಕರ ಅನ್ಯ ಜನಾಂಗಗಳ ಮಧ್ಯೆ ಸಮುದ್ರಯಾನ ಮಾಡುವ, ನಮ್ಮಂಥ ಸಾರ್ಥರಿಗೆ ಮನಸ್ಸಮಾಧಾನ ಮಾಡುವಂತ ಕತೆಗಳನ್ನು ಯಾಕೆ ನೀವು ಕಟ್ಟಲಿಲ್ಲ?"(ಅದೇ, ಪು.೩೩) ಎಂಬ ತಾರ್ಕಿಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ.

ಜೊತೆಗೆ ಪ್ರತಿ ಸಂಜೆಯೂ ಒಂದು ಕಡೆ ಬೀಡು ಬಿಟ್ಟಾಗ ಅದೆಷ್ಟು ಜನ ಕಲ್ಲುಗಳನ್ನು ಹೂಡಿ ಒಲೆ ಹೊತ್ತಿಸಿಕೊಳ್ಳುತ್ತಿದ್ದರು. ಇದು ಸಾರ್ಥ ಜನರ ಧರ್ಮ ಕಟ್ಟಳೆಗಳನ್ನು ತಿಳಿಸುತ್ತದೆ. ಪ್ರತಿ ಜಾತಿಯವರು ಅವರವರ ಆಹಾರ ಪದ್ಧತಿಗೆ ತಕ್ಕಂತೆ ಅಡಿಗೆಯನ್ನು ಮಾಡಿಕೊಳ್ಳುತ್ತಾರೆ ಹೊರತು ಬೇರೆಯವರು ಮಾಡಿದ ಅಡಿಗೆಯನ್ನು ಊಟ ಮಾಡುತ್ತಿರಲಿಲ್ಲ.

ಹೀಗೆ ಬೇರೆ ಬೇರೆ ರಾಜ್ಯಗಳ ಮುಖ್ಯ ಊರುಗಳಲ್ಲಿ ವ್ಯಾಪಾರವಾದಷ್ಟು ಸರಕುಗಳನ್ನು ಇಳಿಸಿ ಅಗ್ಗದಲ್ಲಿ ದೊರೆಯುವ ಪದಾರ್ಥಗಳನ್ನು ಕೊಂಡು ಮಧುರೆಯನ್ನು ತಲುಪಿದ್ದರು. ಎಷ್ಟೋ ಕಡೆ ಗಿಡಗಂಟೆಗಳನ್ನು ಕಡಿದು ದಾರಿ ಮಾಡಿಕೊಂಡು ಗುದ್ದಲಿಯಿಂದ ಹಳ್ಳಿಕೊಳ್ಳಗಳನ್ನು ಮುಚ್ಚಿ ಗಾಡಿ ಹರಿಯುವಂತೆ ಮಾಡಿ ಮುಂದೆ ಸಾಗಿ ತಲುಪುವುದರಲ್ಲಿ ಬಹಳ ದಿನಗಳೇ ಕಳೆದಿದ್ದವು. ಮಧುರೆ ಎಂದರೆ ಮಹಾಪಥಗಳು ಸಂಧಿಸುವ ದೊಡ್ಡ ವಾಣಿಜ್ಯ ಕೇಂದ್ರವಾಗಿತ್ತು. ಏಕೆಂದರೆ, ಇತ್ತ ಸಿಂಧು, ಅತ್ತ ಗಾಂಧಾರದ ಕಡೆಗಳಿಂದ ಬರುವ ಸಾರ್ಥಗಳು ಮಧುರೆಯ ಮಾರ್ಗವಾಗಿ ಬಂದು ಕೋಶಾಂಬಿ, ಪಾಟಲಿಪುತ್ರ ರಾಜಗೃಹಗಳನ್ನು ಸಂಧಿಸಿ ಸಾಗರ ವ್ಯಾಪಾರದ ತಾಮ್ರಲಿಪಿಯನ್ನು ಮುಟ್ಟುವುದು ಹಾಗೆಯೇ ಒಟ್ಟಿಗೆ ಹದಿನೈದಿಪ್ಪತ್ತು ಸಾರ್ಥಗಳು ಬಂದರೂ ಬೀಡು ಬಿಡಲು ಅನುಕೂಲವಾದ ಮೈದಾನಗಳು, ನೀರಿನ ವ್ಯವಸ್ಥೆ ನೆರಳು ಇತ್ತು. ಹಾಗಾಗಿ ಇಲ್ಲಿಗೆ ಬಂದ ಸಾರ್ಥಗಳು ವಸ್ತುವಿನಿಮಯ ಮಾಡಿಕೊಂಡು ರಾಜ್ಯಕ್ಕೆ ಕರ ಸಲ್ಲಿಸಬೇಕಿತ್ತು ಮತ್ತು ರಾಜ್ಯಾಧಿಕಾರಿಗಳ ಸಮ್ಮುಖದಲ್ಲಿ ವ್ಯಾಪಾರ ನಡೆಯಬೇಕಿತ್ತು. ಮಾಡಿದ ವ್ಯಾಪಾರದ

ಲೆಕ್ಕವನ್ನು ಅಧಿಕಾರಿಗಳು ಪರಿಶೀಲಿಸುತ್ತಿದ್ದರು. ಇದಕ್ಕೆಂದೇ ಒಂದು ದೊಡ್ಡ ನಿರ್ಮಾಣ ಮಾಡಿದ್ದರು ಮತ್ತು ಅದಕ್ಕೆ ಕಾವಲಾಗಿ ಭಟರು ಸದಾ ನಿಂತಿರುತ್ತಿದ್ದರು.

ಈ ಸಾರ್ಥರವರ ವಲಸೆಯಲ್ಲಿ ಇರತಕ್ಕಂತಹ ಬಹುಮುಖ್ಯ ಸಮಸ್ಯೆಗಳೆಂದರೆ ಕಳ್ಳಕಾಕರ, ರಾಜಭಟ್ಟರ, ಮಳೆಸಿಡಿಲುಗಳು, ವನ್ಯಮೃಗಗಳ, ಚಂಡಿ ಚಾಮುಂಡಿ, ಶಾಕಿನಿ ಡಾಕಿನಿಯಾದಿ ದುಷ್ಟಶಕ್ತಿಗಳು ಹಾನಿಯಂತಹ ಸಮಸ್ಯೆಗಳು ಕಾಡುತ್ತಿದ್ದರೂ ಅವೆಲ್ಲವನ್ನು ರಕ್ಷಿಸಿ ಸಾರ್ಥವಾಹರು ತಮ್ಮ ದಾರಿಯನ್ನು ಸಾಗಿಸುತ್ತಿದ್ದರು.

ಇಷ್ಟೆಲ್ಲಾ ಅಂಶಗಳಿಂದ ನಾಗಭಟ್ಟ ಸಾರ್ಥವಾಹನರ ಮರ್ಮವನ್ನು ತಿಳಿಯಲು ಬಂದು ಅವರೊಡನೆ ಮಥುರೆ ಸಾಗಿಬಂದುದರ ಪರಿಣಾಮವಾಗಿ ಸಾರ್ಥ ಜನರ ಯಾವ ಭಟನನ್ನು ಮಾತನಾಡಿಸುತ್ತಾ ಕುತರೇ, ಯಾವ, ಊರು, ಅದು ಎಲ್ಲಿದೆ, ಯಾವ ಯಾವ ದೇಶಗಳನ್ನು ಹಾದು ಬಂದಿರಿ, ಮಾರ್ಗರಕ್ಷಣೆ ಹೇಗಿದೆ ಎತ್ತ, ಹೊರಟಿದ್ದೀರಿ, ಯಾವ ಯಾವ ವಸ್ತುಗಳ ವ್ಯಾಪಾರ ಹೇಗೆ ನಡೆಯುತ್ತಿದೆ. ಹೇಗೆ ಎಂದು ಚರ್ಚಿಸಿದರೆ, ಬೇರೆ ಬೇರೆ ರಾಜ್ಯಗಳ ಆಡಳಿತ ಮತ್ತು ರಾಜಕೀಯ ಸ್ಥಿತಿಗತಿಗಳ ಹಿನ್ನೆಲೆಯ ಪರಿಚಯದ ಜೊತೆಗೆ ಪಥಗಳ ಸುಸ್ಥಿತಿ ಅಥವಾ ದುಃಸ್ಥಿತಿ ಕಳ್ಳಕಾಕರ ಪೀಡೆಯುಂಟೇ ಅಥವಾ ಇಲ್ಲವೇ ಕರಾಧಿಕಾರಿಗಳು ಪ್ರಾಮಾಣಿಕರೇ ಇಲ್ಲವೇ, ಕರದ ಪ್ರಮಾಣ ಯಾವ ಮಟ್ಟದ್ದು ಎಂಬ ಪ್ರಶ್ನೆಗಳಿಗೆ ಉತ್ತರ ಸಿಕ್ಕಿದರೆ ಸಾಕು ಒಂದು ರಾಜ್ಯ ಯಾವ ಸ್ಥಿತಿಯಲ್ಲಿದೆ ಎಂದು ಹೇಳಿ ಬಿಡಬಹುದೆಂಬುದನ್ನು ಅರ್ಥ ಮಾಡಿಕೊಳ್ಳುತ್ತಾನೆ.

ಒಟ್ಟಾರೆ ಅಂದಿನ ೮ ನೇ ಶತಕದಲ್ಲಿ ವ್ಯಾಪಾರ ವಹಿವಾಟು ಮತ್ತು ವ್ಯಾಪಾರಕ್ಕಾಗಿ ವಲಸೆ ಹೋಗಬೇಕಾದಂತಹ ಸಂದರ್ಭದಲ್ಲಿ ಆಳುಗಳ ಭಾವನಾತ್ಮಕ ಮಿಡಿತಗಳು, ಸಮಸ್ಯೆಗಳ ಜೊತೆ ಹಲವು ರಾಜ್ಯಗಳ ಸ್ಥಿತಿಗತಿಗಳ ಪರಿಚಯ ಉಂಟಾಗುತ್ತದೆ. ಈ ಮೂಲಕ ವ್ಯಾಪಾರ ಮತ್ತು ವಲಸೆಗಿರುವ ಅಂತಃಸಂಬಂಧವನ್ನು ಈ ಕೃತಿ ವಿವರಿಸುತ್ತ ಹೋಗುತ್ತದೆ.

ಇದು ಬರೇ ವ್ಯಾಪಾರ ಮತ್ತು ವಲಸೆಯ ಪ್ರಮುಖ ಅಂಶಗಳನ್ನು ಮಾತ್ರ ಚರ್ಚಿಸದೇ ಅದರಿಂದ ಉಂಟಾಗುವ ಸಾರ್ಥ ಜನರ ಕೌಟುಂಬಿಕ, ಆರ್ಥಿಕ, ಶ್ರಮದಾಯಿಕ ಬದುಕನ್ನು ಸಹ ಎಳೆಎಳೆಯಾಗಿ ವಿಸ್ತರಿಸುತ್ತದೆ. ಒಮ್ಮೆ ಸಾರ್ಥಕ್ಕೆ ಆಳಾಗಿ ಸೇರಿಕೊಂಡರೆ ತಿರುಗಿ ಬರುವುದು ಮೂರು, ನಾಲ್ಕು ವರ್ಷಕ್ಕೂ ಅಥವಾ ಅದು ಸಾಧ್ಯವಿಲ್ಲವೋ ಎನ್ನುವ ಸ್ಥಿತಿಯಲ್ಲಿ ತಂದೆ, ತಾಯಿ, ಹೆಂಡತಿ ಮಕ್ಕಳನ್ನು ಸಹ ತೊರೆದು ಹೋಗುತ್ತಿದ್ದ ಸಾಮಾನ್ಯ ಜನರ ಸಂಬಂಧಗಳ ಚಡಪಡಿಕೆ ಇಲ್ಲಿ ಕಾಣಿಸುತ್ತದೆ. ಉದಾ: ನಾಗಭಟ್ಟ ಇಲ್ಲಿ ಸಾರ್ಥರಲ್ಲಿ ಒಬ್ಬ ಆಳಾಗದಿದ್ದರೂ ರಾಜನ ಕುತಂತ್ರಕ್ಕೆ ಬಲಿಯಾಗಿ ಸಾರ್ಥ ಜನರ ಒಳ ಮರ್ಮವನ್ನು ತಿಳಿಯಲು ಹೋಗಿ ಹೆಂಡತಿಯನ್ನು ಕಳೆದುಕೊಳ್ಳುತ್ತಾನೆ. ಮತ್ತೆ ತಿರುಗಿ ಹೋಗದೇ ಅಲೆಮಾರಿಯಂತೆ ಅಲೆದಾಡಿ

ನಾನಾ ಬಗೆಯ ಅನುಭವಗಳಿಗೆ ಒಳಗಾಗಿ ಒಂದು ಕಡೆ ನೆಲೆಯಾಗುವ ಅತಂತ್ರ ಸ್ಥಿತಿ ಕಾಣಿಸುತ್ತದೆ. ಜೊತೆಗೆ ಇಲ್ಲಿಯ ಪ್ರಮುಖ ಅಂಶವೆಂದರೆ ವ್ಯಾಪಾರಕ್ಕೆಂದು ಹೊರಡುವ ಆಳು ಜನರು ದಾರಿಯಲ್ಲಿ ನಾನಾ ಕಷ್ಟಗಳಿಗೆ ಗುರಿಯಾಗುತ್ತಾರೆ. ಕಳ್ಳಕಾಕರ, ದರೋಡೆಕೋರರ, ಕಾಡು ಪ್ರಾಣಿಗಳಂತಹ ಹಲವು ಕಷ್ಟ, ಸಮಸ್ಯೆಗಳನ್ನು ಹೆದರಿಸಿ ಕಾಡನ್ನು ಕಡಿದು ದಾರಿ ಮಾಡಿಕೊಂಡು ಮುಂದೆ ಸಾಗುವ ಸ್ಥಿತಿ ಅಂದಿನ ಕಾಲದ ಕಷ್ಟದಾಯಕ ವ್ಯಾಪಾರದ ಸ್ಥಿತಿಗತಿಯನ್ನು ತಿಳಿಸುತ್ತದೆ. ಜೊತೆಗೆ ಅವರಿಗಿದ್ದ ಮುಂಜಾಗ್ರತೆಗಳನ್ನು ಇಲ್ಲಿ ಪ್ರಮುಖವಾಗಿ ಗುರುತಿಸಬಹುದು. ಗಾಡಿ ಚಕ್ರಗಳು ಮುರಿದರೆ ಬಡಿಗರು, ಚಮ್ಮಾರರು, ಕಳ್ಳಕಾಕರರನ್ನು ಹೊಡೆದೊಡಿಸಲು ಬಲಿಷ್ಠ ವ್ಯಕ್ತಿಗಳನ್ನು ಕರೆದುಕೊಂಡು ಹೋಗುವುದು ಇವರ ಎಚ್ಚರಿಕೆಯ ಕ್ರಮಗಳನ್ನು ತಿಳಿಸುತ್ತದೆ. ಹಾಗೆಯೆ ಜಲಸಾರ್ಥಿವಾಹರ ಭೂಸಾರ್ಥ ಜನರ ಕಟ್ಟುಕತೆಗಳು ಆಯಾ ಧರ್ಮದವರ ನಂಬಿಕೆಗಳನ್ನು ಗಟ್ಟಿಗೊಳಿಸುವ ಕೆಲಸ ಮಾಡಿದರೂ ಚಳಿ, ಗಾಳಿ, ಮಳೆ, ಬಿಸಿಲು, ಕಾಡು ಮೃಗಗಳು, ನೀರಿನ ಅಭಾವ, ಸಾವಿನ ಭಯದಲ್ಲಿ ಹೊರಡುವ ಜನ ಮತ್ತು ಭೂಸಾರ್ಥ ಜನರಿಗೆ ಇತರ ಕಟ್ಟುಕತೆಗಳು ಮನಸ್ಸಿಗೆ ಸಮಾಧಾನವನ್ನು, ನಂಬಿಕೆ, ಶಾಂತಿಯನ್ನು ತರಿಸುವ ಕೆಲಸ ಮಾಡುತ್ತವೆ. ಉದಾ: ಜನಸಾರ್ಥದಲ್ಲಿ ದೊಡ್ಡ ತಿಮಿಂಗಿಲದಿಂದ ರಕ್ಷಿಸಿದ್ದು ಬೌದ್ಧ ಧರ್ಮದ ಮಂತ್ರದಿಂದ ಬುದ್ಧ ರಕ್ಷಿಸಿದ ಎಂಬ ಕತೆ ಮತ್ತು ಮಣಿಭದ್ರ ಎಂಬ ಸಾರ್ಥ ಜನರ ರಕ್ಷಣೆಗಾಗಿ ಇರುವ ಒಬ್ಬ ದೇವತೆಯ ಮಂತ್ರದ ಜಪ ಮಾಡುವ ಸಂದರ್ಭಗಳನ್ನು ಇಲ್ಲಿ ನೋಡಬಹುದು.

ಹಾಗೆಯೆ ವ್ಯಾಪಾರವೆಂದ ಮೇಲೆ ಮೋಸ ವಂಚನೆ ಇದ್ದ ಹಾಗೆ ಅಂದಿನ ಕಾಲದಲ್ಲೂ ರಾಜ್ಯದಿಂದ ರಾಜ್ಯಕ್ಕೆ ಹೋದಾಗ ಸರಕಿನ ಮೇಲೆ ಹೆಚ್ಚು ಕರಗಳನ್ನು ಹೇರುವುದು ಸಾಮಾನ್ಯವಾಗಿತ್ತು ಎಂಬ ಹಲವು ಅಂಶಗಳನು ಈ ಕಾದಂಬರಿ ವಿಸ್ತರಿಸುತ್ತದೆ. ಹೀಗೆ ವ್ಯಾಪಾರಕ್ಕಾಗಿ ವಲಸೆ ಹೋಗುವ ಅಲ್ಲಲ್ಲಿ ತಾತ್ಕಾಲಿಕ ನೆಲೆಯಾಗುವಲ್ಲಿಯೂ ಸಹ ನಾನಾ ತರಹದ ಸಮಸ್ಯೆಗಳಿಗೆ ಅನುಭವಗಳಿಗೆ ಗುರಿಯಾಗುವ ಸ್ಥಿತಿಗತಿಯನ್ನು ಸೂಕ್ಷ್ಮವಾಗಿ ಕಟ್ಟಿಕೊಡುತ್ತದೆ.

ಹೀಗೆ ಇಲ್ಲಿ ಸ್ವಪ್ನಸಾರಸ್ವತ ಮತ್ತು ಸಾರ್ಥ ಕಾದಂಬರಿಗಳು ವ್ಯಾಪಾರ ಹಾಗು ವಲಸೆಗಿರುವ ಅಂತಃಸಂಬಂಧವನ್ನು ವಿಸ್ತಾರವಾಗಿ ಕಟ್ಟಿಕೊಡುತ್ತದೆ. ಹಾಗೆಯೆ ಇನ್ನು ಇತರೆ ಕತೆಗಳಲ್ಲಿಯೂ ಸಹಾ ವ್ಯಾಪಾರ ಮತ್ತು ವಲಸೆ ಸಂಬಂಧವನ್ನು ಅಲ್ಲಲ್ಲಿ ಅಭಿವ್ಯಕ್ತಿಸುತ್ತದೆ. ಉದಾ: ನೀಳಾದೇವಿಯವರ ಬೇರಿಂದ ಫಲಕ್ಕೆ ಕಾದಂಬರಿಯಲ್ಲಿ ಅನಂತಚಾರ್ಯರು ಮೈಸೂರಿನಿಂದ ಕೊಳ್ಳೆಗಾಲಕ್ಕೆ ಬಂದು ನೆಲೆಯಾದಾಗ ಅಲ್ಲಿದ್ದ ನೇಕಾರ ವೆಂಕಪ್ಪ ಕೊಳ್ಳೆಗಾಲದಲ್ಲಿ ರೇಷ್ಮೆಯ ಮಗ್ಗ ಇಟ್ಟು ಮೂರು ತಿಂಗಳಿಗೊಮ್ಮೆ ಸೀರೆಗಳನ್ನು ತೆಗೆದುಕೊಂಡು ಮಾರಲು ಮೈಸೂರಿಗೆ ಹೋಗುತ್ತಿದ್ದ. ಇಲ್ಲಿ ಬಂದು ಹೋಗುವ ಸ್ಥಿತಿ ಇದ್ದರೂ ವೆಂಕಪ್ಪ ತನ್ನ ಬದುಕಿನ ನಿರ್ವಹಣೆಗೆ ಕೊಳ್ಳೆಗಾಲದಿಂದ ಮೈಸೂರಿಗೆ

ಬಂದು ವ್ಯಾಪಾರ ಮಾಡಿಕೊಂಡು ಹೋಗುತ್ತಿದ್ದವನ ಬದುಕಿನ ಅನಿವಾರ್ಯತೆಯನ್ನು ಇಲ್ಲಿ ಕಾಣಬಹುದು.

ಹಾಗೆಯೆ ಕೆ.ವಿ.ರಾವ್ ಅವರ 'ದರಿದ್ರರು' ಕಾದಂಬರಿಯಲ್ಲಿ ಹಳ್ಳಿಯಿಂದ ನಗರಕ್ಕೆ ಬಂದ ಬಾಬಾ ಮತ್ತು ಇವನ ಸ್ನೇಹಿತ ಅದಂ ವ್ಯಾಪಾರ ಮಾಡಲೆಂದು ಮನೆಯಲ್ಲಿದ್ದ ಅಮ್ಮನ ಎರಡು ಚಿನ್ನದ ಬಳೆಗಳು ಮತ್ತು ತಂಗಿಯ ಕಾಲ್ಗಡಗಳನ್ನು ತೆಗೆದುಕೊಂಡು ಬಂದಿದ್ದರು. ಆದರೆ ಆ ಚಿನ್ನವನ್ನು ಮಾರಲು ಹೋದಾಗ ಪೊಲೀಸರ ಕೈಗೆ ಸಿಕ್ಕಿ ತಪ್ಪಿಸಿಕೊಂಡು ಕೊನೆಗೆ ವ್ಯಾಪಾರ ಮಾಡಬೇಕೆಂಬ ಆಸೆಯು ನಿರಾಸೆಯಾಗಿ ಕಳ್ಳತನದ ದಾರಿ ಹಿಡಿಯುತ್ತಾರೆ.

ಹೀಗೆ ಹಳ್ಳಿಯ ಬಡತನದ ಬದುಕಿಗೆ ಬೇಸತ್ತು ಕದ್ದ ಚಿನ್ನವನ್ನು ಮಾರಲಾಗದೆ ಕಳ್ಳತನದ ಕೆಟ್ಟ ಚಟಗಳಿಗೆ ಬಲಿಯಾಗುವ ಇಂದಿನ ಬಡವರ ಬದುಕಿನ ವಿಪರ್ಯಾಸವನ್ನು ಇಲ್ಲಿ ಚಿತ್ರಿಸುತ್ತಾರೆ.

ಗೀತನಾಗಭೂಷಣರವರ 'ಭೂಮಿ ಮತ್ತು ಬೀಜ' ಕತೆಯಲ್ಲಿ ಕಲಬುರ್ಗಿಯ ಸುತ್ತಮುತ್ತಲಿನ ಹಳ್ಳಿಯ ಜನರು, ಗೌಡರು, ಕುಲಕರ್ಣಿಗಳು ಎಲ್ಲಾರೂ ಸತತ ಮೂರು ವರ್ಷಗಳವರೆಗೆ ಮಳೆಬಾರದೇ ಬರಗಾಲ ಬಂದು ಅಪ್ಪಳಿಸಿದಾಗ ವಿಧಿ ಇಲ್ಲದೇ ಮುಂಬಯಿ, ಹೈದರಾಬಾದ್ ಕಡೆಗೆ ವಲಸೆ ಹೋಗುತ್ತಾರೆ. ಹಳ್ಳಿಯ ಬಡಜನರೆಲ್ಲಾ ಕೂಲಿ ಮಾಡಲು ಬಾಂಬೆಗೆ ಹೋದರೆ ದುಡ್ಡಿದ್ದ ಗೌಡರು ಕುಲಕರ್ಣಿಗಳು ಎಲ್ಲರು ಹೈದರಾಬಾದಿಗೆ ವ್ಯಾಪಾರ ವ್ಯವಹಾರ ಮಾಡಲು ಹೊರಡುತ್ತಾರೆ. ಜೊತೆಗೆ ಸಂಬಂಧಿಕರ ಸಹಾಯವೂ ಶ್ರೀಮಂತರಿಗೆ ಸಿಗುತ್ತದೆ.

ಹಾಗೆಯೆ ಚದುರಂಗರವರ 'ಹೆಜ್ಜಾಲ' ಕಾದಂಬರಿಯಲ್ಲಿ ಕಾಲೂರ ಸ್ಯಾವಂತಿ, ಶ್ರೀನಿವಾಸ ಪುರದ ಅಯ್ಯನೋರು ಸತ್ತ ಮೇಲೆ ಅವರ ಮಗ ಕೊಟ್ಟ ನೂರು ರೂಪಾಯಿಯಿಂದ ಒಂದು ಸ್ವಂತ ಅಂಗಡಿ ತೆಗೆದು ವ್ಯಾಪಾರ ಮಾಡಬೇಕು. ಹೆಚ್ಚು ಲಾಭ ಬಾರದೇ ಇದ್ರು ನಮ್ಮ ಹೊಟ್ಟೆ ಬಟ್ಟೆಗೆ ಮೋಸ ಆಗಲಿಕ್ಕಿಲ್ಲ. ಇಲ್ಲಂದರೆ ಇನ್ನೊಬ್ರ ಹಂಗಿನಲಿ ಬದುಕಬೇಕು ಎಂದು ಆಲೋಚಿಸಿದ. ಇವರಿಗೆ ನೂರು ರೂಪಾಯಿ ಚಿಲ್ಲರೆ ತೆಗೆದುಕೊಳ್ಳಲು ಹೋಟಲಿಗೆ ಹೋದಾಗ ಹೋಟೇಲ್ ಮಾಲೀಕನ ಮೋಸದಿಂದ ನೂರು ರೂಪಾಯಿ ಕಳೆದುಕೊಳ್ಳುತ್ತಾರೆ. ಹೀಗೆ ಬಡವರು ಸಣ್ಣ ವ್ಯಾಪಾರ ಮಾಡಿ ಬದುಕಬೇಕೆಂಬ ಕನಸು ನುಚ್ಚು ನೂರಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ವ್ಯಾಪಾರ ಮತ್ತು ವಲಸೆಗಿರುವ ಅಂತಃಸಂಬಂಧದಲ್ಲಿ ವ್ಯಾಪಾರಕ್ಕಾಗಿ ವಲಸೆ ಹೋಗುವಂತವರು ಹೆಚ್ಚಾಗಿ ಬಂಡವಾಳ ಇರುವಂತಹ ಶ್ರೀಮಂತರು, ಗೌಡರು, ಕುಲಕರ್ಣಿಗಳಂತಹವರೇ ಹೆಚ್ಚಾಗಿರುತ್ತಾರೆ. ಉದಾ: ಭೂಮಿ ಮತ್ತು ಬೀಜ ಕತೆಯಲ್ಲಿ ಹಳ್ಳಿಯ ಬಡಜನರು ಕೃಷಿ ಕಾರ್ಮಿಕರೆಲ್ಲರೂ ಹೊಟ್ಟಪಾಡಿಗಾಗಿ ಮುಂಬೈಗೆ ಹೋದರೆ, ಗೌಡ,

ಕುಲಕರ್ಣಿಗಳು ಹೈದ್ರಬಾದಿಗೆ ವ್ಯಾಪಾರ ಮಾಡಲು ಹೋಗುತ್ತಾರೆ. ಹಾಗೆಯೆ ಸ್ವಪ್ನ ಸಾರಸ್ವತದಲ್ಲಿ ಸಾರಸ್ವತರು ಪೋರ್ಚುಗೀಸರ ದಾಳಿಗೆ ಅಂಜಿ ಕುಂಬಳೆಗೆ ಬಂದು ನಿಂತಾಗಲೂ ವ್ಯಾಪಾರಕ್ಕೆ ಕೈ ಹಾಕಿದರು. ಇದಕ್ಕೆ ಕಾರಣ ಇವರು ಮೊದಲಿಂದಲೂ ವ್ಯಾಪಾರದಲ್ಲೇ ನಿರತರಾಗಿದ್ದು ಮತ್ತು ಕೈಯಲ್ಲಿ ಅಲ್ಪಸ್ವಲ್ಪ ಹಣ ಸಂಪಾದಿಸಿದ್ದು ಮುಖ್ಯ ಕಾರಣವಾಗುತ್ತದೆ.

ಆದರೆ ಹೆಜ್ಜಾಲ ಕಾದಂಬರಿಯಲ್ಲಿ ನೂರು ರೂಪಾಯಿಯಿಂದ ಒಂದು ಸಣ್ಣ ಚಿಲ್ಲರೆ ಅಂಗಡಿ ತೆಗೆದು ಸ್ವತಂತ್ರವಾಗಿ ಬದುಕಬೇಕೆಂದು ಬಯಸಿದ ಕಾಲೂರ ಸ್ಯಾವಂತಿಗೆ ಹೊಟೇಲ್ ಮಾಲೀಕನಿಂದ ಅದು ಸಿಗದಾಗುತ್ತದೆ ಹಾಗೂ ದರಿದ್ರರು ಕಾದಂಬರಲ್ಲಿ ಮನೆಯಲ್ಲಿ ತಾಯಿ, ತಂಗಿಯ ಒಡೆವೆಯನ್ನು ಕದ್ದು ತಂದು ಮಾರಿ ವ್ಯಾಪಾರ ಮಾಡಬೇಕೆಂದಾಗ ಪೋಲೀಸರು ಕಳ್ಳರೆಂದು ಸಂಶಯಿಸಿ ಅಪಾದನೆಯನ್ನು ಹೊರೆಸುತ್ತಾರೆ. ಹಾಗಾಗಿ ಅವರು ಕಳ್ಳತನಕ್ಕೆ ಇಳಿಯುತ್ತಾರೆ.

ಹೀಗೆ ವ್ಯಾಪಾರಕ್ಕಾಗಿ ವಲಸೆ ಹೋದರೂ ಅಥವಾ ವಲಸೆ ಬಂದು ವ್ಯಾಪಾರಕ್ಕಿಳಿದರೂ ಬಡವರ ಮತ್ತು ಶ್ರೀಮಂತರ ಮೇಲೆ ಭಿನ್ನ ತೆರನಾದ ಬದಲಾವಣೆಗಳು ಉಂಟಾಗುತ್ತವೆ. ಹಾಗಾಗಿ ಬಡವರಿಗೆ ಮಾತ್ರ ವಲಸೆ ಬಂದು ವ್ಯಾಪಾರ ಮಾಡುವುದು ವಿರಳವೇ ಆಗಿತು.

## ೭.೪. ವಲಸೆ ಮತ್ತು ಶ್ರಮ ಸಂಸ್ಕೃತಿಯ ಅಂತಃಸಂಬಂಧದ ಕಥನ

ವಲಸೆಗೂ ಮತ್ತು ಶ್ರಮ ಸಂಸ್ಕೃತಿಗೂ ಒಂದು ಅವಿನಾಭಾವ ಸಂಬಂಧ ಹೊಂದಿದೆ. ಶ್ರಮ ಸಂಸ್ಕೃತಿ ಎನ್ನುವಂತದ್ದು ಬಡವರು ತಮ್ಮ ಬದುಕನ್ನು ನಡೆಸಲು ಕಷ್ಟವಾದಾಗ ಅಥವಾ ಜೀವನ ನಡೆಸಲು ಆಗದಂತಹ ಅನಿವಾರ್ಯತೆ ಉಂಟಾದಾಗ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಬಂದು ಇಂತಹದ್ದೆ ಕೆಲಸವೆನ್ನದೇ ಬದುಕು ನಿರ್ವಹಿಸಲು ಸಿಕ್ಕದ್ದನ್ನು, ಸಿಕ್ಕ ಕೆಲಸವನ್ನು ಮಾಡಿ ತಮ್ಮ ಬದುಕನ್ನು ನಡೆಸುವುದೇ ಶ್ರಮ ಸಂಸ್ಕೃತಿಯಗಿದೆ. ಇದರಲ್ಲಿ ಕಾರ್ಮಿಕರು ಬಡವರು, ನಿರ್ಗತಿಕರು ನಿರಾಶ್ರಿತರೆಲ್ಲರೂ ಸಹ ಶ್ರಮಜೀವಿಗಳಾಗಿ ದುಡಿಯುವುದನ್ನು ನೋಡ ಬಹುದು.

ಇಂಥ ಶ್ರಮಿಕರ ಬದುಕಿಗೆ ವಲಸೆ ಒಂದು ಕೊಂಡಿಯಾಗುತ್ತದೆ. ಒಂದು ಕಡೆ ಜೀವನ ನಡೆಸುವುದು ಕಷ್ಟವೆನಿಸಿದಾಗ ಆ ಕುಟುಂಬ ಅಥವಾ ಸಮುದಾಯ, ವ್ಯಕ್ತಿ, ಮತ್ತೊಂದು ಪ್ರದೇಶಕ್ಕೆ ಬಂದು ಕೆಲಸ ಮಾಡುತ್ತಾರೆ. ಇಂಥವರ ಬದುಕಿನ ಸ್ಥಿತಿಗತಿಯನ್ನು ಲೇಖಕರು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಸಿರುವುದನ್ನು ಕಾಣುತ್ತೇವೆ. ಈಗ ಒಂದೊಂದಾಗಿ ಆ ಕೃತಿಗಳನ್ನು ನೋಡುವುದಾದರೆ,

ಬೆನಕನಹಳ್ಳಿ ಜಿ.ನಾಯಕರವರ 'ವಲಸೆ' ಕಾದಂಬರಿಯಲ್ಲಿನ ಲಂಬಾಣಿ ಸಮುದಾಯವೊಂದು ಬರಗಾಲದ ತುತ್ತಿಗೆ ಒಳಗಾಗಿ ಸುಮಾರು ಇನ್ನೂರು ಜನ ತಮ್ಮ ಸಮುದಾಯದ ಮೇಸ್ತ್ರಿ

ಠಾಕುವಿನ ಮಧ್ಯಸ್ಥಿಕೆಯಲ್ಲಿ ನಂಬಿಕೆಯ ಮೇಲೆ ಮಲೆನಾಡಿನ ಕಾಡಿನ ಒಂದರಲ್ಲಿ ದುಡಿಯಲು ಹೋದವರ ಶ್ರಮದಾಯಕ ಬದುಕಿನ ಚಿತ್ರಣ ಈ ಕಾದಂಬರಿ ಕೊಡುತ್ತದೆ. ಲಾರಿಯಲ್ಲಿ ಮಕ್ಕಳು ವಯಸ್ಸಾದವರು ಹೆಣ್ಣುಮಕ್ಕಳು, ಗಂಡುಮಕ್ಕಳೆಲ್ಲರೂ ಹೊರಟಾಗ "ಆ ಫ್ಯಾಕ್ಟರಿ ಎಲ್ಲೈತಿ ಎಂಗೈತಿ, ಅದ್ರಾಗೆ ಏನೇನ್ ಐತಿ".(ಬೆನಕನಹಳ್ಳಿ ಜಿ.ನಾಯಕ, ೧೯೮೩, ಪು.೩೮) ಎಂಬ ಆತಂಕದಿಂದ ಹೊರಡುವ ಜನರಿಗೆ ಫ್ಯಾಕ್ಟರಿಯಲ್ಲಿ ಯಾವ ಕೆಲಸವೆಂಬುದು ಗೊತ್ತಿರದೇ ಯಾವುದೋ ಒಂದು ಬದುಕು ನಿರ್ವಹಿಸಲು ಎಂಬ ಆಲೋಚನೆಯಲ್ಲಿ ಹೊರಡುತ್ತಾರೆ. ಆದರೆ, ಅಲ್ಲಿ ಸಿಕ್ಕಿದ್ದು ದುರ್ವಾಸನೆ ಹೊಡೆಯುವ ಮೂಳೆ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ತಕ್ಕ ಕೂಲಿಯೂ ಸಿಗದೇ ಹಸಿವಿನಿಂದ ಸಾಯುವಂತಾಯಿತು. ಆದರೂ ಅನಿವಾರ್ಯವಾಗಿ ಸಾಹುಕಾರನ ಭಯದಲ್ಲಿ ಇರುವಂತೆ ಮಾಡಿತು. ಕಡಿಮೆ ಸಂಬಳಕ್ಕೆ ಹೆಚ್ಚು ಕೆಲಸ ಮಾಡಿಸಿಕೊಳ್ಳುತ್ತಿದ್ದರು. ಕೊನೆಗೂ ಮಳೆಗಾಲ ಆರಂಭವಾಗಿ ಮತ್ತೇ ತಮ್ಮೂರಿಗೆ ವಾಪಾಸ್ಸಾಗಬೇಕೆಂದಾಗ ಸಾಹುಕಾರನ ಜೀವ ಬೆದರಿಕೆ ಕಾಡುತ್ತಿತ್ತು. ಕೊನೆಗೂ ಸಾಹುಕಾರ ಬಡವರ ಆಕ್ರೋಶಕ್ಕೆ ಬೆಂಕಿಯಲ್ಲಿ ಆಹುತಿಯಾಗುತ್ತಾನೆ. ಆದರೆ, ದಿಕ್ಕು ತೋಚದೆ ಶ್ರಮ ಜೀವಿಗಳಾಗಿ ಬಂದ ಲಂಬಾಣಿಗರ ವಲಸೆ ದುರಂತಕ್ಕೀಡಾಗುತ್ತದೆ.

ಅದೇ ರೀತಿ ಜ್ವಾಲಮುಖಿಯ ಮೇಲೆ ಕಾದಂಬರಿಯು ಒಂದು ಕಾರ್ಮಿಕ ವರ್ಗದವರ ನೋವು, ಸಮಸ್ಯೆಗಳು ಪ್ರತಿಭಟನೆಗಳನ್ನು ಚಿತ್ರಿಸುತ್ತದೆ. ಬೇರೆ ಬೇರೆ ಕಡೆಯಿಂದ ಬೇರೆ ಬೇರೆ ಕಾರಣಗಳಿಗಾಗಿ ಬಂದ ಕುಟುಂಬಗಳು ಕಾರ್ಮಿಕರಾಗಿ ಫ್ಯಾಕ್ಟರಿಯಲ್ಲಿ ಶ್ರಮಜೀವಿಗಳಾಗಿ ದುಡಿಯು ತ್ತಾರೆ. ಈ ಕತೆಯಲ್ಲಿ ಬರುವ ಸೋಮಣ್ಣನ ಕುಟುಂಬ ನಲವತ್ತೇಳರ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಪೋಲೀಸರಿಂದ ತಪ್ಪಿಸಿಕೊಂಡಿದ್ದಕ್ಕಾಗಿ ಅವನ ಹೊಲ ಮನೆ ಎಲ್ಲಾ ಆಸ್ತಿಯನ್ನು ಜಪ್ತಿ ಮಾಡಿದ ಕಾರಣಕ್ಕಾಗಿ ನಿಲ್ಲಲು ನೆಲೆ ಇಲ್ಲದೇ ಹೊಟ್ಟೆಪಾಡಿಗಾಗಿ ಗಿರಣಿಯಲ್ಲಿ ಕೆಲಸ ಮಾಡಲು ಧರ್ಮಪುರಕ್ಕೆ ವಲಸೆ ಬರುತ್ತಾನೆ. ಕಡಿಮೆ ಕೂಲಿಗೆ ಹೆಚ್ಚು ಕೆಲಸ ಮತ್ತು ಹೊಗೆ, ಹೊಲಸಿನಿಂದ ಕೂಡಿದ ಕೆಲಸ ಮಾಡಿ ರೋಗಗಳಿಗೆ ತುತ್ತಾದವರು. ಒಟ್ಟಾರೆ "ಗಿರಣಿಗಳ ನರಕದಲ್ಲಿ ಬೆವರಿಳಿಸುವವರೆಲ್ಲ ಹಳ್ಳಿಗರು ದಟ್ಟ ದರಿದ್ರರು. ತಮ್ಮ ತಮ್ಮ ಊರುಗಳಲ್ಲಿ ಅವರ ಬದುಕು ನಡೆಯುವ ಹಾಗಿದ್ದರೆ ಅವರು ಗುಳೇ ಕಟ್ಟಿಕೊಂಡು ಹೊರಡುತ್ತಿರಲಿಲ್ಲ. ತಮ್ಮ ಊರು ತಮ್ಮ ಮನೆ ತಮ್ಮ ಬಂದು ಬಳಗವನ್ನು ತೊರೆದು ಅಪರಿಚಿತ ನಗರಕ್ಕೆ ಹೊರಟು ಬಿಡುವುದರಲ್ಲಿ ಯಾರಿಗೆ ತಾನೇ ಸುಖವಿದ್ದಿತ್ತು"(ಬಸವರಾಜ ಕಟ್ಟಿಮನಿ, ೨೦೦೬, ಪು.೧೧೫) ಎಂಬ ತಮ್ಮ ಅನಿವಾರ್ಯತೆಯ ಬದುಕನ್ನು, ಶ್ರಮವನ್ನು ತೋಡಿಕೊಳ್ಳುತ್ತಾರೆ.

ಇದಷ್ಟೇ ಗಿರಣಿಯಲ್ಲಿ ಕೆಲಸ ಮಾಡುವವರ ಬದುಕಿನ ಕಠೋರೆಯನ್ನು ಇಲ್ಲಿ ಒಬ್ಬ ಕಾರ್ಮಿಕ ವ್ಯಕ್ತಪಡಿಸುತ್ತಾನೆ. "ಗಿರಣಿಯ ಕೆಲಸ ಅಂದರೆ ಮದುವೆ ಮನೆಯ ಕೆಲಸವಲ್ಲ ಚಂದ್ರಣ್ಣ,

ಅರಳೆಯ ಕಣ ಧೂಳು, ಎಣ್ಣೆಯ ಕಮಟು ವಾಸನೆ ಬೆರೆತ ಅತ್ಯುಷ್ಣವಾದ ಹವೆಯಲ್ಲಿ ಕಿವಿಗಳನ್ನು ಕೊರೆಯುವ ಹಾಗೆ ಕಠೋರ ಸದ್ದು ಮಾಡುತ್ತ ತಿರುಗುವ ಯಂತ್ರಗಳ ಬಳಿ ನಿಂತು ಹತ್ತು ಗಂಟೆಯ ಕಾಲ ಕೆಲಸ ಮಾಡುವ ಮನುಷ್ಯನ ಮೈ ತುಂಬಿಕೊಳ್ಳುವ ಮಾತು ಹಾಗಿರಲಿ ತುಂಬಿರುವ ಮೈಯೇ ತೆರವಾಗುತ್ತದೆ. ನಾನಿನ್ನು ಯುವಕನಾದುದ್ದರಿಂದ ಗಟ್ಟಿಯಾಗಿರಬಹುದುದೇನೋ ಇನ್ನು ಒಂದೆರಡು ವರ್ಷ ಹೀಗೆ ದುಡಿದರೆ ತಿಳಿಯುತ್ತೆ ಈ ಗಟ್ಟಿತನ"(ಅದೇ, ಪು.೧೬೮–೧೬೯) ಎಂಬ ಈ ಮಾತುಗಳು ಕಾರ್ಖಾನೆಗಳಲ್ಲಿ ದುಡಿಯುವ ಬಡಜನರ ಬದುಕಿನ ಬವಣೆ ಮತ್ತು ಶ್ರಮಜೀವಿಗಳ ಬವಣೆ ಇಲ್ಲಿ ಕಾಣುತ್ತದೆ.

ಅದೇ ರೀತಿ ಚದುರಂಗರ 'ಹೆಜ್ಜಾಲ' ಕಾದಂಬರಿಯ ಕಾಲೂರ ಸ್ಯಾವಂತಿ ಊರಿನಲ್ಲಿನ ವೈಷಮ್ಯಕ್ಕೆ ಗುಡಿಸಲು ಸುಟ್ಟು ಹೋದಾಗ ಬೇರೆ ದಾರಿ ಕಾಣದೇ ಎಲ್ಲಾದರೂ ಬದುಕಬೇಕು ಎಂದು ಮಗು ಕಾಲೂರ, ಸ್ಯಾವಂತಿ ಊರು ಬಿಟ್ಟು ಕೆಲಸಕ್ಕಾಗಿ ಅಲೆಯುತ್ತಾರೆ. ನಮ್ಮಂತ ದುಡಿಯೋರಿಗೆ ಯಾವ ಊರಾದ್ರೇನು ಬದುಕೋ ದಾರಿ ಸಿಕ್ಕೇ ಸಿಕ್ಕುತ್ತೆ ಎಂಬ ಭರವಸೆಯೊಂದಿಗೆ ಹೊರಟಿದ್ದರೂ, ಕಾಲೂರನಿಗಿದ್ದದ್ದು ಒಂದೇ ಗುರಿ. ದಾರೀಲಿ ಸಿಕ್ಕೋ ಯಾವುದಾದರೂ ತ್ವಾಟದಲ್ಲಿ ಕೆಲಸಕ್ಕೆ ಸೇರೋದು. ಆದರೆ ದಾರಿಯಲ್ಲಿ ಸಿಕ್ಕೋ ತ್ವಾಟಗಳಲ್ಲಿ ಅವರ ಅವರ ಯಜಮಾನರೇ ಸ್ವಂತ ನೋಡಿಕೊಳ್ಳುತ್ತಿದ್ದರಿಂದ ತ್ವಾಟಾನೇ ಮಾಡ್ಬೇಕು, ಅನ್ನೋ ಹಟ ಬುಟ್ಟು ಯಾವ ಕೆಲ್ಸ ಸಿಕ್ಕಿದ್ರೂ ಸರಿ ಅದ್ನೇ ಮಾಡೋದು ಅಂತ ತೀರ್ಮಾನ ಮಾಡ್ಕೊಂಡು ಬೆಟ್ಟೂರಿನ ಕೂಸಪ್ಪನೋರು ಬೇರಾಯಲೆ ಕೆಲಸಕ್ಕೆ ಹೋಗಿ ಗೌಡತಿಯ ದರ್ಪ ಶೋಷಣೆಗೆ ಒಳಗಾಗಿ ಅಲ್ಲಿಂದ ಹೇಳದೇ ಕೇಳದೆ ಮನೆ ಬಿಟ್ಟು ಹೋಗುತ್ತಾರೆ. ಹೇಗೆ ಅವರ ಮುಂದಿನ ಬದುಕು ಸೆಟ್ಟರ ಅಂಗಡಿ ಮನೆಗಳಲ್ಲಿ ದುಡಿಯುತ್ತ, ನಂತರ ದನಗಳ ಚಾಕರಿ ಮಾಡುತ್ತ, ಕಾಫಿ ತೋಟದಲ್ಲಿ ಕೆಲಸಕ್ಕೆ ಬಂದುದರ ನಂತರ ಒಂದು ಹೊಟ್ಟೆಪಾಡಿಗಾಗಿ ಅಲೆದು, ಕೊಟ್ಟ ಕೆಲಸವನ್ನು ಮಾಡಿ ಹೊಟ್ಟೆ ತುಂಬಿಸಿಕೊಳ್ಳುವ ಕಥನದ ಸಂವೇದನೆಗಳು ಈ ಕಾದಂಬರಿಯಲ್ಲಿ ನೋಡಬಹುದು.

ಹಾಗೆಯೆ ಕೆ.ವಿ.ರಾವ್‌ರವರ ದರಿದ್ರರು ಕಾದಂಬರಿಯಲ್ಲಿ ಬರಗಾಲ, ಬಡತನದಿಂದ ಲಕ್ಷಾಂತರ ಜನ ಹಿಂಡು ಹಿಂಡಾಗಿ ನಗರಗಳಿಗೆ ವಲಸೆ ಬಂದು, "ನಾವೆಲ್ಲಾದರೂ ದುಡಿದುಣ್ಣಬೇಕು ಅದು ಎಲ್ಲಾದರೇನು? ಸಿಕ್ಕಿದರೆ ಕೆಲಸ, ಕೂಲಿ ಇಲ್ಲದೇ ಹೋದರೆ ಇದ್ದೇ ಇದೆಯಲ್ಲ ಬಡವರ ಪಾಲಿಗಿರುವ ಏಕೈಕ ದಾರಿ ಭಿಕ್ಷಾಟನೆ"(ರಾವ್.ಕೆ.ವಿ. ೨೦೦೯, ಪು.೨೫) ಎಂಬ ತೀರ್ಮಾನದಿಂದಲೇ ಹೊರಟು ದೊಡ್ಡ ದೊಡ್ಡ ಅಂತಸ್ತಿನಲ್ಲಿ ಕಟ್ಟಡ ಕಟ್ಟುವ ಕೆಲಸದಲ್ಲಿ ಜೀವ ಬೆದರಿಕೆಯಿಂದ ಕಡಿಮೆ ಕೂಲಿ, ಹೆಚ್ಚು ತಾಸು ಕೆಲಸ ಮಾಡಿ ಬದುಕುವವರ ಬವಣೆ ಇಲ್ಲಿ ಮುಖ್ಯವಾಗಿದೆ. ಇವರಷ್ಟೇ

ಅಲ್ಲದೇ, ಚಾಟಿಯಿಂದ ಮೈ ಹೊಡೆದುಕೊಳ್ಳುವುದು ಸಹ ಇವರು ಬದುಕಲು ದಾರಿಯಾಗಿ ಕಂಡುಕೊಳ್ಳುತ್ತಾರೆ.

ಒಟ್ಟಾರೇಯಾಗಿ ಹೇಳುವುದಾದರೆ ಆದಿಮ ಹಂತದಿಂದ ಆಧುನಿಕ ಹಂತದವರೆಗೂ ಮಾನವ ವಲಸೆಯೊಂದಿಗೆ ಸಾಗಿ ಬಂದ ಸಂಸ್ಕೃತಿ ವಿಕಾಸವನ್ನು ಈ ಕಥನಗಳು ಕಟ್ಟಿಕೊಡುತ್ತವೆ, ಅಲೆಮಾರಿಯಾಗಿ ಕಾಡಿನ ಮಧ್ಯೆ ಬದುಕುತ್ತಿದ್ದ ಮನುಷ್ಯರು ಹೇಗೆ ಹಂತಾನೂ ಹಂತವಾಗಿ ಬೇಟೆ, ಪಶುಪಾಲನೆ, ಕೃಷಿ, ವ್ಯಾಪಾರ, ಶ್ರಮ, ಸಂಸ್ಕೃತಿಯೊಂದಿಗೆ ಬೆಸೆದುಕೊಂಡು ನಾಗರಿಕತೆಯೆಡೆಗೆ ಸಾಗಿ ಬಂದ ದಾರಿಯನ್ನು ಅದರಲ್ಲೂ ಆದಿಮ ಹಂತದಿಂದ ಆಧುನಿಕರಣವರೆಗೂ ಸಾಗಿ ಬರಲು ಮಹಾಮಾರ್ಗವಾದ ವಲಸೆಯೊಂದಿಗಿನ ಸಂಬಂಧವನ್ನು ಈ ಕತೆಗಳು ಸ್ಪಷ್ಟವಾಗಿ ಕಟ್ಟಿಕೊಡುತ್ತವೆ.

ಈ ಹಿನ್ನೆಲೆಯಲ್ಲಿ ಕೆ.ಎನ್.ಗಣೇಶಯ್ಯ ರವರ 'ಶಿಲಾಕುಲವಲಸೆ' ಆದಿಮ ಹಂತದ ವಲಸೆಯ ಹಾದಿಯನ್ನು ಸ್ಪಷ್ಟಪಡಿಸಿದರೆ ಸಾರ್ಥ, ಸ್ವಪ್ನಸಾರಸ್ವತ, ಬೇರಿನಿಂದ ಫಲಕ್ಕೆ ಕಾದಂಬರಿಗಳು ಆದಿಮ ಹಂತದ ನಂತರ ಹುಟ್ಟಿಕೊಂಡ ವ್ಯಾಪಾರಕ್ಕಾಗಿನ ವಲಸೆಯ ಭಿನ್ನಸ್ವರೂಪವನ್ನು ತೆರೆದಿಡುತ್ತದೆ. ಇದರ ಜೊತೆಗೆ ಇಲ್ಲಿ ಬರುವ ಧಾರ್ಮಿಕ, ಶೈಕ್ಷಣಿಕ ಅಂಶಗಳೂ ವಲಸೆಗೆ ಪ್ರೇರಣೆಯಾಗಿ ಸೇರಿಕೊಳ್ಳುತ್ತವೆ.

ಇದಾದ ನಂತರದಲ್ಲಿ ಕೃಷಿ ಸಂಸ್ಕೃತಿಯೊಂದಿಗೆ ಬೆಸೆದು ಬಂದ ವಲಸೆ ಚಿತ್ರಣವನ್ನು ಚಿಗುರಿದ ಕನಸು, ಹೆಜ್ಜಾಲ, ಸ್ವಪ್ನಸಾರಸ್ವತ ಕೃತಿಗಳು ಕಟ್ಟಿಕೊಟ್ಟಿವೆ, ಆಧುನಿಕ ಹಂತದಲ್ಲಿ ಬಂಡವಾಳ ಶಾಹಿಗಳಿಂದ ಆರಂಭವಾದ ಕಾರ್ಖಾನೆಗಳಲ್ಲಿ ಶ್ರಮವರ್ಗ ವಲಸೆ ಬಂದು ಮಾಲಿಕರ ಅಥವಾ ಶ್ರೀಮಂತರ ಶೊಷಣೆಯನ್ನು ಅನುಭವಿಸುತ್ತಾ ದುಡಿಯುವ ಅನಿವಾರ್ಯತೆಗಳನ್ನು ಜ್ವಾಲಾಮುಖಿಯ ಮೇಲೆ, ವಲಸೆ ಕಾದಂಬರಿಗಳು ಚಿತ್ರಿಸುತ್ತವೆ. ಹೀಗೆ ಸಾಗಿ ಬಂದ ಮಾನವನ ವಲಸೆಯೊಂದಿಗಿನ ಸಂಸ್ಕೃತಿ ವಿಕಾಸದಲ್ಲಿ ವಲಸೆ ಪ್ರಮುಖ ಪಾತ್ರ ವಹಿಸುತ್ತದೆ.

ಅಧ್ಯಾಯ ಏಂಟು

# ಸಮಾರೋಪ
# ಸಾಂಸ್ಕೃತಿಕ ಸಂಕಥನವಾಗಿ ವಲಸೆ

ಸಮಾಜ, ಸಾಹಿತ್ಯಗಳೆರೆಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಾಹಿತ್ಯ ಸಮಾಜದ ಪ್ರತಿಬಿಂಬವಾಗಿ ಕೆಲಸ ಮಾಡುತ್ತದೆ. ಕಾಲಕಾಲಕ್ಕೆ ಬದಲಾಗುವ ಸಮಾಜದ ಸ್ಥಿತಿಗತಿಯನ್ನು ಸಾಹಿತ್ಯದಲ್ಲಿ ಲೇಖಕರು ಅಭಿವ್ಯಕ್ತಿಸುವ ಮೂಲಕ ಸಮಾಜದ ಘಟನೆಗಳನ್ನು ಸಾಹಿತ್ಯಕ್ಕೆ ವಸ್ತುವಾಗಿರಿಸಿಕೊಳ್ಳುತ್ತಾರೆ. ಹಾಗಾಗಿ ಸಮಾಜ, ಸಾಹಿತ್ಯಕ್ಕೆ ಬಿಡಿಸಲಾರದ ಬಾಂಧವ್ಯ. ಅದೇ ರೀತಿ ಸಮಾಜ ಸಂಸ್ಕೃತಿಯ ಭಾಗ. ಸಮಾಜ, ಸಂಸ್ಕೃತಿ, ಸಾಹಿತ್ಯ ಈ ಮೂರೂ ಈ ನಿಟ್ಟಿನಲ್ಲಿ ಒಂದಕ್ಕೊಂದು ಹೊಂದಿಕೊಂಡಿವೆ. ಮಾನವನ ಆಚಾರ, ವಿಚಾರ, ಸಂಪ್ರದಾಯವೆಂಬ ಹಲವು ಸಾಂಸ್ಕೃತಿಕ ವಿಚಾರಗಳನ್ನು ಸಾಹಿತ್ಯ ತನ್ನದೇ ಆದ ಸಂವೇದನ ರೂಪದಲ್ಲಿ ಕಟ್ಟಿಕೊಡುತ್ತದೆ. ಮತ್ತು ಈ ಮೂಲಕ ಒಂದು ಸಮುದಾಯದ ಸಮಗ್ರ ಬದುಕಿನ ಚಿತ್ರಣವನ್ನು ಅಗತ್ಯ ಅನಿವಾರ್ಯತೆಗಳನ್ನು, ಬೇಕು ಬೇಡಿಕೆಗಳನ್ನು ಓದುಗರ ಮನ ಮುಟ್ಟುವಂತೆ ಚಿತ್ರಿಸುತ್ತದೆ.

ಈ ಮೂಲಕ ಸಮಾಜದ ಸಮಸ್ಯೆಗಳನ್ನು ಪ್ರಸ್ತುತ ಅನಿವಾರ್ಯತೆಗಳನ್ನು ಸರ್ಕಾರಕ್ಕೆ ತಲುಪಿಸುವ ಕೆಲಸ ಮಾಡುತ್ತದೆ ಮತ್ತು ಒತ್ತಾಯಿಸುತ್ತದೆ. ಇದಷ್ಟೆ ಅಲ್ಲದೇ ಮಾನವರ ಒಳಿತು ಕೆಡುಕುಗಳನ್ನು ಮಾನವೀಯ ಮೌಲ್ಯಗಳನ್ನು ಬಿತ್ತರಿಸುವ ಮೂಲಕ ಸಮಾಜದ ಗತಿಬಿಂಬವಾಗಿ ಕೆಲಸ ಮಾಡುತ್ತದೆ. ಹಾಗಾಗಿ ಸಾಹಿತ್ಯ ಸಮಾಜದಲ್ಲಿನ ಘಟನೆಗಳನ್ನು ಮಾತ್ರ ಹೇಳದೇ, ಮನುಷ್ಯರ ಹಲವು ನಡವಳಿಕೆಯನ್ನು ತಿದ್ದುವ ರೂಪದಲ್ಲಿ ಸಹ ಚಿತ್ರಿತವಾಗುತ್ತದೆ. ಹಾಗಾಗಿ ಸಾಹಿತ್ಯ, ಸಮಾಜ, ಸಂಸ್ಕೃತಿ ಈ ಮೂರು ಒಂದನ್ನು ಬಿಟ್ಟು ಒಂದು ಇರಲಾರವು. ಸಮಾಜ ಸಂಸ್ಕೃತಿಯ ಭಾಗವೂ ಸಹ ಹೌದು ಅದೇ ರೀತಿ ಏಕಕಾಲಕ್ಕೆ ಸಾಹಿತ್ಯವೂ ಸಹ ಸಮಾಜದ ಒಂದು ಭಾಗವೂ ಹೌದು ಹಾಗಾಗಿ ಸಾಹಿತ್ಯ ಏಕಕಾಲಕ್ಕೆ ಸಂಸ್ಕೃತಿಯ ಭಾಗವಾಗಿ ಹಾಗೂ ಸಮಾಜದ ಪ್ರತಿಬಿಂಬವಾಗಿ ತನ್ನನ್ನು ನಿಭಾಯಿಸಿಕೊಂಡಿದೆ, ಇದು ಸಾಹಿತ್ಯಕ್ಕಿರುವ ಹೆಚ್ಚುಗಾರಿಕೆಯನ್ನು ತಿಳಿಸಿಕೊಡುತ್ತದೆ.

ಹಾಗೆಯೆ ಸಾಹಿತ್ಯ ರಚನೆಯಲ್ಲಿ ಲೇಖಕರಿಗೆ ಕಾಲದ ಬದ್ದತೆ ಇಲ್ಲ ಪ್ರಾಚೀನ ಕಾಲದ ಒಳಿತು ಕೆಡುಕುಗಳನ್ನು ನಿಧಾನಗತಿಯಲ್ಲಿ ಬದಲಾಗುತ್ತಾ ಬರುವ ಸಾಂಸ್ಕೃತಿಕ ಅಂಶಗಳನ್ನು ಚಿತ್ರಿಸುತ್ತದೆ. ಉದಾ;- ಹಿಂದಿನ ಕಾಲದ ಚಾರಿತ್ರಿಕ ಘಟನೆಗಳನ್ನು ಸಾಂಸ್ಕೃತಿಕ ಸನ್ನಿವೇಶಗಳನ್ನು ಸಮುದಾಯಗಳ ಬದುಕಿನ ವಿಶೇಷತೆಯನ್ನು ಇಂದಿನ ಕಾಲ ಘಟ್ಟದಲ್ಲಿ ಲೇಖಕರು ಅಭಿವ್ಯಕ್ತಿಸುವ ಮೂಲಕ ಕಂಡು ಕೇಳಿರದ ಹಲವಾರು ವಿಷಯಗಳನ್ನು ಪ್ರಸ್ತುತ ಜನಾಂಗಕ್ಕೆ ತಿಳಿಸಿಕೊಡುತ್ತಾರೆ. ಹಾಗಾಗಿ ಚರಿತ್ರೆ ಅಷ್ಟೇ ಅಲ್ಲದೇ ಸಾಮಾಜಿಕ, ಅರ್ಥಶಾಸ್ತ್ರ, ರಾಜಕೀಯ, ಜಾನಪದೀಯದಂತಹ ಹಲವು ಜ್ಞಾನಶಿಸ್ತುಗಳನ್ನು ಅನುಸಂಧಾನ ಮಾಡಿಕೊಂಡು ಹಲವು ಸಾಂಸ್ಕೃತಿಕ ವಿಷಯಗಳನ್ನು ಸಾಹಿತ್ಯದ ಮೂಲಕ ಕಟ್ಟಿ ಕೊಡುತ್ತಾರೆ.

ಹೀಗಾಗಿ ಸಾಹಿತ್ಯ ಏಕಕಾಲಕ್ಕೆ ಸಂಸ್ಕೃತಿಯ ಭಾಗವಾಗಿ ಹಾಗೂ ಸಮಾಜದ ಪ್ರತಿಬಿಂಬವಾಗಿ ತನ್ನನ್ನು ನಿಭಾಯಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಸಮಾಜದ ಭಾಗವಾದಂತೆ ವಲಸೆ ಸಮಾಜದ ಭಾಗವೂ ಸಹ ಹೌದು ಮಾನವರ ವಿಕಾಸದಿಂದಿಡಿದು ಇಂದಿನವರೆಗೂ ನಾನಾ ಕಾರಣಗಳಿಗಾಗಿ ಅಗತ್ಯ ಅನಿವಾರ್ಯಗಳಿಗಾಗಿ ಮಾನವರ ಜೀವಿತದ ಅವಧಿಯಲ್ಲಿ ಒಂದೊಂದು ಹಂತದಲ್ಲಿ ಸಾಗಿ ಬಂದಿದೆ. ಮೊದಲು ಬೇಟೆಗಾಗಿ ನಂತರ ಆಕ್ರಮಣ, ಬರಗಾಲ, ಬಡತನ, ನಗರೀಕರಣ, ಜಾಗತೀಕರಣದಂತಹ ಹಲವೂ ಕಾರಣಗಳಿಗಾಗಿ ಹಂತಾನೂ ಹಂತವಾಗಿ ಸಾಗಿ ಬಂದು, ಇಂದು ಅಭಿವೃದ್ಧಿ ಪರ ರಾಷ್ಟ್ರದ ನಿರ್ಮಾಣಕ್ಕಾಗಿಯೂ ಸಹ ವಲಸೆ ನಡೆಯುತ್ತಲೇ ಬಂದಿದೆ. ಹೀಗೆ ಆದಿಮ ಹಂತದಿಂದ ಕಾಡಿನಲ್ಲಿ ಬದುಕುತ್ತಿದ್ದ ಮನುಷ್ಯರು ಹಂತಾನೂ ಹಂತವಾಗಿ ಸಾಗುತ್ತಾ ದೊಡ್ಡ ದೊಡ್ಡ ನಗರಗಳಲ್ಲಿ ಬಂದು ಬದುಕುವಂತಾಗಿದೆ. ಈ ದೀರ್ಘ ಚಲನೆಯಲ್ಲಿನ ಹಲವು ಅನುಭವಗಳು ಭಿನ್ನ ಆಯಾಮಗಳು ಭಿನ್ನ ಸಂಸ್ಕೃತಿಯ ವಿಚಾರಗಳೆಲ್ಲವೂ ವಿಶಿಷ್ಟವಾಗಿವೆ ಮನುಷ್ಯರ ಬದುಕಿನಲ್ಲಿ ಕೆಲವು ಕಡೆ ಹೊಂದಾಣಿಕೆ ಮಾಡಿಕೊಂಡು ಇನ್ನು ಕೆಲವು ಕಡೆ ಬದಲಾಯಿಸಿಕೊಂಡು ಮತ್ತೊಂದು ಕಡೆ ತನ್ನ ಸಂಸ್ಕೃತಿಯನ್ನು ಉಳಿಸಿಕೊಂಡು ಪರದಾಡುವ ಪರಿಸ್ಥಿತಿ ಗಮನೀಯ ಅಂಶವಾಗಿದೆ.

ಈ ಹಿನ್ನೆಲೆಯಲ್ಲಿ ವಲಸೆ ಸಮಾಜದ ಭಾಗವಾದರೂ ಸಾಂಸ್ಕೃತಿಕ ಅಂಶವಾಗಿ ಹೆಚ್ಚು ಚರ್ಚೆಗೊಳಪಟ್ಟರೂ ಕೂಡ ತನ್ನ ಮೂಲ ಗುಣವನ್ನೇ ಪ್ರತಿನಿಧಿಕರಿಸುವುದು ಸಾಧ್ಯವಾಗಿಲ್ಲ ಕಾರಣ, ವಲಸೆ ಕಾರಣ ಪರಿಣಾಮಗಳ ಒಟ್ಟು ಮೊತ್ತವಲ್ಲ. ಇದು ಪ್ರಕ್ರಿಯಾತ್ಮಕ ಸ್ವರೂಪದ ನಿರಂತರ ಚಲನೆ ಹಾಗಾಗಿಯೇ ಇತರ ಸಾಂಸ್ಕೃತಿಕ ಅಂಶಗಳಿಗಿಂತ ಪಾತ್ರಗಳ ಮೂಲಕ ಸಾಕ್ಷೀಕರಿಸುವ ಸಾಹಿತ್ಯ ವಿಭಿನ್ನವಾಗಿ ನಿಂತುಕೊಳ್ಳುತ್ತದೆ. ಅಷ್ಟೇ ಅಲ್ಲದೆ ವಲಸೆ ಚಲನಾತ್ಮಕ ಧ್ವನಿಯ ಪ್ರತೀಕ ಈ ಅಂಶವನ್ನು ಸಾಹಿತ್ಯ ತನ್ನ ಸಂವೇದನೆಗಳ ಮೂಲಕ ಅದರ ಚಲನಶೀಲ/

ಕಣ್ಣಿಗೆ ಕಟ್ಟುವ ಭಾವಗಳ ಮೂಲಕ ಸೂಚಿಸುತ್ತದೆ. ಪ್ರೇರಣೆ, ಪ್ರಕ್ರಿಯೆ, ಪರಿಣಾಮಗಳ ಮೂಲಕ ಗತಿಯನ್ನು, ದೀರ್ಘವಾಗಿ ಸವಿಸ್ತಾರವಾಗಿ ವಿವರಿಸುತ್ತದೆ. ಜೊತೆಗೆ ಅನ್ಯಜ್ಞಾನ ಶಿಸ್ತುಗಳಾದ ಸಮುದಾಯ, ಆರ್ಥಿಕತೆ, ಸಾಮಾಜಿಕತೆ, ಚಾರಿತ್ರಿಕ ಇತ್ಯಾದಿ ಅಂಶಗಳೊಂದಿಗೆ ವಲಸೆಯ ನಡಿಗೆಯನ್ನು ವರ್ಣಿಸುವುದು ಕಥನಕಾರರ ವಿಶೇಷ ಆಸಕ್ತಿ. ಹಾಗಾಗಿಯೇ ಸಾಹಿತ್ಯ ಸಂವೇದನೆ (ಚಲನಾತ್ಮಕ ಅಭಿವ್ಯಕ್ತಿ) ಹಾಗೂ ಇತರ ಜ್ಞಾನಶಿಸ್ತುಗಳೊಂದಿನ ತಾದಾತ್ಮ್ಯ (ಅನುಸಂಧಾನ) ಇವೆರಡರಿಂದಾಗಿ ತನ್ನನು ತಾನು ವಿಭಿನ್ನವಾಗಿ ಗುರುತಿಸಿಕೊಳ್ಳುತ್ತದೆ ಸಾಹಿತ್ಯದ ಅಭಿವ್ಯಕ್ತಿ ಜೀವಂತಿಕೆಯ ಅಭಿವ್ಯಕ್ತಿ ಇತರ ಜ್ಞಾನ ಶಿಸ್ತುಗಳಂತೆ ತಟಸ್ಥ ವರದಿಯಲ್ಲ. ಹಾಗಾಗಿಯೇ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ತನ್ನಲ್ಲಿ ಗರ್ಭಿಕರಿಸಿಕೊಳ್ಳುವ ಸಾಹಿತ್ಯಕ್ಕೆ ಹೆಚ್ಚುಗಾರಿಕೆ ಇದೆ. ಅಲ್ಲಲ್ಲಿ ಕಲ್ಪನೆಯ ಜೊತೆಗೆ ವಾಸ್ತವಿಕತೆ ಸೇರಿ ಇದೊಂದು ವರದಿಯನ್ನು ಒಳಗೊಂಡರೆ ಅಚ್ಚರಿಯಿಲ್ಲ. ಪರಂಪರೆಯನ್ನು ವುದು ನಿಂತ ನೀರಲ್ಲ ಅದು ಪ್ರವಾಹ. ಹಾಗಾಗಿಯೇ ಪರಂಪರೆಯ ಅನೇಕ ಅಂಶಗಳನ್ನು ಒಳಗೊಂಡಿದೆ. ಇಷ್ಟೆಲ್ಲ ಇರುವಲ್ಲಿಯು ವಲಸೆ ಸಂಸ್ಕೃತಿಗೆ ಪೂರಕ/ಮಾರಕ ಇತ್ಯಾದಿ ಪ್ರಶ್ನೆಗಳಿವೆ. ಈ ವಾಗ್ವಾದಗಳನ್ನು ಬೆಳೆಸುತ್ತಲೇ ಲೇಖಕರು ಏಕಕಾಲಕ್ಕೆ ಡಾಲರ್ ಸೊಸೆಯಂತಹ ಜಾಗತೀಕರಣ ವಿಷಯವನ್ನು, ಶಿಲಾಕುಲ ವಲಸೆಯ ಮೂಲಕ ಆದಿಮ ಹಂತವನ್ನು ಪ್ರಸ್ತಾಪಿಸುವಾಗ ವಲಸೆಯ ನೆಲೆ ಬೆಲೆಗಳು ಅನಾವರಣಗೊಳ್ಳುತ್ತವೆ. ಒಟ್ಟಾರೆ ಸಂಸ್ಕೃತಿಯ ಜೊತೆಗೆ ವಾಗ್ವಾದ ಮಾಡುವ ವಲಸೆ ಸಂಸ್ಕೃತಿಯ ಸಂಕಥನವೇ ಆಗಿ ರೂಪಗೊಳ್ಳುವುದನ್ನು ನೋಡಬಹುದಾಗಿದೆ.

ಕೆ.ಎನ್. ಗಣೇಶಯ್ಯ ಅವರು ಶಿಲಾಕುಲ ವಲಸೆ ಕಾದಂಬರಿಯಲ್ಲಿ ಆರ್ಯ ದ್ರಾವಿಡ ಚರ್ಚೆಯನ್ನು ಮುಂದಿಡುತ್ತಾರೆ ಆರ್ಯ– ದ್ರಾವಿಡ ಎಂಬ ಎರಡು ಸಮುದಾಯಗಳ ಘರ್ಷಣೆಗಳೇ ದ್ರಾವಿಡರ ವಲಸೆಗೆ ಕಾರಣವಾಯಿತು ಎಂಬ ಚರ್ಚೆ ಕಾದಂಬರಿ ಕೊಡುತ್ತದೆ. ಆದಿಮ ಹಂತವನ್ನು ವಿಸ್ತಾರವಾಗಿ ಚರ್ಚಿಸುತ್ತಲೇ ಆರ್ಯರ ವಲಸೆ ಭಾರತದಿಂದ ಯೂರೋಪ್ ಕಡೆಗೆ ಆಗಿರಬಹುದಲ್ಲ ಎಂಬ ಕುತೂಹಲ ಅಂಶವನ್ನು ಬಿಚ್ಚಿಡುತ್ತಲೇ ವಲಸೆಗೂ ಚರಿತ್ರೆಗೂ ಇರುವ ಅನುಸಂಧಾನವನ್ನು ಸ್ಪಷ್ಟಿಕರಿಸುತ್ತಾರೆ. ಮತ್ತು ಆರ್ಯ ದ್ರಾವಿಡ ವಲಸೆ ಕುರಿತಾಗಿ ಚಾರಿತ್ರಿಕ ಅಂಶವನ್ನು ಹೊಸ ದೃಷ್ಠಿಕೋನದೊಡನೆ ಮಂಡಿಸುತ್ತಾರೆ. ಅಂದರೆ ಈ ಕಾದಂಬರಿಯಲ್ಲಿ ಆರ್ಯ ದ್ರಾವಿಡ ಚರ್ಚೆಗೂ ವಲಸೆಗೂ ಸಂಬಂಧವಿದೆ. ಕಾರಣ ಚರಿತ್ರೆ ಆರಂಭವಾಗುವುದೇ ಆರ್ಯರ ಆಗಮನದಿಂದ ಇದಕ್ಕೆ ಸಾಕಷ್ಟು ವಾದ ವಿವಾದಗಳಿದ್ದರೂ ಚರಿತ್ರೆ ಹೇಳಿಕೊಟ್ಟಿರುವುದು ಇದನ್ನೇ. ಇಂತಹ ವಿಷಯವೊಂದನ್ನು ಆಧುನಿಕ ತಂತ್ರಗಾರಿಕೆಯನ್ನು ಬಳಿಸಿಕೊಳ್ಳುತ್ತಲೇ ಆರ್ಯರು ಮೂಲ ನಿವಾಸಿಗರಾಗಿದ್ದು ಯಾಕೆ ವಲಸೆ ಹೋಗಿರಬಾರದು ಎಂಬ ಅಂಶವನ್ನು ತನ್ನೆಲ್ಲಾ ತರ್ಕಗಳೊಡನೆ ಸಾಹಿತ್ಯ ಮಂಡಿಸುತ್ತಾರೆ. ಇದೊಂದು ಆದಿಮ ಸ್ಥಿತಿಯ ವಲಸೆಯಾದರೂ ಆಧುನಿಕ ತಂತ್ರಜ್ಞಾನದ

ಸ್ಪರ್ಶದೊಂದಿಗೆ ಬೇರೊಂದು ರೀತಿಯಲ್ಲಿ ವಾದ ಹೂಡುತ್ತದೆ. ಅದೇ ರೀತಿ ಸಾರ್ಥ ಕಾದಂಬರಿಯಲ್ಲಿ ಸಾರ್ಥ ಕಾರಣಕ್ಕಾಗಿಯೇ ಸಂಭವಿಸುವ ವಲಸೆ ಚಾರಿತ್ರಿಕ ಸಂದರ್ಭ/ ವ್ಯಾಪಾರದ ಸ್ಥಿತಿಗತಿಗಳನ್ನು ರಾಜಕೀಯ ತಂತ್ರಗಳನ್ನು ಚಿತ್ರಿಸುತ್ತದೆ.

ಹಾಗೆಯೆ ಬೇರಿಂದ ಫಲಕ್ಕೆ ಕಾದಂಬರಿಯಲ್ಲಿ ದಾಳಿ/ಆಕ್ರಮಣ ಮತ್ತು ರಾಜಕೀಯ ಪ್ರಕ್ಷುಬ್ಧತೆಯಂತಹ ಸನ್ನಿವೇಶಗಳು ವಲಸೆಗೆ ಕಾರಣವಾಗುವುದನ್ನು ಲೇಖಕರು ಅಭಿವ್ಯಕ್ತಿಸುತ್ತಾರೆ. ಸ್ವಪ್ನ ಸಾರಸ್ವತ ಕಾದಂಬರಿಯಲ್ಲಿ ಗೋಪಾಲಕೃಷ್ಣ ಪೈ ರವರು ಚಾರಿತ್ರಿಕ ಸಂದರ್ಭದಲ್ಲಿ ರಾಜಕೀಯ ಸ್ಥಿತ್ಯಂತರಗಳು ಜನಸಾಮಾನ್ಯರ ಬದುಕಿನ ಮೇಲೆ ಬೀರಿದ ಪರಿಣಾಮವನ್ನು ಮತ್ತು ಅಂದಿನ ಸಾರಸ್ವತ ಬ್ರಾಹ್ಮಣರ ವಲಸೆಗೆ ರಾಜಕೀಯ ಒತ್ತಡಗಳು, ಪೋರ್ಚುಗೀಸರ ದಬ್ಬಾಳಿಕೆ ಎಷ್ಟರಮಟ್ಟಿಗೆ ಕಾರಣವಾಗುತ್ತದೆ ಮತ್ತು ಯಾಕೆ? ಎಂಬ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಹಾಗೆಯೆ ೧೯೪೭ ರ ಸ್ವತಂತ್ರ್ಯ ಚಳುವಳಿಯಿಂದ ಉಂಟಾದ ಆಕ್ರಮಣ ದಬ್ಬಾಳಿಕೆಗಳು ವಲಸೆಗೆ ಹೇಗೆ ಕಾರಣವಾಯಿತು ಎಂಬುದನ್ನು ಹಳ್ಳ ಬಂತು ಹಳ್ಳ, ವಲಸೆ ಹಕ್ಕಿಯ ಹಾಡು ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಜೊತೆಗೆ ಅಲ್ಲಿದ್ದ ರಾಜಕೀಯ ಸ್ಥಿತ್ಯಂತರಗಳು ಜನಸಾಮಾನ್ಯರ ಬದುಕಿನಲ್ಲಿ ಉಂಟು ಮಾಡಿದ ಪರಿಣಾಮವನ್ನು ಇಲ್ಲಿ ವ್ಯಕ್ತಪಡಿಸುತ್ತಾರೆ. ಹೀಗೆ ಚಾರಿತ್ರಿಕ ಘಟನೆಗಳನ್ನು ಪ್ರಮುಖವಾಗಿ ಆಧರಿಸಿದ ಕಾದಂಬರಿಗಳಾದ ಶಿಲಾಕುಲ ವಲಸೆ, ಸ್ವಪ್ನ ಸಾರಸ್ವತ, ಬೇರಿಂದ ಫಲಕ್ಕೆ, ಹಳ್ಳ ಬಂತು ಹಳ್ಳ, ವಲಸೆ, ಹಕ್ಕಿಯ ಹಾಡು ಸಾರ್ಥದಂತಹ ಕಾದಂಬರಿಗಳು ಆಕ್ರಮಣ, ದಾಳಿ, ರಾಜಕೀಯ ಪಲ್ಲಟ, ಹಾಗೂ ಸ್ವಾತಂತ್ರ್ಯ ಚಳುವಳಿಯ ಅಂಶಗಳು ವಲಸೆಗೆ ಹೇಗೆ ಕಾರಣವಾಗುತ್ತವೆ ಮತ್ತು ಯಾಕೆ? ಎಂಬ ಕುತೂಹಲಕಾರಿ ಅಂಶಗಳನ್ನು ಲೇಖಕರು ಅಭಿವ್ಯಕ್ತಿಸುತ್ತಾರೆ.

ಸಾಮುದಾಯಿಕವಾಗಿ ನೋಡುವುದಾದರೆ ಬಹುಶಃ ಸಮುದಾಯವೊಂದು ಘಳಿಗೆ-ಘಳಿಗೆಗೂ ಅನುಭವಿಸಿದ ನೋವು ಸಂಕಟವನ್ನು ಚರಿತ್ರೆಯ ಪುಸ್ತಕಗಳು ದಾಖಲಿಸಲಾರವು ಲೇಖಕರು ಸಮುದಾಯದ ಸಂವೇದನೆಯ ಪ್ರತೀಕವಾಗುವ ಮೂಲಕ ಸಮುದಾಯದ ಸಾಕಷ್ಟು ಒಳನೋಟಗಳನ್ನು ಒದಗಿಸುತ್ತಾರೆ. ಆ ಪ್ರತಿಯೊಂದನ್ನು ದಾಖಲೆ ಸಮೇತ ಇಲ್ಲವೇ ಅಂಕಿ ಅಂಶಗಳ ಮೂಲಕ ಮಂಡಿಸುವ ವರದಿಗಿಂತ ಪರಂಪರೆಯ ಅನೇಕ ಒಳಸುಳಿಗಳನ್ನು ಬಲ್ಲ ಮೌಖಿಕ ವಿವರಗಳು ಹಾಗೂ ಸಮಕಾಲೀನರಿಂದ ಘಟನಾವಳಿಗಳನ್ನು ಪಡೆದುಕೊಂಡು ತನ್ನ ವಾಸ್ತವತೆಯ ಅರಿವಿನೊಂದಿಗೆ ಕವಿ/ಲೇಖಕ ಕೊಡುವ ಈ ವಿವರಗಳು ಗ್ರಾಹ್ಯವಲ್ಲವೇ! ಹೀಗೆ ಸಾಮುದಾಯಿಕ ವಲಸೆ ಕುರಿತ ಕಾದಂಬರಿಗಳಲ್ಲಿ 'ವಲಸ', 'ಶಿಲಾಕುಲ ವಲಸ', 'ಸ್ವಪ್ನ ಸಾರಸ್ವತ' ದಂಥಹ ಕಾದಂಬರಿಗಳು ಸಮುದಾಯಗಳ ವಲಸೆ ಹಿಂದಿನಿಂದ ಹೇಗೆ ಮತ್ತು ಯಾತಕ್ಕಾಗಿ ನಡೆಯುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಹಾಗೆಯೆ ಸಮುದಾಯ ವಲಸೆಯಲ್ಲಿನ ಒಗ್ಗಟ್ಟು,

ಮಾನವೀಯತೆ, ಕಾಳಜಿ, ನಂಬಿಕೆ, ಪ್ರೀತಿ, ವಿಶ್ವಾಸಗಳನ್ನು ತೆರೆದಿಡುತ್ತದೆ. ಆದರೆ, ಇದಕ್ಕೆ ಅಪವಾದವೆಂಬಂತೆ ವಲಸೆ ಕಾದಂಬರಿಯಲ್ಲಿ ಬರುವ ಠಾಕುವಿನ ಪಾತ್ರ ಹಣದ ಮೋಹಕ್ಕಾಗಿ ತಮ್ಮ ಸಮುದಾಯದವರನ್ನು ಶೋಷಣೆಗೆ ತಳ್ಳುವ ಸ್ಥಿತಿಯು ಸಹ ಕಾದಂಬರಿ ತಿಳಿಸುತ್ತದೆ. ಅದಕ್ಕೂ ಮುಖ್ಯವಾಗಿ ಲಂಬಾಣಿ ಸಮುದಾಯದವರ ಸಾಂಸ್ಕೃತಿಕ ಬದುಕು ಇಲ್ಲಿ ಪ್ರಮುಖವಾಗುತ್ತದೆ.

ಹೀಗೆ ಸಮುದಾಯಗಳ ವಲಸೆ ಮತ್ತು ಸಮುದಾಯಗಳ ಬದುಕಿನ ನಡುವೆ ನಡೆಯುವ ಸ್ಥಿತ್ಯಂತರಗಳನ್ನು ಈ ಕಾದಂಬರಿಗಳು ಕಟ್ಟಿಕೊಡುತ್ತದೆ. ಈ ಸಮುದಾಯಗಳಿಗೆ ಸಾರಸ್ವತ ಬ್ರಾಹ್ಮಣ ಸಮುದಾಯದವರ ವಲಸೆಗೆ ಪೋರ್ಚುಗೀಸರ ಆಕ್ರಮಣ ಕಾರಣವಾದರೆ ಲಂಬಾಣಿಗರ ವಲಸೆಗೆ ಬಡತನ, ಬರಗಾಲ ಕಾರಣವಾಗುತ್ತದೆ. ದ್ರಾವಿಡರ ವಲಸೆಗೆ ಆಕ್ರಮಣಗಳು ಕಾರಣವಾಗುತ್ತವೆ ಈ ಮೂರು ಸಮುದಾಯದವರ ಸಂಸ್ಕೃತಿ, ಬದುಕಿನ ಶೈಲಿ, ಎಲ್ಲವೂ ಭಿನ್ನವಾಗಿವೆ.

ಇನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ನೋಡುವುದಾದರೆ ಸಾಹಿತ್ಯ ಸಮಾಜದ ಪ್ರತಿಬಿಂಬವಾಗಿಯೆಷ್ಟೇ ಅಲ್ಲದೇ ಗತಿಬಿಂಬವಾಗಿಯೂ ಸಹ ಕೆಲಸ ಮಾಡುತ್ತದೆ. ಎಂಬುದಕ್ಕೆ ಸಾಮಾಜಿಕ ಅನಿಷ್ಟ ಪದ್ದತಿಗಳಾದ ಸತಿ ಸಹಗಮನ ಪದ್ದತಿ, ಮೂಢನಂಬಿಕೆ, ಗುಳೆ ಆಚರಣೆ, ಶೋಷಣೆಯಂತಹ ಹಲವು ಅಂಶಗಳು ಕತೆಯಲ್ಲಿ ವ್ಯಕ್ತವಾಗುತ್ತವೆ. ಬೇರಿಂದ ಫಲಕ್ಕೆ ಕಾದಂಬರಿಯಲ್ಲಿ ಕ್ರಿ.ಶ. ೧೬ ನೇ ಶತಮಾನದಲ್ಲಿದ್ದಂತಹ ಸತಿ ಸಹಗಮನ ಪದ್ದತಿಯಿಂದ ಉಂಟಾಗುತ್ತಿದ್ದಂತಹ ಮಹಿಳೆಯರ ಮೇಲಿನ ಶೋಷಣೆ, ಬ್ರಿಟಿಷ್, ಮುಸ್ಲಿಮರ ಆಕ್ರಮಣದಿಂದ ಜನಸಾಮಾನ್ಯರ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಹಬ್ಬ–ಹರಿದಿನಗಳೆಂಬ ಸಂಪ್ರಾದಾಯಗಳನ್ನು ಆಚರಿಸದೇ ಹೋದರೆ ದೇವರು ಮುನಿಸಿಕೊಳ್ಳುತ್ತಾನೆಂಬ ಮೂಢನಂಬಿಕೆಯಿಂದ ಬಡತನದಲ್ಲೂ ಸಾಲ ಮಾಡಿ ಆಚರಿಸುವ ಲಂಬಾಣಿಗರ ಮನೋಸ್ಥಿತಿಯನ್ನು ಹೇಳುತ್ತದೆ. ಅದೇ ರೀತಿ ಗೀತಾನಾಗಭೂಷಣರವರ ಭೂಮಿ ಮತ್ತು ಬೀಜ, ನಿತ್ಯ ನರಳುವ ಮಂದಿ ಹಾಗೂ ದೇವನೂರು ಮಹಾದೇವರವರ ಮಾರಿಕೊಂಡವರು, ಕತೆಗಳಲ್ಲಿ ಪ್ರಾಕೃತಿಕ ವೈಪರೀತ್ಯ, ಬಡತನ, ಬರಗಾಲದಿಂದ ಬಡ ಜನರು ಹೊಟ್ಟೆ ಪಾಡಿಗಾಗಿ ವಲಸೆ ಬಂದಾಗ ಸಹಾಯ ಮಾಡುವ ನೆಪದಲ್ಲಿ ಊರಿ ಶ್ರೀಮಂತರು ಮಹಿಳೆಯರನ್ನು ಲೈಂಗಿಕತೆಗೆ ಬಳಸಿಕೊಳ್ಳುವ ಸ್ಥಿತಿ ಮತ್ತು ಬಡವರ ಅಸಹಾಯಕತೆಯನ್ನು ಸಂವೇದನೆ ಮೂಲಕ ಚಿತ್ರಿಸುವ ಬಗೆ ಹಾಗೆಯೇ ದರಿದ್ರರು ಕಾದಂಬರಿಯಲ್ಲಿ ಬರಗಾಲ, ಬಡತನ, ಹಸಿವು, ನಿರುದ್ಯೋಗದಂತಹ ಸಾಮಾಜಿಕ ಅಥವಾ ಮೂಲಭೂತ ಸಮಸ್ಯೆಗಳಿಂದ ಹಳ್ಳಿಯಿಂದ ನಗರಕ್ಕೆ ವಲಸೆ ಬಂದು ಕಳ್ಳತನ, ಕೊಲೆ, ಸುಲಿಗೆ ಎಂಬ ಅನೇಕ ದುರ್ಮಾಗಗಳಿಗೆ ಬಲಿಯಾಗುವ ಕುಟುಂಬಗಳ ವ್ಯಥೆ ಇಲ್ಲಿದೆ.

ಒಟ್ಟಾರೆ ಬಡತನ, ಹಸಿವು, ನಿರುದ್ಯೋಗ, ಬರಗಾಲ, ಪ್ರಾಕೃತಿಕ ವೈಪರೀತ್ಯ, ಅನಿಷ್ಟ ಪದ್ದತಿ, ಮೂಢನಂಬಿಕೆಗಳು ವಲಸೆಗೆ ಹೇಗೆ ಕಾರಣವಾಗುತ್ತದೆ ಮತ್ತು ಬಡಜನರ ಬದುಕು ಈ

ಎಲ್ಲಾ ಅಂಶಗಳಿಂದ ದುರಂತಕ್ಕೆ ಒಳಗಾಗುತ್ತವೆ ಎಂಬ ಸಂಗತಿಗಳನ್ನು ಪರಿಶೀಲಿಸಲಾಗಿದೆ. ಹೀಗೆ ಸಾಹಿತ್ಯದಲ್ಲಿ ಕಾಲ್ಪನಿಕ ಅಂಶ ಬೆರತಿದ್ದರೂ ಕೊಡ ತನ್ನ ಹಳ್ಳಿಯ ಬವಣೆಯನ್ನು ಕಂಡು ಅದೇ ಬರಗಾಲ, ಗುಳೆ ಜಮೀನ್ದಾರರ ವರ್ತನೆಯನ್ನು ಲೇಖಕರು ಕಂಡುಂಡ ಸತ್ಯವನ್ನು ಬರಗಾಲ ಕಥನವಾಗಿರಿಸಿದರೆ ಅದು ಸಮಾಜದ ಅಧ್ಯಯನವಲ್ಲವೇ? ಇಂತಹ ಸಾಕಷ್ಟು ವಾಗ್ವಾದಗಳನ್ನು ಇಟ್ಟುಕೊಂಡೆ ಸಾಹಿತ್ಯ ಏಕಕಾಲಕ್ಕೆ ಸಮಾಜಶಾಸ್ತ್ರ ಸಮುದಾಯ ಅಧ್ಯಯನಗಳನ್ನು ಸರಳ ಸುಂದರ ಕಥನವಾಗಿ ಅಭಿವ್ಯಕ್ತಿಸುವ ಪರಿ ಕಣ್ಣಿಗೆ ಕಟ್ಟುವಂತೆ ಅದನ್ನು ವರ್ಣಿಸುವ ಪರಿ ಅಪ್ಯಾಯಮಾನವಾಗಿದೆ.

ಹಾಗೆಯೆ ಧಾರ್ಮಿಕವಾಗಿ ನೋಡುವುದಾದರೆ ಧರ್ಮ ಧರ್ಮಗಳಲ್ಲಿ ನಡೆಯುವ ಸಂಘರ್ಷ ಗಳನ್ನು ಅದರಿಂದ ಉಂಟಾಗುವ ಪರಿಣಾಮಗಳನ್ನು ಅನೇಕ ವಾಗ್ವಾದಗಳ ಮೂಲಕ ಚಿತ್ರಿಸುತ್ತದೆ. ಉದಾಹರಣೆಗೆ ಇಲ್ಲಿ ಬರುವ ಸಾರ್ಥ, ಸ್ವಪ್ನ ಸಾರಸ್ವತ, ಯಾದ್ ವಶೇಮ್ ದಂತಹ ಕಾದಂಬರಿಗಳಲ್ಲಿ ಧಾರ್ಮಿಕ ಸಂಘರ್ಷಗಳ ಪರಿಣಾಮವನ್ನು ಚಿತ್ರಿಸುತ್ತದೆ. ಅಂದರೆ ಇಲ್ಲಿ ಸಾರಸ್ವತರ ವಲಸೆಗೆ ರಾಜಕೀಯ ಸ್ಥಿತ್ಯಂತರ ಎಷ್ಟು ಕಾರಣವೂ ಅಷ್ಟೆ ಕಾರಣ ಧಾರ್ಮಿಕ ನಂಬಿಕೆಗಳು ಸಹ, ಜೀವ ಬೇಕಾದರೆ ತೊರೆಯಲು ಸಿದ್ದವಿದ್ದರೂ, ತಮ್ಮ ಧರ್ಮ ಬಿಟ್ಟು ಮತ್ತೊಂದು ಧರ್ಮಕ್ಕೆ ಮತಾಂತರ ಹೊಂದಲು ಒಪ್ಪದೇ ಸಾರಸ್ವತರು ವಲಸೆ ಬರುವ ಘಟನೆ ಧರ್ಮದ ಪ್ರಾಮುಖ್ಯತೆಯನ್ನು ಇಲ್ಲಿ ತಿಳಿಸುತ್ತದೆ. ಆಳುಮಗ ಕಾದಂಬರಿಯಲ್ಲಿ ಬರಗಾಲದ ಸ್ಥಿತಿಗೆ ಹಸಿವಿನಿಂದ ಸತ್ತು ಜೀವ ಉಳಿಸಿ ಕೊಳ್ಳಲು ಹಾಕಿದ ಜನಿವಾರವನ್ನು ಬಿಚ್ಚಿಟ್ಟು ಪ್ರಾಣಿ, ಹುಳಗಳನ್ನು ತಿಂದು ಬದುಕುವ ಮೂಲಕ ಧರ್ಮಕ್ಕಿಂತ ಹಸಿವೆ ದೊಡ್ಡದು ಎಂಬ ಅಂಶ ಕಂಡು ಬರುತ್ತದೆ.

ಸಾರ್ಥ ಕಾದಂಬರಿಯಲ್ಲಿ ಬೌದ್ಧ ಮತು ವೈಷ್ಣವ ಧರ್ಮಕ್ಕಿದ್ದ ಪೈಪೋಟಿಯನ್ನು ಕತೆ ಹಲವು ವಾಗ್ವಾದಗಳ ಮೂಲಕ ದಾಖಲಿಸುತ್ತದೆ. ಅದರಲ್ಲೂ ಸಾರ್ಥ ಜನರು ಸಾರ್ಥದ ಉದ್ದೇಶಕ್ಕಾಗಿ ವಲಸೆ ಹೋದ ಅಷ್ಟೂ ಜಾತಿಯ ಜನರಿಗೂ ಅವರವರ ಧರ್ಮದ ಜನರನ್ನೇ ಅಡುಗೆ ಭಟ್ಟರ ನ್ನಾಗಿ ಕರೆದುಕೊಂಡು ಹೋಗುತ್ತಿದ್ದ ಸ್ಥಿತಿಯಿತ್ತು. ಜೊತೆಗೆ ರಾಜಕೀಯದಲ್ಲಿ ಧರ್ಮವೂ ಸೇರಿಕೊಂಡ ಅಂದಿನ ಧಾರ್ಮಿಕ ಸ್ಥಿತಿಗತಿಯನ್ನು ಸಾರ್ಥ ಹೇಳುತ್ತದೆ. ಬೇರಿಂದ ಫಲಕ್ಕೆ ಕಾದಂಬರಿಯಲ್ಲಿ ಧರ್ಮದ ನಂಬಿಕೆ ಉಳಿಸಿಕೊಳ್ಳಲು ನಾಲ್ಕು ಬ್ರಾಹ್ಮಣ ಕುಟುಂಬಗಳು ವಲಸೆ ಹೋಗುತ್ತವೆ. ಹೀಗೆ ಧರ್ಮ ಮಾನವನ ಬದುಕಿನಲ್ಲಿ ಒಂದು ಭಾಗವಾಗಿ ಜೀವಕ್ಕಿಂತ ಹೆಚ್ಚಾಗಿ ತನ್ನ ಪಾತ್ರವನ್ನು ವಹಿಸುತ್ತದೆ. ಹಾಗೆಯೆ ತಮ್ಮ ತಮ್ಮ ಜನಾಂಗಗಳ ಬೇಕು ಬೇಡಗಳಿಗೆ ಧರ್ಮವನ್ನು ಬಳಸಿಕೊಂಡು ಹಲವು ಷರತ್ತು ವಿಧಿ ವಿನಿಯೋಗಗಳ ಮೂಲಕ ಮನುಷ್ಯರನ್ನು ಮಾನಸಿಕವಾಗಿ ಕಟ್ಟಿ ಹಾಕುವ ಸ್ಥಿತಿ ಸ್ವಪ್ನ ಸಾರಸ್ವತ, ಸಾರ್ಥದಂತಹ ಚಾರಿತ್ರಿಕ ಕಾದಂಬರಿಗಳು ವಿವರಿಸುತ್ತವೆ.

ಆರ್ಥಿಕತೆ ಇಂದಿನ ಮಾನವನ ವಲಸೆಗೆ ಪ್ರಮುಖ ಕಾರಣವಾಗಿದೆ. ಆರ್ಥಿಕ ಸಬಲತೆಗಾಗಿ ಮತ್ತು ಅವಶ್ಯಕತೆಗಾಗಿ ವಲಸೆ ಹೋಗಲೇಬೇಕಾದ ಸ್ಥಿತಿ ಇದೆ, ಇಂತಹ ಅಂಶಗಳನ್ನು ಲೇಖಕರು ಕಥನಗಳಲ್ಲಿ ಚಿತ್ರಿಸುವ ಮೂಲಕ ಆರ್ಥಿಕತೆಯ ಪ್ರಾಮುಖ್ಯತೆಯನ್ನು ತಿಳಿಸುತ್ತಾರೆ

ಸ್ವಪ್ನ ಸಾರಸ್ವತದಲ್ಲಿ ಪೋರ್ಚುಗೀಸರು ವ್ಯಾಪಾರಕ್ಕಾಗಿ ಭಾರತಕ್ಕೆ ವಲಸೆ ಬಂದದ್ದು ಸಹ ಭಾರತದಲ್ಲಿನ ಅಪಾರ ಸಂಪತ್ತು ನೋಡಿಯೇ. ದರಿದ್ರರು ಕಾದಂಬರಿಯಲ್ಲಿ ಹಣ ಗಳಿಕೆಗಾಗಿಯೇ ಕೊಲೆ, ದರೋಡೆಕಾರರಾಗಿ ಬದುಕು ನಡೆಸುವ ಸ್ಥಿತಿ ಇದೆ. ಮತ್ತು ಪಾಶ್ಚಾತ್ಯರ ಆಕ್ರಮಣ, ದಾಳಿ ಎಲ್ಲವೂ ಹಣಕ್ಕಾಗಿ ಎಂಬ ಸಂಗತಿಯನ್ನು ಲೇಖಕರು ಸೂಕ್ಷ್ಮವಾಗಿ ತೆರೆದಿಡುತ್ತಾರೆ. ಭೂಮಿ ಮತ್ತು ಬೀಜ, ನಿತ್ಯ ನರಳುವ ಮಂದಿ, ಮಾರಿಕೊಂಡವರು, ಕತೆಗಳಲ್ಲಿ ಬಡತನ ಪ್ರಾಕೃತಿಕ ವೈಪರೀತ್ಯದಿಂದ ತಮ್ಮಲ್ಲಿದ್ದ ಆಸ್ತಿಯೆಲ್ಲವನ್ನು ಕಳೆದುಕೊಂಡು ನಿರಾಶ್ರಿತರಾದಾಗ ವಲಸೆ ಬರುತ್ತಾರೆ, ಡಾಲರ್ ಸೊಸೆ, ಬೇರು ಕಾದಂಬರಿಗಳಲ್ಲಿ ಇಂದಿನ ಜಾಗತೀಕರಣದ ಪರಿಣಾಮವಾಗಿ ಆರ್ಥಿಕ ಗಳಿಕೆಗೆ ಆಮೀಷಗಳಿಗೆ ಬಲಿಯಾಗುವ ಜನರು ವಿದೇಶಗಳಿಗೆ ಆಸ್ತಿಗಳಿಗೆ ವಲಸೆ ಹೋಗುತ್ತಿರುವ ಮತ್ತು ಇದರಿಂದ ಮಾನವೀಯ ಮೌಲ್ಯ ಸಂಬಂಧಗಳು ಹಾಳಾಗುವುದರ ಜೊತೆಗೆ ಮನುಷ್ಯರು ದುರಾಸೆಗೆ ಒಳಗಾಗುವ ಸ್ಥಿತಿಯನ್ನು ಹೇಳುತ್ತದೆ. ಇತ್ತೀಚಿನ ದಿನಗಳಲ್ಲಂತೂ ರಾಜಕೀಯವಾಗಿ ಆಡಳಿತದಲ್ಲಿರುವ ಅಧಿಕಾರಿಗಳು ಹಲವಾರು ಯೋಜನೆಗಳನ್ನು ದುರುಪಯೋಗ ಪಡಿಸಿಕೊಂಡು ಜನರನ್ನು ಇನ್ನಷ್ಟು ಕೆಳಮಟ್ಟಕ್ಕೆ ತಳ್ಳುತ್ತಾರೆ. ಶೋಷಣೆಯನ್ನು, ಅಧಿಕಾರದ ದುರ್ಬಳಕೆಯನ್ನು, ಹಣದ ವ್ಯಾಮೋಹವನ್ನು ದರಿದ್ರರು, ದ್ವೀಪ, ಒಡ್ಡು, ಮುಳುಗಡೆ ಕಾದಂಬರಿಗಳಲ್ಲಿ ಲೇಖಕರು ಚಿತ್ರಿಸುವುದರ ಜೊತೆಗೆ ಇಂದಿನ ಸರ್ಕಾರಿ ಯೋಜನೆಗಳ ವಿಫಲತೆಯನ್ನು ಹೇಳುವ ಮೂಲಕ ಜನರಿಗೆ ಇದರಿಂದ ಉಂಟಾಗುವ ಪರಿಣಾಮವನ್ನು ತಿಳಿಸುತ್ತಾರೆ. ಒಟ್ಟಾರೆ ಆರ್ಥಿಕತೆಯ ಸ್ಥಿತಿಗತಿ ಯನ್ನು ಸಾಹಿತ್ಯದಲ್ಲಿ ಅಭಿವ್ಯಕ್ತಿಸುವ ಮೂಲಕ ಆರ್ಥಿಕತೆ ಪರಿಣಾಮವನ್ನು ವಲಸೆಗೆ ಕಾರಣವಾಗುವ ಸಂದಿಗ್ಧತೆಯನ್ನು ಲೇಖಕರು ಪರಿಚಯಿಸುತ್ತಾರೆ.

ಶೈಕ್ಷಣಿಕವಾಗಿ ನೋಡುವುದಾದರೆ ಉನ್ನತ ಶಿಕ್ಷಣದ ಅವಶ್ಯಕತೆಗಾಗಿ ಮತ್ತು ಅನಿವಾರ್ಯತೆಗಾಗಿ ಇತ್ತೀಚಿನ ಯುವಕ ಯುವತಿಯರು ಹಳ್ಳಿಯಿಂದ ನಗರಗಳಿಗೆ, ದೇಶದಿಂದ ವಿದೇಶಕ್ಕೆ ವಲಸೆ ಹೋಗುತ್ತಿರುವ ಸಂದಿಗ್ಧತೆಯನ್ನು ತ್ರಿಶಂಕು, ಕ್ಷಿತಿಜ, ಮರಳಿ ಮಣ್ಣಿಗೆ ಕಾದಂಬರಿಗಳು ಚಿತ್ರಿಸುತ್ತವೆ. ಹಳ್ಳಿಯಿಂದ ನಗರಕ್ಕೆ ಹೋದವರು ಶಿಕ್ಷಣದ ಜೊತೆಗೆ ಉದ್ಯೋಗವನ್ನು ಮಾಡುತ್ತಾ ತಮ್ಮ ಬಡತನವನ್ನು ನೀಗಿಸಿಕೊಂಡರೆ, ಇನ್ನು ಕೆಲವರು ಹಳ್ಳಿಯ ಸುಸಂಸ್ಕೃತ ಬದುಕನ್ನು ಮರೆತು ಕೆಟ್ಟಚಟಗಳಿಗೆ ಬಲಿಯಾಗಿ ತಮ್ಮ ಬದುಕನ್ನೇ ನಾಶ ಮಾಡಿಕೊಳ್ಳುತ್ತಾರೆ. ಹಾಗೂ ಸ್ವದೇಶದಿಂದ ವಿದೇಶಕ್ಕೆ ಹೋದವರ ಸ್ಥಿತಿಯಂತೂ ಭಿನ್ನ ಪರಿಸರ, ಭಿನ್ನ ಸಂಸ್ಕೃತಿ, ಭಿನ್ನ ಜನರ ನಡಳಿಕೆಗೆ

ಒಳಗಾಗುವ ಸ್ಥಿತಿಯನ್ನು ಲೇಖಕರು ತ್ರಿಶಂಕು, ಕ್ಷಿತಿಜ, ಕಾದಂಬರಿಗಳಲ್ಲಿ ಹೇಳುತ್ತಾರೆ. ಅದರಲ್ಲೂ ಬ್ರಿಟಿಷರ ಆಧುನಿಕ ಶಿಕ್ಷಣ ಪದ್ದತಿಗೆ ಬ್ರಾಹ್ಮಣರು ಸಹ ತಮ್ಮ ನಂಬಿಕೆ ಸಂಪ್ರದಾಯವನ್ನು ತೊರೆದು ತಮ್ಮ ಮಕ್ಕಳನ್ನು ನಗರಕ್ಕೆ ಕಳುಹಿಸಿ ಓದಿಸುವ ಸ್ಥಿತಿ ಕಾದಂಬರಿಯಲ್ಲಿ ಶೈಕ್ಷಣಿಕ ಸ್ಥಿತಿಗತಿಯನ್ನು ಮತ್ತು ಶಿಕ್ಷಣಕ್ಕಾಗಿಯೇ ವಲಸೆ ಹೊರಡುವ ಸಂದರ್ಭವನ್ನು ತಿಳಿಸುತ್ತದೆ.

ಸಾಹಿತ್ಯಿಕವಾಗಿ ಈ ಅಂಶ ವಿಸ್ತರಿಸುವುದಾದರೆ ಕೆಟ್ಟು ಪಟ್ಟಣ ಸೇರು ಎಂಬ ಗಾದೆ ಮಾತಿಗೆ ಇಲ್ಲಿರುವ ನೆಲೆ–ಬೆಲೆಗಳೇನು ಎಂಬುದು ಕೂಡ ಚರ್ಚಾರ್ಹವೇ ಇಂತಹ ಹಲವಾರು ವಾಗ್ವಾದಗಳನ್ನು ತನ್ನಲ್ಲಿರಿಸಿಕೊಂಡು ವಲಸೆ ಸಾಂಸ್ಕೃತಿಕ ಸಂಕಥನವಾಗಿದೆ. ಒಟ್ಟಾರೆಯಾಗಿ ಕಥನ ಸಾಹಿತ್ಯ ಚಾರಿತ್ರಿಕ ಸಂದರ್ಭ/ರಾಜಕೀಯ ಸ್ಥಿತಿಗತಿ/ಸಾಮಾಜಿಕ ಪರಿಸ್ಥಿತಿ/ಧಾರ್ಮಿಕ ಸಂಘರ್ಷ/ ಶೈಕ್ಷಣಿಕ ಚಟುವಟಿಕೆ ಹೀಗೆ ಹಲವು ಜ್ಞಾನಶಿಸ್ತುಗಳನ್ನು ಅನುಸಂಧಾನ ಮಾಡಿಕೊಂಡು ವಲಸೆಗೆ ಈ ಎಲ್ಲಾ ಅಂಶಗಳೂ ಹೇಗೆ ಕಾರಣಿಭೂತವಾಗಿವೆ. ಮತ್ತು ಯಾವ ರೀತಿ ಪರಿಣಾಮ ಬೀರಿದೆ ಎಂಬುದನ್ನು ಅಭಿವ್ಯಕ್ತಿಸುವ ಕ್ರಮವೆನ್ನಬಹುದಾಗಿದೆ.

# ಪರಾಮರ್ಶನ ಗ್ರಂಥಗಳು

**ಅ. ಪ್ರಾಥಮಿಕ ಆಕರ**


೧. ಇನಾಂದಾರ್ ವಿ.ಎಂ., ತ್ರಿಶಂಕು, ೧೯೯೩, ಗೀತಾಬುಕ್ ಹೌಸ್, ಮೈಸೂರು.

೨. ಗಣೇಶಯ್ಯ ಕೆ.ಎನ್., ಶಿಲಾಕುಲ ವಲಸೆ, ೨೦೧೪, ಅಂಕಿತ ಪುಸ್ತಕ, ಬೆಂಗಳೂರು.

೩. ಗೀತಾ ನಾಗಭೂಷಣ, ಕ್ಯಾದಿಗಿ ಬನದಾಗ ಕತೆಯಾಗಿ ನಿಂತವರು, ೨೦೦೬, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

೪. ಗಿರಡ್ಡಿ ಗೋವಿಂದರಾಜು.(ಸಂ), ಶತಮಾನದ ಸಂಕಲನಗಳು, (ಕಥಾಸಂಕಲನ) ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೫. ಗುರುರಾಜ ಕಾಗಿನೆಲೆ, ಬಿಳಿಯ ಚಾದರ, ೨೦೦೭, ಮನೋಹರ ಗ್ರಂಥಮಾಲಾ, ಧಾರವಾಡ.

೬. ಗುರುಪ್ರಸಾದ್ ಡಿ.ವಿ., ಬೇರು, ೨೦೦೩, ಅಭಿಮಾನಿ ಪಬ್ಲಿಕೇಷನ್, ಬೆಂಗಳೂರು.

೭. ಗೋಪಾಲಕೃಷ್ಣ ಪೈ, ಸ್ವಪ್ನ ಸಾರಸ್ವತ, ೨೦೧೨, ಭಾಗಲಕ್ಷ್ಮಿ ಪ್ರಕಾಶನ, ಬೆಂಗಳೂರು,

೮. ಚದುರಂಗ, ಹೆಜ್ಜಾಲ, ಚದುರಂಗರ ಸಮಗ್ರ ಕಾದಂಬರಿಗಳು(ಸಂಪುಟ–೨), ೨೦೦೪, ಅಭಿರುಚಿ ಪ್ರಕಾಶನ ಮೈಸೂರು

೯. ಡಿಸೋಜ ನಾ., ಮುಳುಗಡೆ, ೨೦೧೧, ರವೀಂದ್ರ ಪುಸ್ತಕಾಲಯ, ಶಿವಮಗ್ಗ.

೧೦. ಡಿಸೋಜ ನಾ., ದ್ವೀಪ, ೨೦೦೪, ರವೀಂದ್ರ ಪುಸ್ತಕಾಲಯ, ಶಿವಮೊಗ್ಗ.

೧೧. ಡಿಸೋಜ ನಾ., ಒಡ್ಡು, ೨೦೧೨, ಹೇಮಂತ ಸಾಹಿತ್ಯ, ಬೆಂಗಳೂರು.

೧೨. ಡಿಸೋಜ ನಾ., ಗುಣವಂತೆ, ೨೦೧೨, ಹೇಮಂತ ಸಾಹಿತ್ಯ, ಬೆಂಗಳೂರು.

೧೩. ಡಿಸೋಜ ನಾ., ಕೊಳಗ, ೨೦೦೧, ಗೀತಾ ಬುಕ್ ಹೌಸ್, ಮೈಸೂರು.

೧೪. ನಾಗತೀಹಳ್ಳಿ ಚಂದ್ರಶೇಖರ, ವಲಸೆ ಹಕ್ಕಿಯ ಹಾಡು, ೧೯೯೫, ಅಭಿವ್ಯಕ್ತಿ ಸಂಸ್ಕೃತಿ ವೇದಿಕೆ, ಬೆಂಗಳೂರು.

೧೫. ನೀಳಾದೇವಿ, ಬೇರಿಂದ ಫಲಕ್ಕೆ, ೧೯೯೯, ಹೇಮಂತ ಸಾಹಿತ್ಯ, ಬೆಂಗಳೂರು.

೧೬. ನೇಮಿಚಂದ್ರ, ಯಾದ್ ವಶೇಮ್, ೨೦೦೭, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೭. ಬಸವರಾಜ ಕಟ್ಟಿಮನಿ, ಜ್ವಾಲಮುಖಿಯ ಮೇಲೆ, ೨೦೦೬, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೧೮. ಬೆನಕನಹಳ್ಳಿ ಜಿ.ನಾಯಕ, ವಲಸೆ, ೧೯೮೩, ಪೂರ್ಣಿಮಾ ಪ್ರಕಾಶನ, ಬೆಂಗಳೂರು

೧೯. ಬೆಸಗರಹಳ್ಳಿ ರಾಮಣ್ಣ, ಕೊಳಲು ಮತ್ತು ಖಡ್ಗ(ಕಥಾ ಸಂಕಲನ), ೧೯೯೮, ಕನ್ನಡ ಸಂಘ ಕ್ರೈಸ್ಟ್ ಕಾಲೇಜು,ಬೆಂಗಳೂರು.

೨೦. ಭೈರಪ್ಪ ಎಸ್.ಎಲ್., ಸಾರ್ಥ, ೧೯೯೮, ಸಾಹಿತ್ಯ ಭಂಡಾರದ ಪ್ರಕಾಶನ, ಬೆಂಗಳೂರು.

೨೧. ಮುಗಳಿ ರಂ.ಶ್ರೀ, ಅನ್ನ, ೨೦೦೯, ಹೇಮಂತ ಪ್ರಕಾಶನ, ಬೆಂಗಳೂರು.

೨೨. ರಾವ್ ಕೆ.ವಿ., ದರಿದ್ರರು, ೨೦೦೯, ಅಪರಂಜಿ ಪ್ರಕಾಶನ, ಚಿಕ್ಕಮಂಗಳೂರು.

೨೩. ಶಾಂತಿನಾಥ ದೇಸಾಯಿ, ಬೀಜ, ೨೦೦೨, ಸಪ್ನ ಬುಕ್‌ಹೌಸ್, ಬೆಂಗಳೂರು.

೨೪. ಶಾಂತಿನಾಥ ದೇಸಾಯಿ(ಸಂ), ಶಾಂತಿನಾಥದೇಸಾಯಿ ಅವರ ಆಯ್ದ ಕಥೆಗಳು,(ಕಥಾಸಂಕಲನ) ೨೦೦೬, ಅಕ್ಷರ ಪ್ರಕಾಶನ, ಹೆಗ್ಗೋಡು.

೨೫. ಶಿವರಾಮ ಕಾರಂತ, ಮರಳಿ ಮಣ್ಣಿಗೆ, ೨೦೦೫, ಸಪ್ನ ಬುಕ್‌ಹೌಸ್, ಬೆಂಗಳೂರು.

೨೬. ಶಿವರಾಮ ಕಾರಂತ, ಚಿಗುರಿದ ಕನಸು, ೨೦೦೭, ಸಪ್ನ ಬುಕ್‌ಹೌಸ್, ಬೆಂಗಳೂರು.

೨೭. ಶ್ರೀನಿವಾಸ ವೈದ್ಯ, ಹಳ್ಳ ಬಂತು ಹಳ್ಳ, ೨೦೦೭, ಮನೋಹರ, ಗ್ರಂಥ ಮಾಲಾ, ಧಾರವಾಡ.

೨೮. ಶ್ರೀನಿವಾಸ, ಸುಬ್ಬಣ್ಣ, ೨೦೦೪, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು.

೨೯. ಶ್ರೀನಿವಾಸ, ಚೆನ್ನಮ್ಮ(ಸಣ್ಣ ಕತೆಗಳು ಸಂಪುಟ ೪), ೨೦೦೮, ಮಾಸ್ತಿ ವೆಂಕಟೇಶ ಅಯ್ಯಂಗರ್, ಬೆಂಗಳೂರು.

೩೦. ಸುಧಾಮೂರ್ತಿ, ಡಾಲರ್ ಸೊಸೆ, ೨೦೦೮, ಸಪ್ನ ಬುಕ್‌ಹೌಸ್, ಬೆಂಗಳೂರು.

೩೧. ಸುಮತೀಂದ್ರ ನಾಡಿಗ, ಬೇರು ಬಿಟ್ಟವನು, ೨೦೦೯, (ಸಮಗ್ರ ಸಣ್ಣ ಕತೆಗಳು ಭಾಗ ೧), ಸಪ್ನ ಬುಕ್‌ಹೌಸ್, ಬೆಂಗಳೂರು

೩೨. ಸುಮತೀಂದ್ರ ನಾಡಿಗ, ವಿಫಲತೆ, ೨೦೦೯, (ಸಮಗ್ರ ಸಣ್ಣ ಕತೆಗಳು ಭಾಗ ೧), ಸಪ್ನ ಬುಕ್‌ಹೌಸ್, ಬೆಂಗಳೂರು.

## ಆ. ಆನುಷಂಗಿಕ ಆಕರಗಳು

### ಕೃತಿಗಳು

೧. ಅಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ ಕಾದಂಬರಿ, ೨೦೦೬, ಸಪ್ನ ಬುಕ್‌ಹೌಸ್, ಬೆಂಗಳೂರು.

೨. ಅಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ೨೦೦೩, ಪ್ರೀಯದರ್ಶಿನಿ, ಪ್ರಕಾಶನ, ಬೆಂಗಳೂರು.

೩. ಕಾರಂತ ಪ್ರಪಂಚ ಅಭಿನಂದನ ಗ್ರಂಥ, ೧೯೬೯, ಗೀತಾ ಬುಕ್‌ಹೌಸ್, ಮೈಸೂರು,

೪. ಕೇಶವ ಪ್ರಸಾದ್ ಕೆ,(ಅನು)ಮಲೆಮಾದೇಶ್ವರ, ೧೯೯೭, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ೫.ಖಂಡೋಬಾ ಪಿ.ಕೆ., ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ೨೦೦೧, ಒಂದು ಸಾಂಸ್ಕೃತಿಕ ಅಧ್ಯಯನ

೬. ಗಿರಿಡ್ಡಿ ಗೋವಿಂದರಾಜು, ಶತಮಾನ ಸಂಕಲನ, ೨೦೧೧,ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,

೭. ಗಿರೀಶ್ ಕಾರ್ನಾಡ, ಸಮಗ್ರ ನಾಟಕ, ೨೦೦೭, ಮನೋಹರ ಗ್ರಂಥಮಾಲೆ, ಧಾರವಾಡ

೮. ಚನ್ನಬಸವ ಹಿರೇಮಠ, ವಿರಾಟಪರ್ವ ಸಂಗ್ರಹ, ೨೦೦೪, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೯. ಜಾಕೋಬ್ ಲೋಬೊ ಸಿ. ಹೆಚ್.(ಸಂ), ನಾ.ಡಿಸೋಜ ಅಭಿನಂದನ, ಆಶೀರ್ವಾದ, ಬೆಂಗಳೂರು, ೧೯೯೩,

೧೦. ಜಾನಕಿ.ಎ,(ಅನು). ಪ್ರೇಮಚಂದ್, ಗೋದಾನ, ೨೦೦೮, ಭಾರತಿ ಪ್ರಕಾಶನ, ಮೈಸೂರು

೧೧. ತಾರಿಣಿ ಶುಭದಾಯಿನಿ ಆರ್., ಡಯಾಸ್ಪೊರಾ, ೨೦೧೬, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೧೨. ದೌಜಗೌ(ಸಂ), ಬಸವರಾಜ ಕಟ್ಟಿಮನಿ ಬದುಕು ಬರಹ,(ಅಭಿನಂದನ ಗ್ರಂಥ)೧೯೬೯ ಸಿ.ವಿ.ಕೆ., ಗೀತಾಬುಕ್ ಹೌಸ್, ಮೈಸೂರು.

೧೩. ಪ್ರಧಾನ ಗುರುದತ್ತ, ಎಸ್.ಎಲ್.ಭೈರಪ್ಪ ದೇಶಕುಲಕರ್ಣಿ, ನವಕರ್ನಾಟಕ, ಬೆಂಗಳೂರು, ೨೦೦೬

೧೪. ಪ್ರಶಾಂತ್ ಹೆಚ್.ಡಿ(ಸಂ), ಜನಸಮುದಾಯ ಸಂಪುಟ ಕರ್ನಾಟಕ ರಾಜ್ಯಕೋಶ, ೨೦೦೦, ಪ್ರೊ.ನಾವಡ ನಿರ್ದೇಶಕರು ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೫. ಬಸವರಾಜ ಎಲ್., ರಾಘವಾಂಕನ ಸರಳ ಹರಿಶ್ಚಂದ್ರ ಸಾಹಿತ್ಯ, ಸಿ.ವಿ.ಜಿ.ಪಬ್ಲಿಕೇಶನ್, ಬೆಂಗಳೂರು, ೨೦೦೧

೧೬. ಬೆಳ್ಳಿಯಪ್ಪ ಸಿ.ಪಿ., ವಿಕ್ಟೋರಿಯಾ ಗೌರಮ್ಮ, ೨೦೧೩, ಅಂಕಿತ ಪುಸ್ತಕ, ಬೆಂಗಳೂರು.

೧೭. ಬೋರಲಿಂಗಯ್ಯ ಹಿ.ಚಿ(ಸಂ), ಬುಡಕಟ್ಟು ಮಹಾಕಾವ್ಯಮಾಲೆ, ೧೯೯೭, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೮. ಮಂಜುನಾಥ ಬೇವಿನಕಟ್ಟಿ, ಆದಿವಾಸಿ, ೨೦೦೭, ಸಾಹಿತ್ಯ ನಂದನ, ಬೆಂಗಳೂರು.

೧೯. ಮಹೇಶನ್ ಮ., ಜಾಗತೀಕರಣ, ನವಕರ್ನಾಟಕ ಪಬ್ಲಿಕೇಷನ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೦೦೨.

೨೦. ಮಹಾದೇವಯ್ಯ, ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ,೧೯೯೯

೨೧. ಮಾವಿನಕೇರಿ ರಂಗನಾಥನ್(ಸಂ), ಮಾಸ್ತಿ ಸಮಗ್ರ ಸಾಹಿತ್ಯ ಅವಲೋಕನ(ಸಂಪುಟ ೧), ಮಾಸ್ತಿ ವೆಂಕಟೇಶ ಅಯ್ಯಂಗಾರ್ ಟ್ರಸ್ಟ್, ೨೦೧೦.

೨೨. ಮಾವಿನಕೇರಿ ರಂಗನಾಥನ್, ಶ್ರೀನಿವಾಸ ಮಾಸ್ತಿ ಸಂಭಾವನ ಗ್ರಂಥ, ಡಾ.ಮಾಸ್ತಿ ಶತಮಾನೋತ್ಸವ ಸಮಿತಿ, ೧೯೭೨.

೨೩. ಮೋಹನಕೃಷ್ಣ ರೈ,ಕೆ, ವಸಾಹತು ಶಾಹಿ ಮತ್ತು ನಗರೀಕರಣ, ೨೦೦೭, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೪. ರಾಜಪ್ಪ ದಳವಾಯಿ, ಹಕ್ಕಿಪಿಕ್ಕಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨೫. ರಾಜಗೋಪಾಲಚಾರ್ಯ.ಎಂ(ಸಂ),. ನವನೀತ, (ವಿ.ಎಂ. ಇನಾಂದರ ಅಭಿನಂದನ ಗ್ರಂಥ,) ೧೯೮೪, ಗೀತಾ ಬುಕ್ ಹೌಸ್ ಮೈಸೂರು.

೨೬. ರಾಮಣ್ಣ ಆರ್ಹೆಚ್ಚೆ(ಅನು), ತಸ್ಲೀಮಾ ನಸ್ರೀಮ್, ಲಜ್ಜಾ, ೨೦೦೨, ಶೃತಿ ಪ್ರಕಾಶನ, ರಾಯಚೂರು.

೨೭. ಲಂಕೇಶ ಪಿ.(ಅನು), ದೊರೆ ಈಡಿಪಸ್ ಮತ್ತು ಅಂತಿಗೊನೆ, ಸಾಫೋಕ್ಲೀಸ್, ಲಂಕೇಶ ಪ್ರಕಾಶನ, ಬೆಂಗಳೂರು, ೧೯೭೨

೨೮. ಲಕ್ಕಪ್ಪಗೌಡ ಹೆಚ್, ಜೆ, ಸಾಹಿತ್ಯ ಬಹುಮುಖಿ ಚಿಂತನೆ, ೨೦೦೩, ಸಿವಿಜಿ ಪಬ್ಲಿಕೇಶನ್, ಬೆಂಗಳೂರು

೨೯. ವಿದ್ಯಾಶಂಕರ್ ಎಸ್., ಭೀಮಕವಿಯ ಬಸವ ಪುರಾಣ: ಒಂದು ತುಲನಾತ್ಮಕ ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೪.

೩೦. ವಿಶ್ವನಾಥ ಕಾರ್ನಾಡ, ತುಳುವರ ಮುಂಬಯಿ ವಲಸೆ, ೧೯೯೪, ಕನ್ನಡ ವಿಭಾಗ ಮುಂಬಯಿ ವಿಶ್ವವಿದ್ಯಾಲಯ.

೩೧. ವೆಂಕಟಚಲಶಾಸ್ತ್ರೀ ಟಿ.ವಿ.(ಅನು), ಎಸ್.ಜಿ. ನರಸಿಂಹಚಾರ್ಯ(ಭಾಗ೧), ಗಲಿವರನ ದೇಶಸಂಚಾರ, ೨೦೦೮, ವಸಂತ ಪ್ರಕಾಶನ, ಬೆಂಗಳೂರು

೩೨. ಹರಿಶ್ಚಂದ್ರ ದಿಗ್ಯಂಗಿಕರ್, ಕನ್ನಡಿಗರ ಗೋವೆ ವಲಸೆ, ಪೊ.ಎ.ವಿ.ನಾವಡ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ೧೯೯೯.

೩೩. ಹೋನ್ನಯ್ಯ ಸಿ.ಬಿ, ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ, ೨೦೦೯, ಕೆ.ಎನ್, ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಪೂರ ದೊಡ್ಡಿ, ಬೆಂಗಳೂರು.

೩೪. ಶಾಮಲ ಮಾಧವ,(ಅನು) ಮಾರ್ಗರೇಟ್ ಮಿಶೆಲ್, ಗಾನ್‌ವಿತ್ ದ ವಿಂಡ್, ೨೦೦೪, ಅಂಕಿತ ಪುಸ್ತಕ, ಬೆಂಗಳೂರು.

೩೫. ಶಿವರಾಮ ಕಾರಂತ, ಹುಚ್ಚು ಮನಸ್ಸಿನ ಹತ್ತು ಮುಖಗಳು(ಆತ್ಮಕತೆ), ೧೯೯೧, ಅಕ್ಷರ ಪ್ರಕಾಶನ, ಕರ್ನಾಟಕ.

೩೬. ಮಾವಿನಕೆರೆ ರಂಗನಾಥ(ಸಂ), ಶ್ರೀನಿವಾಸ ಮಾಸ್ತಿ ಸಂಭಾವನ ಗ್ರಂಥ, ೧೯೭೨, ಡಾ. ಮಾಸ್ತಿ ಶತಮಾನೋತ್ಸವ ಸಮಿತಿ.

**ದಿನಪತ್ರಿಕೆಗಳು**

೧. ಕೃಷ್ಣ ಎನ್., ಲಮಾಣಿ– ಕೆಲ್ಸ ಕೊಟ್ಟಿಲ್ಲ ಗುಳೆ ತಪ್ಪಿಲ್ಲ, ವಿಜಯ ಕರ್ನಾಟಕ.

೨. ಚಂದ್ರಬಾನ್ ಪ್ರಸಾದ್ ಮತ್ತಯ ಮಿಲಿಂದ್‌ಕಾಂಬ್ಳೆ, ಶಹರಗಳಿಗೆ ಹೋಗಿ ಸ್ವತಂತ್ರ್ಯರಾದ ದಲಿತರು– (ವಿ.ಕ. ೧೪–೧೨–೧೩.)

೩. ಚಂದ್ರಪಜಾರಿ ಎಂ., ಅಧಿಕಾರ ವಿಕೇಂದ್ರೀಕರಣ ಅನಿವಾರ್ಯ, (ವಿ.ಕ. ೧೭-೫-೧೩).

೪. ಚಿದಾನಂದ್ ರಾಜಘಟ್ಟ – ವಲಸೆಯ ನಾನಾ ಬಣ್ಣಗಳು, (ವಿ.ಕ., ೧೬-೨-೧೩.)

೫. ತುರುವೀನಾಳ ಚಂದ್ರು – ಮೀಸಲು ಹೋರಾಟದಲಿ ಬಾಂಗ್ಲಾ ವಲಸಿಗರ ಕಣ್ತೆರದಿತೆ ಸರಕಾರ, (ವಿ.ಕ., ೧೬ ಜೂಲೈ ೨೦೧೩.)

೬. ನರೇಂದ್ರ ದೇರ್ಲ, ವಲಸೆಯ ಹಿಂದಿನ ರಾಜಕೀಯ ಮತ್ತು ವಿಕಸನ, (ವಿ.ವಾ., ೧೬-೧-೧೩)

೭. ವಲಸೆಯ ಶೂನ್ಯ ಸಂಪಾದನೆ ಗ್ರಾಮದ ಪರಿಕಲ್ಪನೆ, ಪ್ರ.ವಾ., (೨೬-೧-೧೪, ಸಾಪ್ತಾಹಿಕ ಪುರವಾಣಿ.)

೮. ವಿನಯ ನ., ಜೀವ ವೈವಿಧ್ಯಕ್ಕೆ ಎಳ್ಳು ನೀರು, (ವಿಜಯ ಕರ್ನಾಟಕ.)

೯. ನಾಲ್ಕು ಸಾವಿರ ವರ್ಷದ ಹಿಂದೆಯೇ ಆಸ್ಟ್ರೇಲಿಯಾ ನೆಲದಲ್ಲಿ ನಾವು, (ವಿ.ಕ., ೧೩-೧-೧೪)

**ಅಂಕಣ ಬರಹ**

೧. ಡಿಸೋಜ ನಾ., ಸೇತುವೆ ಬೇಕು ಸೇತುವೆ, ಕೆಂಡ ಸಂಪಿಗೆ, ಡಿಸೆಂಬರ್ ೯-೨೦೧೨.

೨. ಡಿಸೋಜ ನಾ., ಮತ್ತೆ ಮತ್ತೆ ಮುಳುಗಡೆ, ಕೆಂಡ ಸಂಪಿಗೆ, ಜುಲೈ, ೨೦೧೨.

**ಮಾಸಪತ್ರಿಕೆ**

೧. ಸಂಪಾದಕೀಯ, ವಲಸೆ ಮಹಿಳೆಯರ ಸಮಸ್ಯೆಗಳೂ, (ನಮ್ಮ ಮಾನಸ, ಸಂಪುಟ ೫, ಸಂಚಿಕೆ ೫, ೨೦೧೨.)

೨. ಷರೀಪಾ ಕೆ, ಮಹಿಳೆ ಮತ್ತು ಜಾಗತೀಕರಣ, ವಿಚಾರ ಸಾಹಿತ್ಯ, ೨೦೦೭, ಕನ್ನಡ ಸಾಹಿತ್ಯ ಅಕಾಡೆಮಿ.

೩. ಮಂಜುನಾಥ ಬೇವಿನಕಟ್ಟಿ, ಸ್ಥಳ ಪಲ್ಲಟ ವಲಸೆ ಮತ್ತು ಬುಡಕಟ್ಟು ಮೌಖಿಕ ಸಂಕಥನ (ಆದಿವಾಸಿ) ೨೦೦೭, ಸಾಹಿತ್ಯ ನಂದನ ಬೆಂಗಳೂರು.

೪. ನಿರಂಜನ ವಾನಳ್ಳಿ, ನಗರದಲ್ಲಿರಲಾರೆ ಹಳ್ಳಿಗೆ ಹೋಗಲಾರೆ(ಅರಹು ಕುರುಹು ಸಂ.೬, ೧-೩-೧೫.)

೫. ಬಾಲಚಂದ್ರ ಹೆಗ್ಗಡೆ, ಹಳ್ಳಿಯ ಕಷ್ಟಗಳ ನಡುವೆ ಬದುಕು ಇದೆಯೇ?(ಅರಹು ಕುರುಹು, ಸಂ.೬, ೧–೩–೧೫.)

೬. ಸರೋಜ ಪ್ರಭಾಕರ್, ವಲಸೆ, (ತರಂಗ ಪತ್ರಿಕೆ, ೨–೧–೧೪.)

**ವಿಶ್ವಕೋಶಗಳು**

೧. International encyclopaedia of social science-vol-10. 1968

೨. International encyclopaedia of population vol-11, 1982

೩. Encyclopaedia American,vol-19, 1968

೪. International encyclopaedia of britannics vol-18

೫. The oxford Dictionary 2nd ediation vol IX, 1989

